ಆದರೆ, Edgar Thurston ಅವರ Caste and Tribes in Southern India ಎಂಬ ೭ ಸಂಪುಟಗಳಲ್ಲಿ ಎಲ್ಲಿಯೂ ಹಕ್ಕಿಪಿಕ್ಕಿ ಎಂಬ ಶಬ್ದವೇ ಇಲ್ಲ! ಆದರೆ ಅದರ ಬದಲಿಗೆ Shikari ಹಾಗೂ Sikligar ಎಂಬ ಶಬ್ದಗಳು ಸಿಗುತ್ತವೆ. Thurstonನ ಕೈಯಲ್ಲೂ ಸಹ ಸಿಗದ ಈ ಬುಡಕಟ್ಟು ನಿಜಕ್ಕೂ ಒಂದು ನಿಗೂಢವಾದ ಬುಡಕಟ್ಟೇ ಎಂದರೂ ತಪ್ಪಾಗದು. ಇಷ್ಟೊಂದು ಚಲನಶೀಲ ಬುಡಕಟ್ಟನ್ನು ಭೇಟಿಮಾಡಿ ಮಾತನಾಡಿಸಲಾಗಿ, ಇವರಲ್ಲಿ ಕೆಲವರು ನಾವು ಮೂಲತಃ ಗುಜರಾತ್ ರಾಜ್ಯದವರೆಂದು ಹೇಳಿಕೊಂಡರೆ ಕೆಲವರು ಇಲ್ಲ ನಾವು ಮೂಲತಃ ರಾಜಸ್ಥಾನ ರಾಜ್ಯದವರೆಂದು ಹೇಳಿಕೊಳ್ಳುತ್ತಾರೆ.

ರಾಜಪ್ಪ ದಳವಾಯಿ ಅವರ 'ಹಕ್ಕಿಪಕ್ಕಿಯರ ಸಂಸ್ಕೃತಿ' ಎಂಬ ಪುಸ್ತಕದಲ್ಲಿ ಹಾಗೂ ಸಂಶೋಧನಾ ಕಾರ್ಯದಲ್ಲಿ ಕೆಲವು ಹಿರಿಯರು(ವಕ್ತೃ)ಗಳು ಹೇಳಿರುವ ಹಾಗೆ, ಹಕ್ಕಿಪಿಕ್ಕಿಯರು, ನಮ್ಮ ದಾದಾಜಿ(ತಂದೆ)ಗೆ ನಾವು ಒಟ್ಟು ೫ ಜನ ಮಕ್ಕಳು. ಅವರುಗಳೆಂದರೆ, ಲಂಬಾಣಿಗರು, ಜೋಗೋರು, ಬೈಲಕಮ್ಮಾರರು, ಮಾರವಾಡಿಗರು ಮತ್ತು ನಾವುಗಳು. ಮಾರವಾಡಿಗಳು ತಮ್ಮ ಕುಬುದ್ಧಿಯಿಂದ ನಮ್ಮ ಆಸ್ತಿಯನ್ನೆಲ್ಲಾ ಕಿತ್ತುಕೊಂಡು ಬಿಟ್ಟು ಶ್ರೀಮಂತರಾದರು. ನಾವು ನಾಲ್ಕರು ಮಾತ್ರ ಭಿಕಾರಿಗಳಾಗಿ ಬಿಟ್ಟೆವು ಎಂದು ತಮ್ಮ ವ್ಯಥೆಯ ಕಥೆಯನ್ನು ಹೇಳುತ್ತಾರೆ.

ಹಕ್ಕಿಪಿಕ್ಕಿಯರು ರಜಪುತ ವಂಶಕ್ಕೆ ಸೇರಿದವರಾಗಿದ್ದು, ಇವರು ವರ್ಣಾಶ್ರಮ ವ್ಯವಸ್ಥೆಯಲ್ಲಿ ಕ್ಷತ್ರಿಯ ವಂಶಕ್ಕೆ ಸೇರಿದವರಾಗಿದ್ದಾರೆ. ಯಾಕೆಂದರೆ ಹಕ್ಕಿಪಿಕ್ಕಿ ಎಂಬುದರ ಅರ್ಥ ಹಕ್ಕಿಪಕ್ಷಿಗಳನ್ನು ಹಿಡಿದು ಜೀವಿಸುವವರು ಎಂದಾಗಿದೆ. ಮಹಾರಾಷ್ಟ್ರ, ಗುಜರಾತ್, ರಾಜಸ್ಥಾನಗಳಲ್ಲಿ ದೆಹಲಿ, ತಮಿಳುನಾಡಲ್ಲಿ, ಆಂಧ್ರದಲ್ಲಿ ಸಂಬಂಧಿಗಳು ಇದ್ದಾರೆಂದು ಹೇಳುತ್ತಾರೆ.

ಮಹಾರಾಣಾ, ಶಿವಾಜಿ ಮಹಾರಾಜರೆ ನಮ್ಮ ಗುರುಗಳು ಎನ್ನುತ್ತಾರೆ. ಅವರು ಚಾಮುಂಡೇಶ್ವರಿಯನ್ನು ಪೂಜಿಸಿ ಭಕ್ತರಾಗಿ ಕುಲದೇವತೆಯನ್ನಾಗಿ ಮಾಡಿಕೊಳ್ಳುತ್ತಿದ್ದರು. ಅಕ್ಬರ್ ಮತ್ತು ರಾಣಾಪ್ರತಾಪಸಿಂಗರ ಜಗಳದಿಂದಾಗಿ ನಾವು ಈ ಕಡೆ ಕರ್ನಾಟಕಕ್ಕೆ ಬರಬೇಕಾಯಿತು ಎಂದು ಹೇಳುತ್ತಾರೆ. ಅಕ್ಬರ್ ದೇಶವನ್ನೆಲ್ಲಾ ತನ್ನದನ್ನಾಗಿ ಮಾಡಿಕೊಳ್ಳ ಬೇಕೆಂದುಕೊಂಡು ರಾಣಾ ಪ್ರತಾಪನ ನಗರಕ್ಕೆ ಬಂದು ಡೇರೆ ಹಾಕಿದ್ದ. ರಾಣಾ ತನಗೆ ಅತೀ ಸಮೀಪದಲ್ಲಿ ಬಲಗೈ ಭಂಟರಂತಿದ್ದ ಜಂಬಲ್ ಫತೋರಿಗೆ ಕೋಟೆಯ ಉಸ್ತುವಾರಿ ವಹಿಸಿದ. ಜಂಬಲ್ ಫತೋರು ದೇವಿ (ಚಾಮುಂಡಿ) ಬಳಿಗೆ ಹೋಗಿ ಅಮ್ಮ ಚಾಮುಂಡೇಶ್ವರಿ, ಅಕ್ಬರ್ ಬಂದಿದ್ದಾನೆ ಅಂತ ಕೇಳಿಕೊಂಡ ಆಗ ಅಮ್ಮ ಬಂದು ಹುಣಸೆ ಮಾವಿನ ಬೀಜ ಗಳೆರಡನ್ನು ಕೊಟ್ಟಳು. ಇವನ್ನು ಹಾಕಿ ಬೆಳೆಸು ಇವು ಬೆಳೆದು ದೊಡ್ಡವರಾದರೂ ಅಕ್ಬರ್ ನಿನ್ನನ್ನು ಗೆಲ್ಲಲ್ಲಿಕ್ಕಾಗುವದಿಲ್ಲ ಎಂದು ಆಶೀರ್ವದಿಸಿದಳು. ಅದೇ ರೀತಿ ಬೀಜಹಾಕಿ ಬೆಳೆಸಲು ಅಕ್ಬರ್ ಅಲ್ಲಿಂದ ತನ್ನ ಡೇರೆಗಳನ್ನು ಕೀಳಲಿಕ್ಕೆ ಶುರುಮಾಡಿದ. ಅಮ್ಮ ಇನ್ನು ಒಂದು ಮಾತು ಹೇಳಿತು. ಆ ಮಾತೇನೆಂದರೆ, "ಈ ಬಂಗಾರದ ಕುದುರೆ ಹತ್ತು ಇದು ಒಂದು

ಹೊಡೆತಕ್ಕೆ ದೇವಕೊಂಡಕ್ಕೆ ಇನ್ನೊಂದು ಹೊಡೆತಕ್ಕೆ ಸುರಿಸ್‌ಕೊಂಡಕ್ಕೂ ಹೋಗುತ್ತೆ" ಎಂದು ಹೇಳಿಕೊಟ್ಟಿತು. ಆ ಕುದುರೆಯನ್ನೇರಿ ಒಂದು ಹೊಡೆತಕ್ಕೆ ದೇವಕೊಂಡಕ್ಕೆ ಬಂದ. ಅಲ್ಲಿ ಸ್ನಾನ ಮಾಡಿದ, ಇನ್ನೊಂದು ಹೊಡೆತಕ್ಕೆ ಸುರಿಸ್‌ಕೊಂಡಕ್ಕೆ ಹೋದ. ಅಲ್ಲಿ ಬಾಯಿ ತೊಳೆದುಕೊಂಡು ಬೇಡಿಕೊಂಡಾಗ ಸೈನಿಕರ ಬಲಬಂದಿತು. ಆಗ ದೇವಿ ಮತ್ತೇ ಪ್ರತ್ಯಕ್ಷವಾಗಿ ಈ ಒಂದು ಕತ್ತಿ ಕೊಡ್ತೀನಿ ಈ ಕತ್ತಿಗೆ ಅಕ್ಬರನೇ ಸಿಕ್ತಾನೋ ಅಥವಾ ಅವನ ಮಗನೆ ಸಿಕ್ತಾನೋ ಗೊತ್ತಿಲ್ಲ. ಅಂತೇಳಿ ಕತ್ತಿಕೊಟ್ಟು, ಮಾಯವಾಗಿ ಬಿಟ್ಟಿತು. ಆಮೇಲೆ ಜಗಳ ವಾಯಿತು. ಅಕ್ಬರ್ ಸಿಗಲಿಲ್ಲ. ಅವನ ಮಗ ಸಿಕ್ಕುಬಿಟ್ಟ ಆಗ ಅಲ್ಲಿ ರಕ್ತದ ಕೋಡಿಯೇ ಹರಿತಂತೆ. ಅಮ್ಮ ಮುಂಚಿನೆ ಹೇಳಿತು. ಮೊದಲ ರಕ್ತ ನನಗೆ 'ತಗೋ ಅಮ್ಮ' ಅಂತ ಕತ್ತಿಯಿಂದ ಕಾಣಿಸಬೇಕು ಅಂತ. ಈ ಜಗಳದಲ್ಲಿ ಆತ ಅಮ್ಮನಿಗೆ ರಕ್ತ ತೋರಿಸೋದನ್ನು ಮರೆತುಬಿಟ್ಟ, ಬದಲಿಗೆ ರಕ್ತ ತೆಗೆದು ತನ್ನ ಹಣೆಗೆ ಇಟ್ಟುಕೊಂಡ. ಆಗ ದೇವಿ ಅವನಿಗೆ ಶಾಪಕೊಟ್ಟಳು. ನಿನ್ನ ಕತ್ತಿ ನಿನಗೆ ತಿರುಗಲಿ ಎಂದು ಆಗ ಜಂಬಲ್ ಸಾವಿಗೀಡಾದ ಅವನ ಹೆಂಡತಿಯು ಬಂದು ನೋಡಿದಳು. ತನ್ನ ಗಂಡ ಕಾಣಲಿಲ್ಲ. ಆಗ ಅಮ್ಮನಿಗೆ "ನನ್ನ ಗಂಡನ ತಲೆ ತೋರಿಸಿಕೊಟ್ಟರೆ ನಾನು ಸತಿ ಆಗ್ತೀನಿ" ಅಂತ ಬೇಡಿಕೊಂಡಳು. ಆಗ ಮುಂಡ ಎದ್ದು ನಿಂತು ಬಿಟ್ಟಿತು. ಹತ್ತು ನಿಮಿಷ ಆದ ಮೇಲೆ ಕೆಳಗೆ ಬಿದ್ದಿತು. ಆತನ ಮಡದಿ ಕಮುದ ರಾಣಿ ತನ್ನ ಮಗನಿಗೆ 'ಮಗನೇ, ನಿನ್ನ ಅಪ್ಪನ ಜೊತೆ ನಾನು ಸತಿ ಆಗ್ತೀನಿ' ಎಂದು ಗಂಡನೊಂದಿಗೆ ತಾನು ಬೆಂಕಿಗೆ ಬಿದ್ದು ಸತಿಯಾದಳು. ಆಗ ಉಳಿದ ಸಣ್ಣ ಮಕ್ಕಳಾದ ನಾವು ಅಂದರೆ ನಮ್ಮ ಪೂರ್ವಜರಾದ ಲಾಲಿ, ಲೋಧಿರು ಗತಿಯಿಲ್ಲದೆ ಅಲ್ಲಿ ಇಲ್ಲಿ ಬೇಡೋದು, ತಿನ್ನೋದು ಮಾಡುತ್ತಾ ಊರೂರು ಸುತ್ತುತ್ತಾ ಕರ್ನಾಟಕಕ್ಕೆ ಬಂದೇವು ಎಂದು ತಮ್ಮ ಬುಡಕಟ್ಟಿನ ಐತಿಹಾಸಿಕ ಕತೆ ಹೇಳುತ್ತಾರೆ.

ಈ ರೀತಿಯಾಗಿ ಹಕ್ಕಿಪಿಕ್ಕಿ ಬುಡಕಟ್ಟಿನಲ್ಲಿ ಅನೇಕ ಪುರಾಣಕತೆಗಳು, ಐತಿಹ್ಯಗಳು ಚಾಲ್ತಿಯಲ್ಲಿವೆ. ಆದರೆ ಇವುಗಳನ್ನು ಖಚಿತ ಪಡಿಸಲು ಇವರಲ್ಲಿ ಯಾವುದೇ ದಾಖಲೆಗಳಿಲ್ಲ. ಕಂಠಸ್ಥ ಪುರಾಣಗಳಿವೆ.

ಸಾಮಾನ್ಯವಾಗಿ ಈ ಬುಡಕಟ್ಟಿನವರು ಮುಂದುವರೆದ ಸಮಾಜದಲ್ಲಿ ಬಹಳಷ್ಟು ಅಸಡ್ಡೆಗೆ ಒಳಗಾಗಿದ್ದಾರೆ. ಒಂದಾನೊಂದು ಕಾಲದಲ್ಲಿ ಕಾಡಿನರಾಜರಂತೆ ಮೆರೆದ ಈ ಬುಡಕಟ್ಟಿನವರು ಈಗ ಈ ನಾಡಿನಲ್ಲಿ ಬಿಕ್ಷುಕರ ತರಹ ಜೀವನ ಮಾಡುತ್ತಿರುವುದು ನಿಜಕ್ಕೂ ವಿಪರ್ಯಾಸವೇ ಸರಿ. ಬೇರೆ ಜಾತಿಯವರು ಇವರನ್ನು ಪರಕೀಯರಂತೆ ಇಲ್ಲವೇ ಒಂದು ತರಹದ ಕೀಳರಿಮೆಯಿಂದ ನೋಡುವುದರಿಂದ ನಾವು ಈ ಆಧುನಿಕ ಸಮಾಜದವರಲ್ಲ. ನಮಗೂ ಇವರಿಗೂ ಏನೂ ಸಂಬಂಧವಿಲ್ಲ ಎಂದು ಭಾವಿಸಿ ಊರಾಚೆಯ ಸ್ಥಳಗಳಲ್ಲಿಯೇ ವಾಸಿಸುತ್ತಿರುವುದನ್ನು ಈಗಲೂ ಕಾಣಬಹುದಾಗಿದೆ.

**ಸಾಮಾಜಿಕ ಸಂರಚನೆ :** ಹಕ್ಕಿಪಿಕ್ಕಿಯರ ಸಮಾಜವೆಂದರೆ, ಪರಸ್ಪರ ವಿವಿಧ ಬಗೆಯ ಕುಟುಂಬ, ಕುಲ ಸಂಬಂಧವುಳ್ಳ ಜನತೆಯ ಒಂದು ಆಂತರಿಕ ವ್ಯವಸ್ಥೆ. ಇದು ಆದಿಮ

ಕಾಲದಿಂದಲೂ ಬೆಳೆದು ಬಂದಿದೆ. ಯಾವುದೇ ಇತರ ಸಮುದಾಯಗಳ ಪ್ರಭಾವಕ್ಕೆ ಒಳಗಾಗದೇ, ತಮ್ಮ ಸಂಪ್ರದಾಯದಂತೆ ಜೀವನ ನಿರ್ವಹಿಸುವ ಬುಡಕಟ್ಟು ಇದಾಗಿದೆ. ಇಂತಹ ಸಂಘಟನೆಯ ಆದಿಮ ಕಾಲದಿಂದ ಮಾನವನ ದಿನ ನಿತ್ಯದ ಆಹಾರಕ್ಕಾಗಿ ಕಾಡು, ಮೇಡು, ಗುಡ್ಡಗಳನ್ನು ಸುತ್ತಾಡಿ ಪ್ರಾಣಿ, ಪಕ್ಷಿ, ಗೆಡ್ಡೆ ಗೆಣಸುಗಳನ್ನು ತಿನ್ನುತ್ತಾ ಜೀವನ ಸಾಗಿಸುವ ಹಂತದಿಂದ ನಡೆದು ಬಂದಿದ್ದಾನೆ. ಬೇಟೆ ಮತ್ತು ಆಹಾರ ಸಂಗ್ರಹಣೆಯ ಮೂಲಕ ವ್ಯವಸ್ಥಿತವಾಗಿ ಸಂಘಟಿತವಾಗುತ್ತಾ ಒಂದು ಕಡೆಯಿಂದ ಇನ್ನೊಂದು ಕಡೆಗೆ ವಲಸೆ ಹೋಗುತ್ತಾ ಜೀವನ ರೂಪಿಸಿಕೊಂಡು ಬರತೊಡಗಿದ ಸಮಯದಲ್ಲಿ ಅವರು ಶುದ್ಧ ಅಲೆಮಾರಿಗಳಾಗಿದ್ದರು. ಬೇಟೆಯಿಂದ ವ್ಯವಸಾಯಕ್ಕೆ ಮಾರ್ಪಾಡಾದ ನಂತರ ನೆಲೆ ನಿಂತು ಒಟ್ಟಾಗಿ ಬಾಳುವದರೊಂದಿಗೆ ಮೂಲಭೂತವಾದ ಅವಶ್ಯಕತೆಗಳನ್ನು ಪೂರೈಕೆ ಮಾಡಿಕೊಳ್ಳುವದರಿಂದ ತಮ್ಮದೇ ಆದ ಸಾಮಾಜಿಕ ವ್ಯವಸ್ಥೆಯನ್ನು ಕಾಲಾಂತರದಲ್ಲಿ ರೂಪಿಸಿಕೊಂಡರು. ಅವಿಭಕ್ತ ಕುಟುಂಬಗಳು ಕಾಲಾಂತರದಲ್ಲಿ ವಿಭಕ್ತ ಕುಟುಂಬಗಳಾಗಿ ಮಾರ್ಪಡುತ್ತಿವೆ.

ಸುತ್ತಲ ಸಮುದಾಯಗಳ ಒಡನಾಟದಿಂದ ಇವರ ಸಂಪ್ರದಾಯ, ಧಾರ್ಮಿಕತೆ, ಭಾಷೆ, ಆಚರಣೆಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಅಲೆಮಾರಿಗಳಾಗಿದ್ದಾಗ ಡೇರೆಗಳನ್ನು, ಗುಡಿಸಲುಗಳಲ್ಲಿ ವಾಸ ಸ್ಥಳಗಳನ್ನಾಗಿ ಮಾಡಿಕೊಂಡಿದ್ದ ಇವರುಗಳು ನೆಲೆಯೂರಿದ ಮೇಲೆ ಅನಿವಾರ್ಯವಾಗಿ ಮನೆಗಳನ್ನು ಕಟ್ಟಿಕೊಂಡು ನಿರ್ದಿಷ್ಟ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಇನ್ನು ಇವರ ಕಾಲೋನಿಯಲ್ಲಿ ಗುಡಿಸಲು, ಹೆಂಚಿನ ಮನೆಗಳೇ ಹೆಚ್ಚು. ಮಾಳಿಗೆ ಮನೆಗಳು ಕಡಿಮೆ ಎನ್ನಬಹುದು.

ಇಂದು ಹಕ್ಕಿಪಿಕ್ಕಿಯರ ಸಂಪ್ರದಾಯಗಳು ಬಹುವಾಗಿ ಕಣ್ಮರೆಯಾಗುತ್ತಾ ಹೋಗುತ್ತಿವೆ. ಸಂಪ್ರದಾಯಗಳು, ನ್ಯಾಯ ತೀರ್ಮಾನ, ಹಬ್ಬಗಳು, ಆಚರಣೆಗಳು ಸಾಕಷ್ಟು ಮಹತ್ವವನ್ನು ಕಳೆದುಕೊಂಡಿವೆ. ಆದರೂ, ಹಿರಿಯರು ಬಹಳಷ್ಟು ಮಂದಿ ಇನ್ನು ತಮ್ಮ ತಲೆಯ ಮುಡಿಯ ಕೂದಲನ್ನೆತ್ತಿ ತುರುಬು ಕಟ್ಟುವುದನ್ನು ಬಿಡದೆ ಉಳಿಸಿಕೊಂಡು ಬಂದಿರುವುದು ವಿಶೇಷವಾಗಿದೆ.

ಇವರ ಆರಂಭದ ದಿನಗಳಲ್ಲಿ ಬೇಟೆಯಾಡುವುದೇ ಮೂಲ ಕುಲಕಸುಬಾಗಿತ್ತು. ಇವರ ಮೂಲ ಮಧ್ಯಭಾರತದ ವಿಂಧ್ಯ ಪರ್ವತವೆಂತಲೂ ಇವರು ಗುಜರಾತ್, ರಾಜಾಸ್ಥಾನ, ಮಹಾರಾಷ್ಟ್ರ, ಆಂಧ್ರಪ್ರದೇಶ ಮತ್ತು ಕರ್ನಾಟಕಗಳತ್ತ ಬೇಟೆಯನ್ನು ಅರಸುತ್ತಾ ಬಂದವರು. ಅಂದಿನ ಮುಂಬೈ ಸರ್ಕಾರ ಕೆಲವು ಅಲೆಮಾರಿ ಗುಡ್ಡಗಾಡು, ಬೇಟೆಗಾರರನ್ನು ಗುರುತಿಸಿ, ೧೯೨೪ರಲ್ಲಿ ಅಪರಾಧಿ ಬುಡಕಟ್ಟೆಂದು ಪರಿಗಣಿಸಿ ಆ ಕಾಯ್ದೆಯ ಅಡಿಯಲ್ಲಿ ಮೀಸಲಾತಿ ಸೌಲಭ್ಯಗಳನ್ನು ಕಲ್ಪಿಸಿತ್ತು. ೧೯೭೦ರಲ್ಲಿ ಬೆಳಗಾವಿ, ಬಿಜಾಪುರ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಿಗೆ ಸೀಮಿತಗೊಂಡಂತೆ ಪರಿಶಿಷ್ಟ ಪಂಗಡ ಪಟ್ಟಿಯಲ್ಲಿ ದಾಖಲಾದಂತಹುಗಳಲ್ಲಿ ಪಾರ್ಧಿಯರಿದ್ದಾರೆ. ತಮ್ಮ ಪ್ರಾದೇಶಿಕ ಮಿತಿಯನ್ನು ೧೯೭೭ರಲ್ಲಿ ಸಡಿಲಿಸಿಕೊಂಡು ಕರ್ನಾಟಕದಾದ್ಯಂತ ಚದುರಿಕೊಂಡರು. ಪಾರ್ಧಿ ಮತ್ತು ಹಕ್ಕಿಪಿಕ್ಕಿಯರಲ್ಲಿ ಹಲವಾರು ಸಾಮ್ಯತೆಗಳಿವೆ.

ಹಕ್ಕಿಪಿಕ್ಕಿಯರನ್ನು ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ಶಿಕಾರಿಗಳು ಎಂದು ಕರೆಯಲಾಗುವುದು. ಈ ಹೆಸರು ಇವರ ಸಾಂಪ್ರದಾಯಿಕ ಕಸುಬು ಹಕ್ಕಿಗಳನ್ನು ಹಿಡಿಯುವುದರಿಂದ ಬಂದಿರುವಂತಹದ್ದು. ಹಕ್ಕಿಪಿಕ್ಕಿ ಎನ್ನುವದು ಕನ್ನಡ ಭಾಷೆಯ ಜೋಡುನುಡಿ. ಇಲ್ಲಿ 'ಹಕ್ಕಿ' ಎಂದರೆ ಪಕ್ಷಿ; ಎಂತಲೂ ಪಿಕ್ಕಿ ಎಂದರೆ ಅದರ ಪ್ರತಿಧ್ವನಿ ರೂಪವಾಗಿದೆ. ಕನ್ನಡ ಕನ್ನಡ ನಿಘಂಟಿನ ಕರ್ತೃರಾದ ಫರ್ಡಿನಾಂಡ್ ಕಿಟೆಲ್ ತನ್ನ ನಿಘಂಟಿನಲ್ಲಿ ಹಕ್ಕಿಯನ್ನು ಹಕ್ಕಿ ಎಂಬ ಅರ್ಥದಿಂದ ಹಿಕ್ಕು ಹಿಡಿ, ಹಿಕ್ಕು ಪಿಕ್ಕು ಎಂದೆಲ್ಲಾ ನಿಷ್ಪನ್ನವಾಗಿದೆ ಎಂದು ಹೇಳುವರು. ಇವರು ಮೂಲತಃ ರಾಜಸ್ಥಾನ, ಗುಜರಾತ ಮೂಲದಿಂದ ಆಂಧ್ರ ಪ್ರದೇಶದ ಮಾರ್ಗವಾಗಿ ಕರ್ನಾಟಕಕ್ಕೆ ವಲಸೆ ಬಂದು ನೆಲೆಸಿಂತವರು.

ಭಾರತದ ಹರಿಜನ ಗಿರಿಜನ ಅಭಿವೃದ್ಧಿ ಯೋಜನೆಯನ್ವಯ (ಟಿಎಸ್‌ಪಿ) ೧೯೫೪ರಲ್ಲಿ ಹುಣಸೂರು ತಾಲುಕಿನ ಪಕ್ಷಿರಾಜಪುರದಲ್ಲಿ ಇವರಲ್ಲಿಯ ಹಲವರನ್ನು ನೆಲೆಸಿಲ್ಲಿಸಲಾಯಿತು. ೧೯೫೬ರ ಭಾಷಾವಾರು ಪ್ರಾಂತರಚನೆಯ ನಂತರ ಮೈಸೂರು ರಾಜ್ಯ ಘೋಷಿತ ಪರಿಷ್ಕೃತ ಪಟ್ಟಿಯಲ್ಲಿ ಹಕ್ಕಿಪಿಕ್ಕಿ ಬುಡಕಟ್ಟನ್ನು ಹಳೆ ಮೈಸೂರು ರಾಜ್ಯದ ಜಿಲ್ಲೆಗಳಲ್ಲಿ ಮಾತ್ರ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಪ್ರಪ್ರಥಮವಾಗಿ ಸೇರಿಸಲಾಯಿತು.

೧೯೭೧ರ ಜನಗಣತಿಯ ಪ್ರಕಾರ ಇವರ ಜನಸಂಖ್ಯೆ ಬೆಂಗಳೂರು, ದಾವಣಗೆರೆ ಚಿಕ್ಕಮಗಳೂರು, ತುಮಕೂರು, ಹಾಸನ, ಕೋಲಾರ, ಮಂಡ್ಯ, ಮೈಸೂರು ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸೀಮಿತಗೊಂಡಂತೆ ೨,೫೬೧ ಇರುವುದು, ೧೯೮೧ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ ಇವರ ಜನಸಂಖ್ಯೆ ೩,೩೮೧ ದಾಖಲಾಗಿದೆ. ಅದರಲ್ಲಿ ಶೇ ೧೬.೨೮ರಷ್ಟು ನಗರವಾಸಿಗಳಾಗಿದ್ದಾರೆ. ಇವರ ಮಾತೃಭಾಷೆ ವಾಘರಿ ಯಾಗಿರುವುದು. ಇವರು ಇತರ ರಾಜ್ಯದ ಜನರೊಂದಿಗೆ ಕನ್ನಡ, ತಮಿಳು, ತೆಲುಗು, ಮಲೆಯಾಳಂ ಹಾಗೂ ಹಿಂದಿ ಭಾಷೆಗಳಲ್ಲಿ ಮಾತನಾಡಬಲ್ಲವರಾಗಿದ್ದಾರೆ.

ಹಲವು ಭಾಷಾ ಪ್ರಿಯರಾದ ಹಕ್ಕಿಪಿಕ್ಕಿಯರು ಗುಜರಾತಿ ಮತ್ತು ಹಿಂದಿ ಭಾಷೆಗಳನ್ನು ತಮ್ಮ ವ್ಯವಹಾರಕ್ಕಾಗಿ ಬಳಸುವರು. ಇವರ ಮುಖ್ಯ ಆಹಾರ ಜೋಳ ಮತ್ತು ಸಜ್ಜೆ ಮಾಂಸಹಾರಿಗಳಾದರೂ ಇವರು ಗೋಮಾಂಸವನ್ನು ತಿನ್ನುವದಿಲ್ಲ.

**ವಲಸೆ ಮತ್ತು ಚರಿತ್ರೆ ಕುರಿತ ನಂಬಿಕೆಗಳು ಹಾಗೂ ಕಾರಣಗಳು**

೧. ಅಕ್ಬರ್ ಮತ್ತು ರಾಣಾ ಪ್ರತಾಪಸಿಂಗನ ಕಾಳಗದಿಂದಾಗಿ ಧೀರರಾದ ಜಮುಲ್ ಫತ್ತು ಮರಣದನಂತರ ಸೋತು ರಾಣಾಪ್ರತಾಪಸಿಂಗನ ಅನುಯಾಯಿಗಳು, ಆತನ ಸೈನ್ಯದಲ್ಲಿದ್ದು ಕೊನೆಯವರೆಗೂ ಹೋರಾಡಿದೆನ್ನಲಾದ ಹಕ್ಕಿಪಿಕ್ಕಿ ಪಂಗಡದವರು, ಮುಸಲ್ಮಾನರಿಂದುಂಟಾಗಬಹುದಾದ ದಬ್ಬಾಳಿಕೆಯಿಂದ ತಪ್ಪಿಸಿಕೊಳ್ಳುಲು ಕಾಡುಪಾಲಾದರು, ಊರಿಂದೂರಿಗೆ ತಿರುಗೊ ಅಲೆಮಾರಿಗಳಾದರು. ಇವರಲ್ಲಿ ಬವರಿಯಾ ಸಮುದಾಯವೂ ಸೇರಿರುವುದು. ಇವರು ಪಂಜಾಬ್, ಹರಿಯಾಣ, ಮಧ್ಯಪ್ರದೇಶ, ಜಮ್ಮುಕಾಶ್ಮೀರದಲ್ಲಿದ್ದಾರೆ.

೨. ಜೀವನ ನಿರ್ವಹಣೆಗಾಗಿ ಅಲೆದಾಡುತ್ತ ತಮ್ಮ ಮೂಲಪುರುಷ ಗುಜರಾತ್‌ನಿಂದ,

ಮೇವಾಡದಿಂದ ಬಂದುದಾಗಿ ಹೇಳುತ್ತಾ ಗುಜರಾತ್ನೋ, ಮೇವಾಡೋ ಆದರು ಪವರ್ ಗಡದಿಂದ ಹಾಗೂ ಆಂಧ್ರದ ಡಿಂಬರ್ಯಾವಾಡದಿಂದ ಬದವರು ಪವಾರ್ ಮತ್ತು ಕಾಳಿವಾಳೊ ಗಳಾದರು ಎನ್ನುತ್ತಾರೆ.

೩. ಭೀಕರ ಬರಗಾಲದಿಂದಾಗಿ ತೀಡಾನ ಮಕ್ಕಳಾದ ಜೋಗಿ, ಬೈಲುಕಮ್ಮಾರ, ವಾಗ್ರಿ (ಹಕ್ಕಿಪಿಕ್ಕಿಯರು) ಲಂಬಾಣಿ ಹಾಗೂ ಮಾರ್ವಾಡಿಗಳು, ತಮ್ಮ ತಮ್ಮ ಕಸುಬಿನ ಮೂಲ ಹಿಡಿದು ವಲಸೆ ಹೋಗುತ್ತ, ಕಾಲಕ್ರಮೇಣ ನೆಲೆನಿಲ್ಲಲು ಸರಕಾರ ಗುರ್ತಿಸಿದ್ದುದೇ ಆಗಿದೆ ಎನ್ನುತ್ತಾರೆ. ಆದರೆ, ಹಕ್ಕಿಪಿಕ್ಕಿಯರು ಮಾತ್ರ ಇನ್ನೂ ವಲಸೆ ಹೋಗುತ್ತಿರುವುದನ್ನು ಕಂಡರೆ ಇವರಲ್ಲಿರುವ ಅನಕ್ಷರತೆ, ಇನ್ನೊಬ್ಬರು ಅಡಿಯಲ್ಲಿ ಕೆಲಸ ನಿರ್ವಹಿಸಲಾರದ ಸ್ವಾಭಿಮಾನಿಕೆ ಹಾಗೂ ಅಲೆಮಾರಿತನವೇ ಎದ್ದು ಕಾಣುತ್ತದೆ.

**ಪೌರಾಣ, ಐತಿಹಾಸಿಕ ಮತ್ತು ಸಾಮಾಜಿಕ ಹಿನ್ನೆಲೆ**

ಕರ್ನಾಟಕದ ರಾಜ್ಯದಲ್ಲಿ ವಾಸವಾಗಿರುವ ಹಕ್ಕಿಪಿಕ್ಕಿ ಹಿರಿಯರು ಹೇಳಿದ ಕಥೆಗಳನ್ನು ಈ ಕೆಳಗೆ ನೀಡಲಾಗಿದೆ.

ಬ್ರಹ್ಮಾಂಡವು ಸೃಷ್ಟಿಯಾದಾಗ ಲೋಕ ಸಂಚಾರಕ್ಕಾಗಿ ಶಿವ ಪಾರ್ವತಿಯರು ಹೊರಟಾಗ ಲೋಕವೆಲ್ಲಾ ನಿಶ್ಶಬ್ಧವಾಗಿ ಇರುವುದನ್ನು ಕಂಡು ಭೂಮಿಯ ಮೇಲೆ ಶಿವಪಾರ್ವತಿಯರು ಇಳಿದು ಬಂದರು. ಭೂಮಿಯ ಒಂದು ಹಿಡಿ ಮಣ್ಣನ್ನು ತೆಗೆದುಕೊಂಡು ಎರಡು ಮಣ್ಣಿನ ಮೂರ್ತಿಗಳನ್ನು ಮಾಡಿ ಅದರಲ್ಲಿ ಒಂದು ಹೆಣ್ಣು ಒಂದು ಗಂಡು ಮೂರ್ತಿಗಳನ್ನು ಬಿಟ್ಟು ಲೋಕ ಸಂಚಾರಕ್ಕೆ ಹೊರಟು ಹೋದರು. ಜೊತೆಗಾರರಾಗಿ ಒಂದು ನಾಯಿ ಮತ್ತು ಕೋಳಿ ಯನ್ನು ಮಾಡಿ ಜೀವಕೊಟ್ಟರು. ಆದರೆ ಮಾನವರೂಪದ ಮೂರ್ತಿಗಳಿಗೆ ಬೆಳಕು ಹರಿವ ಸಮಯ ಜೀವ ನೀಡಿದರು ಆದ್ದರಿಂದ ಹಗಲೆಲ್ಲಾ ಕೆಲಸಕಾರ್ಯಗಳಲ್ಲಿರುವರು ಎನ್ನುತ್ತಾರೆ. ಶಿವಪಾರ್ವತಿಯರು ಮೂರ್ತಿಗಳು ಅಣ್ಣತಂಗಿಯಾಗಿ ಬಾಳ ತೊಡಗಿದರು. ಹೀಗೆ ದಿನ ಕಳೆದಂತೆ ಕಾಡಿನಲ್ಲಿ ಜೀವನ ಸಾಗಿಸುತ್ತ ದಿನ ಕಳೆದರು ಒಂದು ದಿನ ಶಿವಪಾರ್ವತಿಯರು ಅದೇ ಮಾರ್ಗವಾಗಿ ಲೋಕ ಸಂಚಾರ ಮುಗಿಸಿಕೊಂಡು ಬರುವಾಗ ತಾವು ಮಾಡಿದ ಮಣ್ಣಿನ ಮೂರ್ತಿಗಳು ಹೇಗೆ ಜೀವನ ನಡೆಸುತ್ತಿದ್ದಾವೆ ನೋಡಿ ಹೋಗೋಣ ಎಂದು ಪಾರ್ವತಿಯು ಶಿವನಿಗೆ ತಿಳಿಸಿದಳು. ಶಿವನು ಹಾಗೆಯೇ ಆಗಲಿ ಎಂದು ಆ ಜಾಗಕ್ಕೆ ಬಂದು ನೋಡಿದಾಗ ತಾವು ಮಾಡಿದ ಮೂರ್ತಿಗಳು ಮಾನವ ಅವತಾರ ತಾಳಿ ಕಾಡಿನಲ್ಲಿ ಅಣ್ಣತಂಗಿಯಾಗಿ ಬಾಳುವುದನ್ನು ಕಂಡು ಶಿವ ಪಾರ್ವತಿಯರು ಅವರಿಬ್ಬರನ್ನು ಹತ್ತಿರ ಕರೆಯಿಸಿ "ನೀವು ಈ ತರ ಜೀವನ ನಡೆಸಿದರೆ ಮುಂದೆ ಲೋಕ ಬೆಳೆಯುವುದಾದರೆ ಹೇಗೆ ಆದ್ದರಿಂದ ನಿಮ್ಮ ಇಬ್ಬರ ಸಂಬಂಧವು ಇಂದಿನಿಂದ ಅಣ್ಣತಂಗಿ ಅಲ್ಲ ನೀವಿಬ್ಬರು ಇಂದಿನಿಂದ ಗಂಡ ಹೆಂಡತಿಯಾಗಿ ಜೀವನ ನಡೆಸಿ" ಎಂದು ಪಕ್ಕದಲ್ಲಿ ಬೆಳೆದಿದ್ದ ಹಣ್ಣನ್ನು ತಿನ್ನಲು ಕೊಟ್ಟಾಗ, ಮಾನವ ಸದೃಶ ಪ್ರಕೃತಿಯಲ್ಲಿನ ಆಸೆ ಆಕಾಂಕ್ಷೆಗಳ ಪರಿಚಯವಾಯಿತು. ವಿವಾಹ ಮದುವೆ

ಮಾಡಿಸಿದರು. ಆನಂತರ ಗಂಡ ಹೆಂಡತಿಯಾಗಿ ಬಾಳಬೇಕೆಂದರು. ನಿಮ್ಮ ಹೊಟ್ಟೆ ಜೀವನಕ್ಕಾಗಿ ಕಾಡಿನಲ್ಲಿ ಬೆಳೆಯುವ ಗಡ್ಡೆ ಗೆಣಸುಗಳನ್ನು ತಿಂದು ಜೀವನ ಸುಖವಾಗಿ ನಡೆಸುಕೊಂಡು ಹೋಗಿ ಎಂದು ಶಿವಪಾರ್ವತಿಯರು ಆಶೀರ್ವಾದಿಸಿದರು. ಕಾಲ ಕಳೆದಂತೆ ಅವರ ಹೊಟ್ಟೆಯಿಂದ ಆರು ಜನ ಗಂಡು ಮಕ್ಕಳು ಆರು ಜನ ಹೆಣ್ಣು ಮಕ್ಕಳು ಜನಿಸಿದರು. ಎಲ್ಲಾರು ಸೇರಿ ಜೀವನ ನಡೆಸುತ್ತಾ ಕಾಲ ಕಳೆದಂತೆ ಮಕ್ಕಳು ಬೆಳೆಯತೊಡಗಿದರು. ಇವರು ಬೆಳೆದಂತೆ ಇವರ ತಂದೆ ತಾಯಿ ತಮಗೆ ಶಿವ ಪಾರ್ವತಿಯರು ತಮಗೆ ಮಾಡಿದ ಮದುವೆ ಮಾರ್ಗವನ್ನೇ ಇವರು ತಮ್ಮ ಮಕ್ಕಳಿಗೆ ಮಾಡಬೇಕೆಂದು ಇಚ್ಛಿಸಿದರು. ಆದ್ದರಿಂದ ಅವರ ಮಕ್ಕಳನ್ನು ಆರು ಗಂಡು ಮಕ್ಕಳಿಗೆ ಆರು ಹೆಣ್ಣು ಮಕ್ಕಳೆ ಕೈ ಕೈ ಜೋಡಿಸಿ ಇಂದಿನಿಂದ ನೀವು ಗಂಡ ಹೆಂಡತಿ ಎಂದು ಹೇಳಿ ಮದುವೆ ಮಾಡಿಸಿದರು. ಇಂದಿನಿಂದ ನಿಮ್ಮ ನಿಮ್ಮ ದಾರಿಯನ್ನು ನೀವೇ ನೋಡಿ ಕೊಳ್ಳಬೇಕು ಎಂದು ಹೇಳಿ ಆಶಿರ್ವಾದಿಸಿದರು. ಅವರ ವಂಶಜರೇ ನಾವು ಎನ್ನುತ್ತಾರೆ. ಕೊನೆಯರಿಬ್ಬರು ಲಂಬಾಣಿಯರಲ್ಲಿ ಢಾಡಿ, ಢಾಲ್ಯರಾಗಿ ಸೇರಿಕೊಂಡರು.

ಐತಿಹ್ಯ ೧. ತೀಡಾನ ಮಕ್ಕಳಾದ ಐವರು ಸೋದರರು ಒಮ್ಮೆ ನದಿ ತೀರದಲ್ಲಿ ಆಹಾರ ಹುಡುಕಾಟಕ್ಕಾಗಿ ಅಲೆದಾಡುತ್ತಿದ್ದಾಗ, ಸೀತಾಮಾತೆಯು ಆ ನದಿತೀರದಲ್ಲಿ ಅರೆಬೆತ್ತಲೆಯಾಗಿ ಸ್ನಾನಕ್ಕಿಳಿದದ್ದನ್ನು ಕಂಡು ನಕ್ಕುಬಿಡುತ್ತಾರೆ. ಇದರಿಂದ ಕೋಪಗೊಂಡ ಸೀತೆಯು ಅವರೆಲ್ಲರಿಗೂ ಒಂದು ಸವಾಲೊಡ್ಡುತ್ತಾಳೆ. ತನ್ನ ಒಂದು ಕೂದಲನ್ನು ಕಿತ್ತು ಇದರಿಂದ ಅಲ್ಲಿ ಮೇಯುತ್ತಿರುವ ಬಿಳಿಜಿಂಕೆಯನ್ನು ಹಿಡಿಯಲು ಯಾವ ರೀತಿ ಪರಿಶ್ರಮ ಪಡುವಿರೋ ಆ ರೀತಿ ಮುಂದೆ ಬದುಕುತ್ತೀರಿ ಅನ್ನುತ್ತಾಳೆ. ಬೇಟೆ ಬಲ್ಲ ವಾಗ್ರಿಯೇ ಮುಂದೆ ಬಂದು ಆ ಕೂದಲಲ್ಲಿ ಸರಗುಣಿಕೆ ಮಾಡಿ, ಬೇಟೆಯು ಓಡಾಡುವ ಸ್ಥಳದಲ್ಲಿ ಬಿಗಿಯುತ್ತಾನೆ. ಎಷ್ಟೇ ಪ್ರಯತ್ನಪಟ್ಟು ಬಿಳಿ ಜಿಂಕೆಯನ್ನು ಸರಗುಣಿಕೆಗೊಡ್ಡಲು ಆಗಲಿಲ್ಲ. ಕೊನೆಗೆ ಒಂದು ಕುಂಟುಜಿಂಕೆ ಸರಗುಣಿಕೆಗೆ ಸಿಕ್ಕಿಬೀಳುತ್ತವೆ. ಇದರಿಂದ ನಿನ್ನ ಜೀವನ, ಈ ಕುಂಟುಜಿಂಕೆಯಂತೆ ಎಷ್ಟೇ ದುಡಿದರೂ ಮೇಲೆಳದಂತಾಗುತ್ತದೆ ಎಂದು ಶಾಪ ನೀಡುತ್ತಾಳೆ. ವಾಗ್ರಿಯ ಕೈಗೆ ಸಿಗುತ್ತಲೂ ಅದು ನಂತರದಲ್ಲಿ ಸಾಯುತ್ತದೆ. ಇದರಿಂದ ಈಗಿನ ಹಕ್ಕಿಪಿಕ್ಕಿಯರು 'ತಾವು ಎಷ್ಟೇ ದುಡಿದರೂ ಸೀತಾಮಾತೆಯ ಶಾಪದಿಂದಾಗಿ ಅದು ಉಳಿಯೋಲ್ಲ' ಅನ್ನುತ್ತಾರೆ.

ಐತಿಹ್ಯ ೨. ಈ ಸಮುದಾಯದವರಿಗೆ ದೈವದಲ್ಲಿ ಪ್ರಬಲವಾಗಿ ಅಪಾರ ನಂಬಿಕೆ ಇರುವುದರಿಂದ ತಮ್ಮ ಮನೆದೇವರನ್ನು ಅಥವಾ ತಂದೆಯಿಂದ ಹಿರಿಯ ಮಗನಿಗೆ ಬರುವ ದೇವಿಯ ಖಪ್ಪರ್, ಢಾಕಣಿ (ಲೋಬಾನ ಇಡುವ ಸಾಧನ) ದೀವೋ (ದೀಪ)ಗಳನ್ನು ಬಹು ಜೋಪಾನವಾಗಿ ತ್ರಾಂಗಡು (ದೇವರನ್ನಿಡುವ ಪಿಟಾರಿ) ದಲ್ಲಿಡುತ್ತಾರೆ. ಈ ತ್ರಾಂಗಡೂಗಳಲ್ಲಿ ಹಳೆಯ (ಅಂದರೆ ಇಲ್ಲಿ ಪೀಢಿಯ (ಪೀಳಿಗೆ) ಲೆಕ್ಕ ಬರುತ್ತದೆ). ಮೂರ್ತಿಗಳಿರುವ ಪಿಟಾರಿಯಿದ್ದರೆ ಅದನ್ನು 'ಗಳ್ಢೀದೇವಿ' ಎನ್ನುತ್ತಾರೆ. ಹೀಗಿರುವ ತ್ರಾಂಗಡೂಗಳನ್ನು ಇವರಲ್ಲಿ ಮುಖ್ಯವಾಗಿ ಬರುವ ನಾಲ್ಕು ವಂಗಡಗಳಲ್ಲೂ ಕಾಣ ಸಿಗುತ್ತವೆ.

ರೂಪಗಳಲ್ಲಿನ ಲಭ್ಯ ಓನ್ನೆಲೆ

ಎ) ಗುಜರಾತ್‌ವಾಳೋರಲ್ಲಿ ಗುರುಪಾಥ್ಯೋ ರಚಿತ ದೇವಿಯು ಖಿಪ್ಪುರ್ ಮತ್ತು ಆತನ ರೂಪವನ್ನು ಬೆಳ್ಳಿಯಲ್ಲಿ ಆತನ ಮಗ ಮಾಡಿಸಿ ತ್ರಾಂಗಡೂದಲ್ಲಿರಿಸಿದ. ಹಬ್ಬ ಹರಿದಿನಗಳಲ್ಲಿ ಮಾತ್ರ ಇವುಗಳನ್ನು ಹೊರತೆಗೆದು ಪೂಜಿಸುತ್ತಾರೆ. ಈ ಗಲ್ಲೀದೇವಿಯು ಆತನ ಸಂತತಿಯಲ್ಲಿ ಈಗಿರುವ ಪಾಪರಂಪೇಟ್ ಎಂಬುವರ ಬಳಿಯಿದೆ. ಇದಕ್ಕೆ ಸುಮಾರು ಹದಿನಾರು ತಲೆಮಾರಿನ ಇತಿಹಾಸವಿದೆ. ಇವರ ವಂಶಾವಳಿಗಾಗಿರುವ ೨೧ ರಿಂದ ೨೨ ತಲೆಮಾರನ್ನು ಈ ಕೆಳಗಿನಂತೆ ನೀಡಲಾಗಿದೆ.

**ಗುಜರಾತ್‌ವಾಳರ ವಂಶಾವಳಿ**

ಪರಶುರಾಂ ಪುರತ್ (ಮೂಲ ಪುರುಷ) + ದೇವಶುಭ

↓

ಧೋಳಪಾರಥಿ (ಹೆಂಡತಿ ಬಿಚ್ಚಿದಾದಿ)

↓

| | | | | | |
|---|---|---|---|---|---|
| ಮೇಡ್‌ಭೋ | + | ಮೇಡ್‌ತಿ (ಹೇಮಿಪ್ರಾತ್) | | | |
| ↓ | | | | | |
| ಬಾರಭ್ಯೆ | + | ರಾಜ್‌ಲಿ ದಾದಿ | | | |
| ↓ | | | | | |
| ಗಾಂಗೋ | + | ಗಾಂಗ್ಲಿ | | | |
| ↓ | | | | | |
| ಪಾಥ್ಯೋ | + | ಲಾಲಿದಾದಿ | | | |
| ↓ | | | | | |
| ಹಾಚೋ | + | ದಿಪ್ಪೆದಾದಿ | | | |
| ↓ | | | | | |
| ಉಕ್ಕಡಿಯೋ | + | ಭಾಣಿಕಿ | | | |
| ↓ | | | | | |
| ಘೋಬಣಿಯೋ | + | ಪಾರಿದಾದಿ | | | |
| ↓ | | | | | |
| ಬಿಜಿಲೋ | + | ಜಮ್ಮಿದಾದಿ | + | ಬಯಾದಾದಿ + ಸುಣ್ಣಗಾತಿ | |
| ↓ | | | | ↓ | |
| ಮಲ್‌ಕ್ಯೋ | + | ದೇವ್‌ಲಿದಾದಿ | | ಜಮ್ಲೊ + ಫತ್ತೊದಾದಿ | ಹರ್ಜಿ |
| ↓ | | | | ↓ | |
| ಶಂಭೋ | + | ಮಕ್ಕದಾದಿ | | ದೇವ್‌ಕೋ | ಲಾಲ್‌ಜಿ |
| ↓ | | | | ↓ | |
| ಪಲ್‌ಬತ್ | + | ಶಾರುದಾದಿ | | ತೇನಸಿಂಗ್ | |

| | |
|---|---|
| ↓ | ↓ |
| ಮೇಲ್‌ಗಿರಿ + ಪುಟೂರಿ | ಖುದ್ರಾಂಚನ್ |
| ↓ | ↓ |
| ಸಂಪತ್‌ರಾವ್ | ಹಲ್ಲೂರ್‌ಚನ್ |
| ↓ | ↓ |
| ಚಿನ್ನಿರಿವಡೋ | ನೀಲಗಿರಿ |
| ↓ | ↓ |
| ಹಿರ್‌ಪಾಚನ್ + ಶತಾರುದಾದಿ | ಅರಮಣೆ |
| ↓ | ↓ |
| ಜುಜುರಿ + ಶೌಗ | ಸುರಮಣೆ |
| ↓ | ↓ |
| ಸಿದ್ದ + ಶಿಕ್ಕೂಲ್ | ಪಟ್ಮಿ |
| ↓ | ↓ |
| ರಾಮೇಗೌಡ + ಸಂಪಿ | ಪಾಪರಂಪೇಟ್ (ಗಲ್ದೀದೇವಿ ಇದೆ |
| ↓ | ↓ ಭೂತಾನಳ್ಳಿ) |
| ಸುಶೀಲಪ್ಪ + ಕುಮುದ ಬಿ | ಮಗ |
| ↓ ↓ | ↓ |
| ಯುಗೇಶ್ ಭೂವನ್ | ಮಗ |
| ↓ | |
| ಮಗ | |

ಬಿ) ಮೇವಾಡೊಪಂಗಡ 'ಗಲ್ದೀದೇವಿ' ಇಸೂರಪ್ಪನ ಮಗ ಜವ್ಯಬಳಿ ಇದೆ. ಇದು ಸುಮಾರು ಹನ್ನೆರಡನೇ ತಲೆಮಾರಿನದು. ಚನ್ನಗಿರಿ ತಾಲ್ಲೂಕಿನ ಆಸ್ಥಾಪನಹಳ್ಳಿ ಗ್ರಾಮದಲ್ಲಿದೆ. ಹಿರಿಯ ಪೂರ್ವಜ ಆಬೋನು ಮಾಡಿಸಿಕೊಟ್ಟ ದೇವಿಯೆನ್ನುತ್ತಾರೆ. ೨೧ ತಲೆಮಾರನ್ನು ಈ ಕೆಳಕಂಡಂತೆ ನೀಡಲಾಗಿದೆ.

**ಮೆವಾಡದವರ ವಂಶಾವಳಿ**

**ಗುರುಭೈರುನಾಥ್ (ಮೂಲ ಪುರುಷ)**

↓

**ಜೈಮಲ್‌ಪತ್ತೊ (ಹೆಂಡತಿ ಕಮುದಾ ರಾಣಿ)**

↓

ಲಾಲಿ + ದೇವಘಣ (ಸೌಘಣ)

↓

ಕಳ್‌ಗಳ್ + ಲಕ್ಷ್ಮಣ್ಣಿದಾದಿ

↓

ಲಾಕ + ಹೆಮ್ಮಿದಾದಿ (ಪಾನವತಿ)

↓

ಧನರಾವತ್ + ಕರ್ಮಗಾಂಗ್ಲಿ (ರಾಚ್‌ಗಾಂಗ್ಲಿ)

↓

ಚ್ಡೋಕಲ್ + ಚಂಗಯ್‌ದಾದಿ

↓

ಚ್ಢಂಗೋ + ಘಟ್ಯೋ

↓

ತಾರ್‍ಯೋ + ದೇವೈದಾದಿ

↓

ಆಬೋ + ಕೊಂಡೈದಾದಿ

↓

ಭಗೋ ಶಾವಲೋದಾದಿ

↓

ಹರಿರಾಂ

↓

ಖಿತ್ರೋ + ಮಿಶ್ರದಾದಿ

↓

ಖಿರ್‌ನಾಚನ್ + ಕಳಶಿದಾದಿ

↓

ಬೇಗೂರ್‌ಚನ್ + ಸಂಗೀರ

↓ ↓ ↓

ಡಾಲಂಗ್ + ಭಾಗೀರಥಿ | ಸೈದೋಶಿಂಗ್ | ರಂಗ + ಬುಯಾಮುಂಗಿ

↓ (ಡಾಲಂಗ್ + ಭಾಗೀರಥಿ) | ↓ (ರಂಗ + ಬುಯಾಮುಂಗಿ)

ಕಾಮ್‌ಚಂದ್ರ + ಮುದ್ದಿ | ಕಾಯ್ಬೂರ್ + ಗೌಶು

↓ | ↓

ಭಾನು + ತಾರಾಬಾಯಿ | ಈಸುರಪ್ಪ + ಜುವಾರ್‌ಬಿ

↓ ↓ ↓ | ↓

ಕುಮುದ + ಸುಶೀಲಪ್ಪ | ಗಿರೀಶ + ಲತಾ | ಗೌರೀಶ + ಜಾಹ್ನವಿ | ಜವ್ವು + ಚಾಕಲೀಟ್ (ಗಲ್ಲೀದೇವಿ ಇದೆ) ಆಭೋನ

ಗಿರೀಶ + ಲತಾ ↓ ಸಿರೀಶ ↓ ಮಗ

ಗೌರೀಶ + ಜಾಹ್ನವಿ ↓ ಯಶ್ವಂತ್(ಪವನ್)

ಜವ್ವು + ಚಾಕಲೀಟ್ ↓ ಸೂರತ್ ↓ ಮಗ

ಸಿ) ಕಾಳವಾಳೋ ಪಂಗಡದ 'ಗಲ್ಡೀದೇವಿ' ಆಂಧ್ರದ ಜಲಪಲಿಯಲ್ಲಿದೆ. ಇಲ್ಲಿನ ವಂಶಜರಲ್ಲಿ ಈಗಿರುವ ಡಾಂಶೇಟ್ ಬಳಿ ಬಳಿಯಿದೆ. ಇದು ಗುರುಮಕ್ರ್ಯೋ ರಚಿಸಿದ್ದು, ಹನ್ನೊಂದು ತಲೆಮಾರು ಆಗಿದೆ. ಇವರು ಶಿವಮೊಗ್ಗ ಜಿಲ್ಲೆ ಚಿಕ್ಕಮರಡಿ ಕ್ಯಾಂಪ್‌ನಲ್ಲಿದ್ದಾರೆ, ಇದರಲ್ಲಿ ೨೨ ತಲೆಮಾರನ್ನು ನೀಡಲಾಗಿದೆ.

**ಕಾಳಿವಾಳರ ವಂಶಾವಳಿ**

**ಗುರುಕಾಳ್‌ನಾಥ**

↓

ಭಿಮ್‌ಶೀ

↓

ಭೆಂಡರ್

↓

ಮಾನ

↓

ಲಕ್ಕಣಿಯ + ಕಳ್‌ಗಳ್‌ದಾದಿ

↓

ಧಾನ್ಯ

↓

ಧಾಡರ್ + ಕೇಮಿದಾದಿ

↓

ಮ್ಹೀಪಾಲ್ + ಮ್ಹೀಪಾಲ್‌ಬಾಯಿ

↓

ಖುರೀಶ್‌ಮಾಲ್ + ಬಾಡಿದಾದಿ

↓

ಖುರ್ತಾನ್ + ಗುಲಾಲ್‌ದಾದಿ

↓

ಮಹೂನ್ + ಪೈಚಾದಾದಿ

↓

ಮುಖಿಂಡರ್

↓

ತುಲಿರಾಂ + ಭೋಗಿ (ತೇಜು)

↓

ಡಾಭಿ + ರಹೀಮ್‌ದಾದಿ

↓ ↓

ಜಗ್ಮಣ್ + ಹೇಮಿದಾದಿ | ಲಾಲೂ




ಡ) ಪವಾರ್ ಪಂಗಡದ ಗಲ್ಲೀದೇವಿ ಬೆಂಗಳೂರು ಬನ್ನೇರುಘಟ್ಟದಲ್ಲಿ ವಾಸಿಸುವ ತಿರುವಂದೊರೆಯ ತಮ್ಮ ಮಿಟಿಂಗೆಲ್ ಬಳಿ 'ಗಲ್ಲೀದೇವಿ' ಇದೆ ಬನ್ನೆರುಘಟ್ಟದ ಭೂತಾನಹಳ್ಳಿ ಬಳಿಯಿದ್ದಾರೆ. ೨೨ ತಲೆಮಾರನ್ನು ನೀಡಲಾಗಿದೆ. ಗುರು ಉಭಾರ್ಯೋ ರಚಿಸಿದ್ದು, ಇದಕ್ಕೆ ಹತ್ತೊಂಬತ್ತು ತಲೆಮಾರಾಗಿದೆ.

ಈ ಹಕ್ಕಿಪಿಕ್ಕಿ ಅಲೆಮಾರಿ ಜೀವನದ ಬುಡಕಟ್ಟುಗಳಲ್ಲಿ ಭಾಷೆಗೆ ಲಿಪಿಯಿಲ್ಲದಿರುವುದರಿಂದ ಯಾವ ಶಾಸನಗಳ ಆಧಾರವೂ ಸಿಗುವುದಿಲ್ಲ. ಕೆಲವು ಗೋರಿಗಳು, ದೇವಿಯರ (ಮೂರ್ತಿ) ಖಪ್ಪರ್‌ಗಳು ಸಿಗುತ್ತವೆ ಅಷ್ಟೇ.

## ಪವಾರ್ ವಂಶಾವಳಿ

ದೂದ್‌ಗವಾರಿಯೋ

↓

ಜಂಗಮ್

↓

ಪಾಚ್ಯೋ + ಪಾನಾದಾದಿ

↓

ವ್ಯವರಿಯೊ + ವ್ಯವಾರ್ನಿ

↓

ಝುಲ್ಲದಿಯೋ + ಝುಲ್ಲರ್ನಿ

↓

ಉಬಾರ್‍ಯೋ

↓

ಕರಂಸಿಂಗ್ + ಮಹಪಾಲಿ

↓

ಭತ್ರೋ

↓ ↓

ಲಾಲನ್ | ಪಾಪನ್

↓

ಚಿಂತಾಮಣಿ

↓

ರೂಪಾಮನ್

↓ ↓

ಖಿರಿಯೋ | ರಂಭೋ

↓ ↓

ಲಿಂಬೋ | ದಾಮೋ

↓ ↓

ಈರಿಯೋ | ಜಾಕೋ

↓

ಬಾಜೇರಾವ್

↓ ↓

ಜಾನ್‌ಬಾ | ಅಣದ್‌ರಾವ್

↓

ಕರಂಚನ್ | ಪೇಂಬ್ಬು | ಹಲ್ಗುರಿ | ಶಿವಂಗು | ಸಮ್ಮೈಚಿ

ಕರಂಚನ್
\+
ಬಂದ್ರಿದಾದಿ
↓
ಕಾಲು | ಕೊಲಂದೆ

ಕೊಲಂದೆ
↓
ಕಾಡಂಚನ್ + ವಾಂಗ್ಲು
↓
ನಬ್ಬಿ | ಅರಿಮುಗಂ | ಅಂಪು

ನಬ್ಬಿ
↓
ತಿರುಮಂಡೊರೆ | ರಡ್ಡಿ

ರಡ್ಡಿ
↓
ವೆಂಕಟೇಶ್ | ರಾಮಚಂದರ್‌ದೊರೆ

ವೆಂಕಟೇಶ್
↓
ಲೋಕೇಶ್

ಅರಿಮುಗಂ
↓
ಮಿಟಿಂಗಲ್
↓
ಸಾಗರ್
↓
ಮಗ

ಅಂಪು
(ಉಬಾರ್‍ಯೋ)
(ಗಲ್ಗಿದೇವಿ ಇದೆ)

(ಬನೇರುಘಟ್ಟ)
(ಭೂತಾನಪಳ್ಳಿ)

೧. ಶಿರಾದ ಕೆರೆಯ ಬಳಿಯಿರೊ ಗೋರಿಯು ಗುಜರಾತ್‌ವಾಳೋರ ಮೂಲಪುರಷ ಪರಶುರಾಂಪೂತ್ ವಂಶಾವಳಿಯಲ್ಲಿ ಹತ್ತನೇ ತಲೆಮಾರಿನಲ್ಲಿ ಬರುವ "ಗುರು ಬಿಚ್ಲೋ"ನದು, ಅಲ್ಲಿಂದೀಚೆಗೆ ಸುಮಾರು ಹದಿಮೂರು ತಲೆಮಾರಾಗಿದೆ.

**ಸಾಮಾಜಿಕ ಹಿನ್ನೆಲೆ :** ಕರ್ನಾಟಕದ ಹಕ್ಕಿಪಿಕ್ಕಿಯರದ್ದು ಒಂದು ಸ್ವತಂತ್ರ ಸಮುದಾಯ. ಇವರು ಪಾರ್ಧಿ ಬುಡಕಟ್ಟಿನೊಂದಿಗೆ ವೈವಾಹಿಕ ಸಂಬಂಧ ಬೆಳೆಸುವುದಿಲ್ಲ. ಇವರ ಬೆಡಗು, ಸಂಪ್ರದಾಯ, ಆಚರಣೆಗಳಲ್ಲಿಯೂ ಬಹಳಷ್ಟು ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಆದರೂ, ಬಳ್ಳಾರಿ ಜಿಲ್ಲೆಯ ಪಾರ್ಧಿಗಳನ್ನು ಶಿಕಾರಿ ಮತ್ತು ಹಕ್ಕಿಪಿಕ್ಕಿಗಳೆಂದು ಬೆಂಗಳೂರಿನ ರಾಜ ಗೊಂಡರನ್ನು, ಡುಂಗ್ರಿ ಗರಾಸಿಯರನ್ನು ಹಕ್ಕಿಪಿಕ್ಕಿಗಳೆಂದು ತಪ್ಪಾಗಿ ಕರೆಯಲಾಗುತ್ತದೆ. ಇವರಲ್ಲಿ ಎಲ್ಲಾದರೂ ಒಂದೆಡೆ ರಕ್ತಸಂಬಂಧವಿರುವ ಪ್ರಸ್ತಾಪ ಕಂಡು ಬರುವುದಿಲ್ಲ. ಹಕ್ಕಿಪಿಕ್ಕಿಯರು ತಮ್ಮ ಸಮುದಾಯವರು ಎಲ್ಲೇ ಇದ್ದರೂ ಪರಸ್ಪರ 'ವಾಗ್ರಿ'ಗಳೆಂದೂ 'ವಾಗ್ರಿವೇಲ್'ಳೆಂದೂ ಗುರ್ತಿಸಿಕೊಳ್ಳುತ್ತಾರೆ. ಪಾರ್ಧಿಗಳು ಆಚರಿಸುವ ಹಬ್ಬಗಳಲ್ಲಿ ಮೊದಲು ಪೂಜಿಸಲ್ಪಡುವ ದೇವರಾದ (ಖುದಾ)ದಾದಾಜಿಗೆ ಕೋಣಬಲಿ ನೀಡುತ್ತಾರೆ. ಆದರೆ ಹಕ್ಕಿಪಿಕ್ಕಿ (ವಾಗ್ರಿ)ಗಳು ದಾದಾಜಿಗೆ ಕುರಿಬಲಿ ನೀಡುತ್ತಾರೆ. ಶೇಳ್‌ಮಹಮ್ಮಾಯಿ, ಶಿಕೋತರ್ ದೇವಿಯರಿಗೆ ಹೋತ (ಗಂಡು ಮೇಕೆ) ಬಲಿ ನೀಡುತ್ತಾರೆ. ಪಾರ್ಧಿಯರು ಹೆಣ್ಣು ಮೇಕೆಯನ್ನು ಬಲಿಕೊಡುತ್ತಾರೆ.

ಹೀಗಾಗಿ ಹಬ್ಬಗಳಲ್ಲಿ ಪರಸ್ಪರ ಭಾಗವಹಿಸುವುದಿಲ್ಲ. ಸಾಮಾನ್ಯವಾಗಿ ಭಾಷೆಯಲ್ಲಿ ಸಾಮ್ಯತೆಯಿರುವವರೆಲ್ಲರ ಮೂಲ ಒಂದೇಯಾಗಿರುತ್ತದೆ ಎಂಬ ವಿಷಯ ಗಮನಾರ್ಹ.

ಮದುವೆಯಲ್ಲಿ ಹಕ್ಕಿಪಿಕ್ಕಿ (ವಾಗ್ರಿ)ಗಳ ಆಚರಣೆ ತುಂಬಾ ಸರಳವಾಗಿ ಜರುಗುತ್ತದೆ. ಕುಂಕುಮದ ಬೊಟ್ಟು (ತಿಲಕಂಧಾರಣೆ) ತ್ರಾಂಗಡೂ ಎದುರಿಗೆ ಕನ್ನೆಯಾದವಳಿಗೆ ಇಡಲಾಗುತ್ತದೆ. ಪಾರ್ಧಿಗಳಲ್ಲಿ ಎಲೆಯನ್ನು ಬಾಸಿಂಗದಂತೆ ಕಟ್ಟಿ ಮದುವೆ ಕಾರ್ಯಕ್ರಮ ಜರುಗಿಸುತ್ತಾರೆ. ಅಲ್ಲದೆ ಹೆಣ್ಣು ಕೊಡುವ ತೆಗೆದುಕೊಳ್ಳುಂಥ ಸಂಬಂಧಗಳು ಇಲ್ಲ. ಇನ್ನು ಶವಸಂಸ್ಕಾರ ಪದ್ಧತಿಯಲ್ಲಿ ವಾಗ್ರಿಗಳು ಮೃತದೇಹವನ್ನು ಹೂಳುತ್ತಾರೆ. ಆದರೆ ಪಾರ್ಧಿಗಳು ಶವವನ್ನು ಸುಡುತ್ತಾರೆ. ಹೀಗೆ ರಾಜಸ್ಥಾನ ಗುಜರಾತ್ ಮೂಲದವರೆಂದು ಹೇಳಿಕೊಳ್ಳುವ ಈ ಪಾರ್ಧಿಗಳ ಭಾಷೆಗೂ ಹಕ್ಕಿಪಿಕ್ಕಿ (ವಾಗ್ರಿ)ಗಳ ಭಾಷೆಗೆ ಸಾಮ್ಯತೆ ಸ್ವಲ್ಪ ಇದ್ದೇ ಇರುತ್ತದೆ. ಹಾಗಾಂತ ಎರಡೂ ಒಂದೇ ಗುಂಪಿನವರೆಂದು ಹೇಳಲಾಗುವುದಿಲ್ಲ. ವಾಗ್ರಿ ವಾಗ್ರಿಗಳೇ, ಪಾರ್ಧಿ ಪಾರ್ಧಿ ಗಳೆಂದೇ ಹೇಳಿಕೊಳ್ಳುವುದನ್ನು ಕಾಣಬಹುದು.

೧ ಮತ್ತು ೨ ಡಿಸೆಂಬರ್ ೨೦೦೭ ರಂದು ದೆಹಲಿಯಲ್ಲಿ ಲಕ್ಷ್ಮಣಭಾಯಿ ಪಟ್ನಿ ಅವರ ನೇತೃತ್ವದಲ್ಲಿ ನಡೆಸಿದಂಥ ಸಮಾವೇಶದಲ್ಲಿ ಭಾಗವಹಿಸಿ "ರಾಷ್ಟ್ರೀಯ ದೇವಿಧರ್ಮಿ ಸಮಾಜ" ದ ಸಮಾವೇಶದಲ್ಲಿ ಪಾರ್ಧಿಯವರು ಅವರ ಹೆಸರಿನಲ್ಲೇ ಗುರುತಿಸಿಕೊಳ್ಳುವುದಾಗಿ ಹೇಳಿದಾಗ, ಬಾವರಿಯಾ ಸಮಾಜದವರೂ ಕೂಡ ತಾವೂ ಅದೇ ಹೆಸರಲ್ಲಿ ಗುರುತಿಸುಕೊಳ್ಳುವುದಾಗಿ ನಿರ್ಣಯಿಸಲಾಗಿ ಕೊನೆಯದಾಗಿ "ರಾಷ್ಟ್ರೀಯ ದೇವಿಧರ್ಮಿ ಸಮಾಜ" (ವಾಗ್ರಿ, ಪಾರ್ಧಿ, ಬಾವರಿಯಾ) ಎಂದು ಕರೆಯಲು ತೀರ್ಮಾನಿಸಲಾಯಿತು.

ಭಾರತದಲ್ಲಿ ತಮ್ಮನ್ನು ವಾಗ್ರಿವೇಲ್‌ಗಳೆಂದೇ ಗುರ್ತಿಸಿಕೊಳ್ಳುವ ಅನೇಕ ಸಮುದಾಯ ದವರು ವಾಗ್ರಿಗಳೇ. ಆದರೆ ಪಾರ್ಧಿಗಳೂ ತಮ್ಮನ್ನು ವಾಗ್ರಿಗಳೆನ್ನುವುದಿದೆ. ಆದರೆ ಮನೆತನವೂ ವಂಶಾವಳಿ ಹೇಳುವಾಗ ಬಹಳ ಹೆದರುತ್ತಾರೆ. ಪಾರ್ಧಿಗಳು, ವಾಗ್ರಿಗಳು ಒಂದೇ ಎನ್ನುವುದಾದರೆ ಖಾಂದಾನನ್ನು ಹೆಸರಿಸಬೇಕಾಗುತ್ತದೆ. ಅವರು ಹಿಂದಿನ ಪೂರ್ವಜರಿಂದಾಗಿ ಯಾವಾಗ? ಎಲ್ಲಿ? ಹೇಗೆ ಬೇರ್ಪಟ್ಟರು? ಮೂಲ ಪುರುಷ ಯಾರು? ಎಂಬುದೆಲ್ಲ ಆಳವಾದ ಅಧ್ಯಯನದಿಂದ ತಿಳಿಯುವ ಅವಶ್ಯಕತೆಯಿದೆ. ಇದು ಆಯಾ ಸಮುದಾಯದ ಶಿಕ್ಷಿತರಿಂದ ಮಾತ್ರ ಸಾಧ್ಯವಾಗಬಹುದು.

## ೨

# ಮೂಲ ಮತ್ತು ಪ್ರಸಾರ

**ಹ**ಕ್ಕಿಪಿಕ್ಕಿಯರ ಪೂರ್ವಿಕರು ಮತ್ತು ಮುಖಂಡರು ಭಾರತ ದೇಶದ ಗುಜರಾತ್ ಮತ್ತು ರಾಜಸ್ಥಾನ ರಾಜ್ಯದವರು. ಅಲ್ಲಿ ಈಗಲೂ ಹೆಚ್ಚಿನ ಜನಸಂಖ್ಯೆ ಕಂಡು ಬರುತ್ತದೆ. ಗುಜರಾತ್ ರಾಜ್ಯದ ಕೆಲವು ಭಾಗಗಳಲ್ಲಿ ಆಗಿನ ರಾಜರ ದಬ್ಬಾಳಿಕೆಯು ಅಥವಾ ಬ್ರಿಟಿಷರ್ ದಬ್ಬಾಳಿಕೆಯ ಅಥವಾ ಹೊಟ್ಟೆ ಪಾಡಿಗಾಗಿಯೂ ಗುಜರಾತ್ ರಾಜ್ಯವನ್ನು ಬಿಟ್ಟು ರಾಜಸ್ಥಾನ ಮಾರ್ಗವಾಗಿ ಮಹಾರಾಷ್ಟ್ರಕ್ಕೆ ಬಂದು ನೆಲೆಸಿದರು. ಅಲ್ಲಿ ಶಿವಾಜಿ ಮಹಾರಾಜರ ರಾಜ್ಯಾಡಳಿತ ನಡೆಯುತ್ತಿತ್ತು. ಶಿವಾಜಿ ಮಹಾರಾಜರ ರಾಜ್ಯಾಡಳಿತದಲ್ಲಿ ರಾಜ್ಯ ರಕ್ಷಣೆಗಾಗಿ ನಮ್ಮನ್ನು ಆಡಳಿತ ವೈರಿಗೆ ನೇಮಿಸಿಕೊಂಡಿದ್ದರು ಅಲ್ಲಿ ಶಿವಾಜಿ ಮಹಾರಾಜರ ಅಸ್ಥಾನ ಮತ್ತು ಅಧಿಕಾರ ಇರುವವರಗೆ ರಾಜ್ಯದ ರಕ್ಷಣೆಗಾಗಿ ನಮ್ಮನ್ನು ಸಿಪಾಯಿಗಳನ್ನಾಗಿ ನೇಮಿಸಿಕೊಂಡಿದ್ದರು ಮತ್ತು ರಾಜ್ಯಾಡಳಿತ ದಲ್ಲಿ ಅನೇಕ ಸ್ಥಾನಮಾನಗಳನ್ನು ಕಾಯ್ದುಕೊಳ್ಳಲು ನೇಮಿಸಿಕೊಂಡಿದ್ದರು. ಅಲ್ಲಿದ್ದ ಪೂರ್ವಿಕರು ಮಹಾರಾಣ ಪ್ರತಾಪ್‌ಸಿಂಗ್‌ನ ಅಪ್ತಭಂಟರು ಆಗಿದ್ದರು. ಆದರಿಂದ ಇವರನ್ನು 'ರಾಣಾಗಳು' ಎಂದು ಕರೆಯುತ್ತಿದ್ದರು ಎಂದು ಹೇಳುತ್ತಾರೆ. ಮೇವಾಡೋವಾಲೋರ ಹಿರಿಯ ಮುಕುಂದ ಅಸ್ತಾಪನಹಳ್ಳಿ ವಾಸಿ ದಾವಣಗೇರೆ ಜಿಲ್ಲೆ ಈಗ ಮಂಡಲ ಪಂಚಾಯತಿ ಹಿರೇಮಳೆಯಲ್ಲಿ ಅಧ್ಯಕ್ಷರಾಗಿದ್ದಾರೆ.

ಅಕ್ಬರನು ಮಹಾರಾಣ ಪ್ರತಾಪ್‌ಸಿಂಗ್‌ನನ್ನು ಯುದ್ಧದಲ್ಲಿ ಸೋಲಿಸಲೆಂದು ಅನೇಕ ಬಾರಿ ದಂಡೆತ್ತಿ ಬಂದಾಗಲೆಲ್ಲ ನಮ್ಮ ಪೂರ್ವಿಕರೆ ಅವರ ರಕ್ಷಣೆಗೆ ನಿಲ್ಲುತ್ತಿದ್ದರು. ಅಕ್ಬರನು ಪ್ರತಾಪ್ ಸಿಂಗ್‌ನನ್ನು ಯುದ್ಧದಲ್ಲಿ ಕೊಂದು ಬಿಟ್ಟ ಇದರ ಮುಂಚೆ ಅಕ್ಬರ್ ಬಾದ್‌ಷಾ ಮಹಾರಾಣಾ ಪ್ರತಾಪ್ ಸಿಂಗ್‌ನನ್ನು ಸೋಲಿಸಿದಾಗ ಪ್ರತಾಪ್‌ರು ಅಡವಿ ಅಡವಿಯಲ್ಲಿ ಅಲೆಯುತ್ತಿದ್ದರು. ಅಂತಹ ಸಮಯದಲ್ಲಿಯೂ ನಮ್ಮ ಪೂರ್ವಿಕರು ಪ್ರತಾಪ್ ಸಿಂಗ್‌ರ ಜೊತೆಯಲ್ಲಿಯೇ ಇದ್ದು ಅಂಗ ರಕ್ಷಕರಾಗಿ ಕೆಲಸ ಮಾಡುತ್ತಿದ್ದರು. ನಮ್ಮ ಕಷ್ಟಗಳನ್ನು ನೋಡಿ ಸಹಿಸಲಾರದೆ ಮಹಾರಾಣಪ್ರತಾಪ್ ಸಿಂಗ್‌ನು ಮುಸ್ಲಿಂರ ಮೊಗಲ ರಾಜ್ಯವನ್ನು ಲೂಟಿ ಮಾಡಿ ನಿಮ್ಮ ಹಸಿದ ಹೊಟ್ಟೆ ತುಂಬಿಸಿಕೊಳ್ಳಿ ಎಂದು ಹೇಳಿದರು. ಮತ್ತು ಗ್ವಾಲಿಯರ್ ರಾಣಿ ಲಕ್ಷ್ಮೀ ಬಾಯಿಯು ವಾಗ್ರಿಯವರನ್ನೇ ಅಂಗ ರಕ್ಷಕರಾಗಿ ನೇಮಿಸಿಕೊಂಡಿದ್ದಳು. ಅವಳು ಈ ಜನರಿಗೆ

ತಾಮ್ರದ ಹಕ್ಕು ಪತ್ರಗಳನ್ನು ಕೊಟ್ಟಿದ್ದಳು. ಅವಳ ಅಂತಿಮ ದಿನಗಳಲ್ಲಿ ನಿಮ್ಮ ಉಳಿವಿಗಾಗಿ ಕೊಲ್ಹಾಪುರದ ಶಾಹು ಮಹಾರಾಜರ ಕಡೆಗೆ ಹೋಗಿರಿ ಎಂದು ತಾಮ್ರದ ಪತ್ರಗಳನ್ನು ಕೊಟ್ಟಿದ್ದಳಂತೆ. ಆಗ, ಶಾಹು ಮಹಾರಾಜರು ನಮ್ಮ ಜನಾಂಗದವರಿಗೆ ತುಂಬಾ ಸಹಾಯ ಮಾಡಿದ್ದರು. ಅಲ್ಲಿಂದ ಬ್ರಿಟಿಷರ ಸರ್ಕಾರ ಬ್ರಿಟಿಷರ ದಬ್ಬಾಳಿಕೆ ತಾಳಲಾರದೆ ಮತ್ತು ಹೊಟ್ಟೆಪಾಡಿಗಾಗಿ ದೇಶದ ಬೇರೆ ಬೇರೆ ರಾಜ್ಯಗಳಲ್ಲಿ ಅಲೆಮಾರಿಯಾಗಿ ಜೀವನ ನಡೆಸುತ್ತಾ ಕರ್ನಾಟಕಕ್ಕೆ ಬಂದರು. ಆಗಿನ ಬ್ರಿಟಿಷ್ ಸರ್ಕಾರವು ನಮ್ಮ ಜನಾಂಗವನ್ನು ಒಂದು ಕಡೆ ನೆಲೆಯಿಲ್ಲದನ್ನು ಕಂಡು ಮತ್ತು ತಮ್ಮ ಮಾತಿಗೆ ಬಗ್ಗದನ್ನು ಅರ್ಥಮಾಡಿಕೊಂಡು ಇವರು ಕ್ರಿಮಿನಲ್ ಟ್ರೈಬ್ ಅಪರಾಧಿ ಬುಡಕಟ್ಟುಗಳು ಎಂದು ನಾಮಕರಣ ಮಾಡಿ ಸೆಟ್ಲಿಮೆಂಟ್‌ಗಳನ್ನು ನಿರ್ಮಿಸಿ ನಮ್ಮ ಜನಾಂಗವನ್ನು ಅಲ್ಲಿಯೇ ಇರಲು ಕೆಲವು ನಿಯಮಗಳನ್ನು ನೇಮಿಸುತ್ತಿದ್ದರು. ಅದೇ ರೀತಿ ಶಿವಾಜಿ ಮಹಾರಾಜರ ರಾಜ್ಯಾಡಳಿತ ಕಳೆದುಕೊಂಡ ನಂತರ ಮಹಾರಾಷ್ಟ್ರವನ್ನು ಬಿಟ್ಟು ಹೊಟ್ಟೆಪಾಡಿಗಾಗಿ ವ್ಯಾಪಾರ ಬೇಟೆ ಮತ್ತು ಇತರ ದಬ್ಬಾಳಿಕೆಗಳಿಂದ ಮಹಾರಾಷ್ಟ್ರವನ್ನು ಬಿಟ್ಟು ಕರ್ನಾಟಕ ರಾಜ್ಯದಲ್ಲಿ ನೆಲೆಸಲು ಬಂದರು. ಕೆಲವರು ಮೈಸೂರು ಒಡೆಯರ ಆಸ್ಥಾನದಲ್ಲಿ ಪ್ರಾಣಿಪಕ್ಷಿಗಳನ್ನು ಹಿಡಿದು ತಂದು ಪಕ್ಷಿಧಾಮ ನಿರ್ಮಿಸಲು ನೇಮಿಸಿಕೊಂಡರು. ಅವರು ಈಗಲೂ ಮೈಸೂರು ಜಿಲ್ಲೆಯ ಸುತ್ತಮುತ್ತ ವಾಸವಾಗಿದ್ದಾರೆ ಮತ್ತು ಇನ್ನೂ ಅಲೆಮಾರಿಗಳಾಗಿ ಜೀವನ ನಡೆಸುತ್ತಿದ್ದಾರೆ.

ಗೋತ್ರ ಅಥವಾ ಬೆಡಗುಗಳು

೧. ಕಾಳಿವಾಳೋ   ೨. ಗುಜರಾತೀಯೋ

೩. ಮೇವಾಡೋ   ೪. ಪವಾರ್

ಬೇರೆಯವರು ಸಮುದಾಯಕ್ಕೆ ಕರೆಯುವ ಪದಗಳು

| | |
|---|---|
| ೧. ಹಕ್ಕಿಪಿಕ್ಕಿ | ೨. ಚೆಂಚರು |
| ೩. ಶಿಕಾರಿ | ೪. ಹರಣಿ ಶಿಕಾರಿ |
| ೫. ಚಿಗರಿಕಾರರು | ೬. ನರಿಶಿಕಾರಿ |
| ೭. ಅಡವಿ ಚೇಂಚರು | ೮. ವ್ಹಾಗ್ರಿ |
| ೯. ಬೇಲ್‌ಪಾರ್ಧಿ | ೧೦. ಪಾಶಿಹಕ್ಕಿಪಿಕ್ಕಿ |
| ೧೧. ಬೇಟೆಗಾರರು | ೧೨. ನೀರ್‌ಶಿಕಾರಿ |
| ೧೩. ನರಿಕೊರವ | ೧೪. ಕುರುವಿಕಾರನ್ |
| ೧೫. ಮೇಲ್‌ಶಿಕಾರಿ | ೧೬. ಪಿಂಡಂಡೆ |
| ೧೭. ವಾಗ್ ಫೀಖ್ಯಣ್ಯಾ | |

ಸಮುದಾಯದವರು ಸಮುದಾಯಕ್ಕೆ ಕರೆಯುವ ಪದಗಳು

೧. ಬಾವುರಿ

೨. ವ್ಹಾಗ್ರೀ

೩. ಪಾರ್ಧಿ

ಪದ ನಿಷ್ಪತ್ತಿ: ಹಕ್ಕಿಯನ್ನು ಹೆಕ್ಕಿ ತಿನ್ನುವ ಸಮುದಾಯವನ್ನು 'ಹಕ್ಕಿಪಿಕ್ಕಿ' ಎಂದು ಕರೆಯುತ್ತಾರೆ. ಅದೇ ರೀತಿ ಚಿಗರೆಯನ್ನು ಬೇಟೆಯಾಡುವುದರಿಂದ 'ಹರಣ ಶಿಕಾರಿ' 'ಹರಣ್' ಎಂದರೆ ಕನ್ನಡದಲ್ಲಿ 'ಚಿಗರಿ' ಆದರಿಂದ ಹರಣಶಿಕಾರಿ ಎಂದು ಕರೆಯುತ್ತಾರೆ. ಹಗ್ಗದಿಂದ ಪಾಶಿ ಮಾಡಿ ಪ್ರಾಣಿ ಅಥವಾ ಪಕ್ಷಿಗಳನ್ನು ಬೇಟೆಯಾಡುವುದರಿಂದ 'ಪಾಶಿ ಪಾರ್ಧಿ' ಎಂದು ಕರೆಯುತ್ತಾರೆ. ಕಾಡಿನಲ್ಲಿ ಜೀವನ ಮಾಡುವುದರಿಂದ 'ಅಡವಿ ಛೇಂಚರ' ಎಂದು ಕರೆಯುತ್ತಾರೆ. ಬೇಟೆ ಆಡುವುದನ್ನು ಕಂಡು ಬೇಟೆಗಾರರು 'ಶಿಕಾರಿ ಜನ' ಎಂದು ಕರೆಯುತ್ತಾರೆ. ಹೀಗೆ ಜಾತಿಯ ಪದ ಹುಟ್ಟಿರುವುದು ಕಂಡುಬರುತ್ತದೆ.

ಹೆಸರಿನ ನಿಷ್ಪತ್ತಿ ಮತ್ತು ಮೂಲ ಕರ್ನಾಟಕದಲ್ಲಿ ವಾಸಮಾಡುವ ಹಕ್ಕಿಶಿಕಾರಿಗಳಿಗೆ ಮೇಲುಶಿಕಾರಿಗಳೆಂದೇ ಕರೆವುದು ವಾಡಿಕೆ. ಆದರೆ ಒಂದೆಡೆ ನೆಲೆನಿಲ್ಲದೆ ಆಹಾರಕ್ಕಾಗಿ ಊರಿಂದೂರಿಗೆ, ಕಾಡು ಮೇಡುಗಳನ್ನು ಅಲೆದಾಡುತ್ತ ಯಾವ ಜನಗಣತಿಗೂ ಸಿಗಲಾರದಷ್ಟು ಅಲೆಮಾರಿಗಳಾದ ಇವರನ್ನು ಹಕ್ಕಿಪಿಕ್ಕಿಗಳಿಗೆ ಹೋಲಿಸುತ್ತಲೂ, ಹಕ್ಕಿಯನ್ನು ಹಿಡಿದು ಪೆಕ್ಕು ಶಬ್ದ ನಿಷ್ಪನ್ನವಾಗಿ ಕೊನೆಗೆ "ಹಕ್ಕಿ ಪಿಕ್ಕಿ" ಎಂದು ಸರಕಾರದಿಂದ ಗುರ್ತಿಸಲ್ಪಟ್ಟರು.

ಮೂಲ ಹಕ್ಕಿಪಿಕ್ಕಿ ಬುಡಕಟ್ಟು ಒಂದೊಂದು ಪಂಗಡವರೂ ಒಂದೊಂದು ಮೂಲದಿಂದ ಬಂದವರಾಗಿದ್ದಾರೆ. ಕರ್ನಾಟಕದಲ್ಲಿನ ಹಕ್ಕಿಪಿಕ್ಕಿಯರು ತಾವು ಗುಜರಾತಿನಿಂದ ವಲಸೆ ಬಂದುದಾಗಿ ಹೇಳುತ್ತಾರೆ. ಇದು ಸಮಂಜಸವೂ ಆಗಿದೆ. ಈ ಜನರು ಮಾತನಾಡುವ ಭಾಷೆಗೆ "ವಾಗರಿಬೋಲಿ"ಯೆಂದು ಇತ್ತೀಚಿಗೆ ಗುರ್ತಿಸಲಾಗಿದೆ. ಬರುಬರುತ್ತಾ ಮೂಲ ಭಾಷೆ ತನ್ನ ಮೂಲರೂಪವನ್ನು ಆಯಾ ಪ್ರಾಂತ್ಯಗಳಲ್ಲಿ ವ್ಯಾವಹಾರಿಕವಾಗಿ ಬೆಳಸುವಾಗ ಬದಲಾವಣೆ ಗೊಂಡರೂ, ಬಹುಪಾಲು ಗುಜರಾತೀ ಭಾಷೆಯ ಅರ್ಥವನ್ನೇ ಉಳಿಸಿಕೊಂಡಿರುವುದನ್ನು ಗಮನಿಸಬಹುದು.

ಐತಿಹ್ಯ

ಹಿನ್ನೆಲೆ ಚರಿತ್ರೆ : ಪ್ರತಿ ಬುಡಕಟ್ಟು ಸಮುದಾಯಗಳಲ್ಲಿ ಒಂದಲ್ಲ ಒಂದು ಹಿನ್ನೆಲೆಯಿದ್ದೇ ಇರುತ್ತದೆ. ಅಂತೆಯೇ ಹಕ್ಕಿಪಿಕ್ಕಿ ಜನರಿಗೂ ಸಾಕಷ್ಟು ಹಿನ್ನೆಲೆಯಿದೆ. ಕಂಠಸ್ತವಾಗಿಯೇ ಇರುವ ಅವರ ಹಿನ್ನೆಲೆಗಳನ್ನು, ಆಚಾರ ವಿಚಾರ, ಸಂಪ್ರದಾಯಗಳನ್ನು, ಆಸಕ್ತಿ ಸಂಗ್ರಹಕಾರರು ಗ್ರಾಂಥಿಕ ರೂಪಕ್ಕೆ ತಂದಿರುವ ಅವಶ್ಯಕತೆಯಿದೆ.

೧. ಲಂಬಾಣಿಗರು ಹೇಳುವ ವಂಶಾವಳಿಯನ್ನು ಹಕ್ಕಿಪಿಕ್ಕಿಗರೂ ಹೇಳುತ್ತಾರೆ. ಅವರ ಆಚರಣೆ ಸಂಪ್ರದಾಯಗಳಲ್ಲಿ ಸಾಕಷ್ಟು ಸಾಮ್ಯತೆಯನ್ನು ಕಾಣಬಹುದು. ಜೋಗೇರು, ಬೈಲುಕಮ್ಮಾರರು, ಹಕ್ಕಿಪಿಕ್ಕಿಯರು, ಲಂಬಾಣಿಗರು, ಮಾರ್ವಾಡಿಗರೆಲ್ಲ ಒಂದೇ ತಂದೆಯ ಮಕ್ಕಳೆಂದು ಈ ಶ್ಲೋಕದಿಂದ ವ್ಯಕ್ತವಾಗುವುದು.

ಮೊದಲೇಮ ಥೂಡ್, ಧೂಡೇಮಾಯಿತ್ತಿ ಧಜ್
ಧಜ್ಜೇಮ ಕವಧಜ್, ಕವಧಜ್ಜೇಮ ಕೊರಪಾಳ್
ಕೊರಪಾಳೇತಿ ಅಭಿಚಂದಾ, ಅಭಿಚಂದೇತಿ ವಗಾದ್

ವಗಾದೇತದಿ ಜಗಾದ್ ಜಗಾದೇತಿ ಸರಿಸೂರಚ್
ಸರಿಸೂರಬೇಕ ಬೇಟೇಟದೀ, ಹಾಬಲ್ ಕ ಹಿಂದೂ
ಕಾಬೂಲ್‌ಕ ಮುಸಲ್ಮಾನ್, ಓರ್‌ಕರಣ್ ಹುಯೋ
ಕರಣೇತಿ ಕಾಸಿಂ, ಕಾಸಿ ಮೇತಿ ರತನ್
ರತನೇರ್ ಬೇಟ್ಬೇಟದೀ, ತೀಡಾನ್ ಥಾಡ
ತೀಡರ್ ಕೋರ್, ಥಾಡರೋಗೋರ್.
(ಇಲ್ಲಿ 'ಕೊರ್'ಗಳೆಂದರೆ ವಾಗ್ರಿ 'ಗೋರ್' ಎಂದರೆ ಲಂಬಾಣಿಗಳು)

ಲಂಬಾಣಿಗಳೂ 'ತೀಡಾನ್‌ಥಾಡ' ಅನುತ್ತ ತೀಡಾನಲ್ಲಿ ಹಕ್ಕಿಪಿಕ್ಕಿಯರೂ ಥಾಡಾನಲ್ಲಿ ಲಂಬಾಣಿಗಳೂ ಹುಟ್ಟಿದರೆನ್ನುತ್ತಾರೆ. ಆದರೆ ಹಕ್ಕಿಪಿಕ್ಕಿಯರ ಹಿರಿಯರು 'ತೀಡಾನ್‌ಥಾಡಾ' ಬದಲು 'ಆಡರ್ ತೀಡಾ' ಎನ್ನುತ್ತಾ ಆ ತೀಡಾನಿಗೆ ಇಬ್ಬರು ಹೆಂಡಿರು ಸೋನಾದಾದಿ ಮತ್ತು ರೂಪ್ಲಿಬಾಯಿ, ಈ ಸೋನಾದಾದಿಯಲ್ಲಿ ಹುಟ್ಟಿದವರು ಜೋಗೀರು, ಬೈಲುಕಮ್ಮಾರರು, ವಾಗ್ರಿ(ಹಕ್ಕಿಪಿಕ್ಕಿ) ಗಳು ಮುಂದೆ ಮಹಾರಾಷ್ಟ್ರದಲ್ಲಿ ಸೋನವಾಗ್ರಿಯೆಂದೇ ಬಳಕೆಯಲ್ಲಿದ್ದಾರೆ. ಇನ್ನು ರೂಪ್ಲಿಬಾಯಿಯಲ್ಲಿ ಲಂಬಾಣಿಗಳು ಮತ್ತು ಮಾರ್ವಾಡಿಗಳ ಜನನವಾಯಿತು. ಮುಂದೆ ಲಂಬಾಣಿಯರ ಹೆಂಗಸರು ರೂಪ್ಲಿಬಾಯಿಯ ಹೆಸರಲ್ಲಡಕವಾಗಿರುವ 'ಬಾಯಿ' ಪದವನ್ನು ತಮ್ಮ ಹೆಸರಿನ ಮುಂದೆ ಇಟ್ಟುಕೊಳ್ಳುವುದನ್ನು ಗಮನಿಸಬಹುದು. ಇದಕ್ಕೂ ಶ್ಲೋಕವಿದೆ.

ಆಡನ ಮಗ
|
ತೀಡಾ
|

| ಸೋನಾದಾದಿ (ಟೀಕಂದಾರಿಣಿ) | ರೂಪ್ಲಿಬಾಯಿ (ಪಾಟ್‌ಆದವಳು) |
|---|---|
| ೧. ಜೋಗಡೂರ್ (ಜೋಗೀರು) | ೧. ಮೊಲಾರ್ ಗುವಾರ್ (ಲಂಬಾಣಿಗಳು) |
| ೨. ಖೀಮಡಾರ್ ತೇರಮಾ (ಬೈಲುಕಮ್ಮಾರರು) | ವಡತ್ಯೋ (ಥಾಢಿ) (ಡಾಲ್ಯ) ಲಬ್ಬಾಣಿಯೋ |
| ೩. ಭೀಮಡಾರ್ ನಾತ್ರಾರ್ ವಾಗ್ರಿ (ಹಕ್ಕಿಪಿಕ್ಕಿಯರುಅಥವಾ ವಾಗ್ರಿಗಳು) | ೨. ಮಲರ್ ಮೋಟೋ (ಮಾರ್ವಾಡಿಗಳು) |

ಶ್ಲೋಕ : ಜೋಗೀರರ್ ಜೋಗಡೋ, ಖೀಮಡಾರ್ ತೇರಮಾ, ಭೀಮಡಾರ್ ನತ್ರಾ ನತ್ರಾರ್ ವಾಗ್ರಿ. ಮೊಲಾರ್ ಗುವಾರ್, ವಡತ್ಯೋ ಲಬ್ಬಾಣಿಯೋ, ಮಲರ್ ಮೋಟೋ.

೨. ದಾದಾಜಿ(ಈಶ್ವರ)ಗೆ ಐವರು ಮಕ್ಕಳು ಜೋಗಿರು, ಬೈಲುಕಮ್ಮಾರರು ವಾಗ್ರಿಗಳು (ಹಕ್ಕಿಪಿಕ್ಕಿಯರು) ಲಂಬಾಣಿಯರು, ಮಾರ್ವಾಡಿಗಳಾಗಿದ್ದರು, ಒಮ್ಮೆ ಭೀಕರ ಬರಗಾಲ

ಬಂದಾಗ ತಂತಮ್ಮ ಹೊಟ್ಟೆಪಾಡಿಗಾಗಿ ಚದುರಿ ಹೋಗಬೇಕಾಯಿತು. ಜೋಗಿರು ಗೀಗೀಪದ ಹಾಡುತ್ತ ಊರೂರುಲೆಯಬೇಕಾಯ್ತು, ಬೈಲುಕಮ್ಮಾರರು ಕಮ್ಮಾರ ಕೆಲಸವನ್ನು ಉದ್ಯೋಗ ವಾಗಿಸಿಕೊಂಡರು. ಲಂಬಾಣಿಗಳು ಕಾಡಿನಿಂದ ಸೌದೆ ಮತ್ತು ಚಿಕ್ಕಪುಟ್ಟ ಹಣ್ಣುಗಳನ್ನು ಮಾರುತ್ತ ಜೀವನ ಸಾಗಿಸಲು ಮುಂದಾದರು. ಮಾರವಾಡಿಗಳು ಇದ್ದ ಬಿದ್ದಿದ್ದನ್ನೆಲ್ಲ ಕಿತ್ತುಕೊಂಡು ನಗರ ಪಟ್ಟಣಗಳಲ್ಲಿ ಸೇರಿಕೊಂಡು ವ್ಯಾಗ್ರಿಗಳಿಗೆ ಶಿಕಾರಿ ತಿಳಿದಿದ್ದರಿಂದ ಕಾಡಿನೊಂದಿಗೆ ತಮ್ಮ ನಂಟನ್ನು ಬೆಳೆಸಿಕೊಂಡು ನಗರ ಪ್ರದೇಶಗಳ ಸಂಪರ್ಕದಿಂದ ದೂರವಿದ್ದ ಕಿನ್ನಲಾಗಿದೆ.

ಪರ್ಯಾಯ ಪದಗಳು

ಹಕ್ಕಿಪಿಕ್ಕಿಯವರನ್ನು ಬೇರೆ ಬೇರೆ ಪ್ರಾಂತ್ಯಗಳಲ್ಲಿ, ಕಾಡುಮೇಡುಗಳಲ್ಲಿ ವಾಸಮಾಡುತ್ತಿದ್ದರಿಂದ ಅಲ್ಲಲ್ಲಿಯ ಬೇಟೆ ಹಾಗೂ ಕುಲಕಸುಬಿಗೆ ತಕ್ಕಂತೆ ಗುರ್ತಿಸಲ್ಪಡುವುದನ್ನು ಈ ಕೆಳಕಂಡಂತೆ ಗಮನಿಸಬಹುದಾಗಿದೆ.

| ಪರ್ಯಾಯ ಪದಗಳು | ರಾಜ್ಯಗಳು |
|---|---|
| ೧. ಹಕ್ಕಿಪಿಕ್ಕಿ, ಹಕ್ಕಿಶಿಕಾರಿ, ಮೇಲುಶಿಕಾರಿ | ಕರ್ನಾಟಕ |
| ೨. ನಕಪೇಟೆವಾಳ್ ಅಥವಾ ನರಿಶಿಕಾರಿ | ಆಂಧ್ರಪ್ರದೇಶ್ |
| ೩. ಶಲಾಜತ್ ವಾಳ | (ಪಂಜಾಬ್) ನೇಪಾಳ |
| ೪. ಪಹಾಡಿ ರಾಷ್‌ಪೂತ | ಮಧ್ಯಪ್ರದೇಶ, ರಾಜಾಸ್ಥಾನ |
| ೫. ತೇಲವೇ ಚವಾಳ್ಯ ತೇಲಡ್ಯ | ಉತ್ತರಪ್ರದೇಶ ಮತ್ತು ಪಂಜಾಬ್ |
| ೬. ವಿಲ್ಲಕನಾರು, ಝುರಕ್ಯಾ | ತಮಿಳುನಾಡು, |
| ೭. ಸೋನವಾಗರಿ | ಮಹಾರಾಷ್ಟ್ರ |
| ೮. ಕುರಿವಿಕಾರನ್, ನರಿಕೊರವ | ತಮಿಳು ನಾಡು |
| ೯. ನಿಮ್ಮಡ್ಯೋ, ಗುಜ್ಜರ್‍ಯೋ, ಮಹರ್‍ಯಾಡ್ಯೋ, ಶಿಶೋದ್ಯ ಕಾಳಿವಾಳ, ಗೋಬರ್‍ಯೋ, ವಚಿಣ್ಯೋ, ಮಾಳಿವಾಳೊ ಕವಡ್ಯಾ, ಪವಾರೋ ಮತ್ತು ಡೋಕರಿ | ರಾಜಸ್ಥಾನ |

ಹಕ್ಕಿಪಿಕ್ಕಿ ಬುಡಕಟ್ಟು ಜನಾಂಗದಲ್ಲಿ ಪ್ರಮುಖವಾಗಿ ನಾಲ್ಕು ಪ್ರಧಾನ ಗೋತ್ (ಬೆಡಗು) ಗಳಿವೆ. ೧. ಬೋಕ್ಡಾವಾಳೊ, ಹಬ್ಬಗಳಲ್ಲಿ ದೇವಿಗೆ ಹೋತ ಬಲಿಯನ್ನು ಕೊಡುವವನ್ನು ಲಂಬಾಣಿಗರು 'ಜಾತ್' ಎನ್ನುತ್ತಾರೆ, ಇವರಲ್ಲಿ ಮೇವಾಡವಾಳೋ ಬರುತ್ತಾರೆ. ೨. ಭೇಂಸಾವಾಳೋ, ಹಬ್ಬಗಳಲ್ಲಿ ದೇವಿಗೆ ಕೋಣನ ಬಲಿಯಕೊಡವವನ್ನು. ಲಂಬಾಣಿಗರು, 'ಭೂಕ್ಯ' ಎನ್ನುತ್ತಾರೆ, ಗುಜರಾತ್ಯೋ ಬರುತ್ತಾರೆ. ೩. ಪವಾರ್, ಹಬ್ಬಗಳಲ್ಲಿ ಹೋತ, ಕೋಣ ಬಲಿ ಕೊಡುವವರು. ಈ ಪಂಗಡದವರು ಉಳಿದೆರಡು (ಪಂಗಡ) ಗೋತ್‌ದವರೊಂದಿಗೆ ಸಂಬಂಧವನ್ನು (ಗಂಡು ಹೆಣ್ಣು ಕೊಡುವ ತೆಗೆದುಕೊಳ್ಳೊ) ಬೆಳೆಸಬಹುದಾಗಿದೆ. ಲಂಬಾಣಿಗಳು 'ಪವಾ'

ಎನ್ನುತ್ತಾರೆ. ೪. ಕಾಳಿವಾಳರು, ಹಬ್ಬಗಳಲ್ಲಿ ಹೋತನ ಬಲಿ ಕೊಡುತ್ತಾರೆ. ಲಂಬಾಣಿ ಗಳು "ಮೂಡ್" ಎನ್ನುತ್ತಾರೆ.

**ಸಮುದಾಯಕ್ಕೆ ಬೇರೆಯವರು ಕರೆಯುವ ಪದಗಳು** ಹಕ್ಕಿಪಿಕ್ಕಿಯರು, ಹಕ್ಕಿ ಶಿಕಾರಿಗರು, ಮೇಲು ಶಿಕಾರಿಗರು, ಎಂದು ಅನ್ಯರು ಕರೆದರೆ, ಲಂಬಾಣಿಗರು "ಕೋರ್‌ಭಿಯಾ" ಅಥವಾ "ವಾಗ್ರಿಭೀಯಾ" ಎಂದೇ ಸಂಬೋಧಿಸುತ್ತಾರೆ.

**ಸಮುದಾಯದವರು ಸಮುದಾಯಕ್ಕೆ ಕರೆಯುವ ಪದಗಳು ಮತ್ತು ಗುರ್ತಿಸುವಿಕೆ**

ಪರಸ್ಪರ ಸಮುದಾಯವನ್ನು 'ವಾಗ್ರಿ'ಗಳೆಂದೇ ದೇಶಾದ್ಯಂತ ಗುರ್ತಿಸಿಕೊಳ್ಳುತ್ತಾರೆ. ಪರಿಚಯದ ನಂತರದಲ್ಲಿ ತಾವುಗಳು ಯಾವ ಗೋತ್ರದಲ್ಲಿ ಬರುವರೆಂಬುದರ ಹುಡುಕಾಟದಲ್ಲಿ ತೊಡಗುತ್ತಾರೆ. ಉದಾಹರಣೆ ಕೇಳುವ ವ್ಯಕ್ತಿ ವಾಗ್ರಿಯಾಗಿದ್ದು, ಬೋಕ್ನಾವಾಳೋ ಆಗಿದ್ದರೆ, ಎದುರಿಗಿರುವ ಅಪರಿಚಿತ ವಾಗ್ರಿ, ಕೇಳುವ ವಾಗ್ರಿಯೊಂದಿಗೆ ತಮ್ಮ ವೈಯಕ್ತಿಕ ಸಂಬಂಧವನ್ನು ಪ್ರಧಾನ ಗೋತ್ರಗಳಡಿಯಲ್ಲಿ ಗುರ್ತಿಸಿಕೊಳ್ಳಲು ಪ್ರಯತ್ನಿಸುವುದನ್ನು ಒಂದು ಚಿಕ್ಕ ಘಟನೆಯ ಮೂಲಕ ಅರ್ಥವಾಗುವಂತೆ ಬಿಡಿಸಲು ಪ್ರಯತ್ನಿಸಲಾಗಿದೆ.

**ವಾಗ್ರಿ :** (ನೀವು) ತುಮೆ ಭೇಂಖಾವಾಳೋಕಿ? ಬೋಕ್ನಾವಾಳೋ?

**ಅಪರಿಚಿತವಾಗ್ರಿ:** (ನಾವು) ಹಮೆ ಬೋಕ್ನಾವಾಳಾ

**ವಾಗ್ರಿ :** ಇಂಕತೋ, ಮೇಭಿ ಭೋಕ್ನಾವಾಳೋ, ಅಪಣೆ ಭೈಭೈ ಹಾಗಾದ್ರೆ ನಾನು ಬೋಕ್ನಾವಾಳೋ ನಾವು ಸೋದರ ಸಮಾನರು.

**ಅಪರಿಚಿತ ವಾಗ್ರಿ:** ಹಮೆ ಭೇಂಖ್ಯಾವಾಳಾ

**ವಾಗ್ರಿ :** ಇಂಕತೋ ಅಪಣೆ ಖಿಗು ಭಂದಾಯೆ ಜಾಯ್, ಖಾಳೋ ಹುವಾಸ್ (ಹಾಗಾದ್ರೆ ನಾವುಗಳು ಸಂಬಂಧಿಕರಾಗುತ್ತೇವೆ. ಭಾವ ಮಾವ ಆಗುತ್ತೀರಿ).

**ಮತ್ತೊಬ್ಬ ವಾಗ್ರಿ:** ಹಮೆ ತುಮೇಭಿ ಖಿಗೋಸ್ (ನಾವು ನೀವೂ ಸಂಬಂಧಿಕರೇ) ಹೀಗೆ ಪರಸ್ಪರರು ಸಮುದಾಯಕ್ಕೆ ಕರೆಯುವ ಪದಗಳಿಂದ ಸಂಬಂಧಗಳನ್ನು ಹುಡುಕಲು ಪ್ರಯತ್ನಸುತ್ತಾರೆ. ನಂತರದಲ್ಲಿ ತಲೆಮಾರಿನಲ್ಲಿ ಯಾವ ಒಳಗೋತ್ ಅಥವಾ ಬಳಿಯಲ್ಲಿ ಬರುವವರಾಗುತ್ತೇವೆಂದು ಚರ್ಚಿಸುತ್ತಾರೆ.

**ಸಮುದಾಯವನ್ನು ವೃತ್ತಿ ಹಿನ್ನೆಲೆಯಲ್ಲಿ ಗುರ್ತಿಸುವುದು**

೧. ಮೇಲುಶಿಕಾರಿಗರನ್ನು ಹಕ್ಕಿಶಿಕಾರಿಗಳು 'ಹಕ್ಕಿಪಿಕ್ಕಿ'ಗಳೆಂದು ಗುರ್ತಿಸುತ್ತಾರೆ.

೨. ಬರಗಾಲದಲ್ಲಿ ಹೆಂಡತಿ ಮಕ್ಕಳು ಉಪವಾಸವಿದ್ದುದನ್ನು ನೋಡಲಾಗದೆ ಸತ್ತ, ಕೊಳೆತ ಪ್ರಾಣಿ ಅಥವಾ ಮನುಷ್ಯರ ಮಾಂಸಗಳನ್ನು ಕಿತ್ತು ತಿನ್ನುತ್ತಿದ್ದ ನರಿಗಳ ಬೇಟೆಯಾಡಿ, ಅದರ ಮಾಂಸವನ್ನೇ ತಿಂದು ಜೀವಿಸುತ್ತಿದ್ದರು. ಆಂಧ್ರಪ್ರದೇಶಗಳಲ್ಲಿ ನೆಲೆಸಿದವರನ್ನು 'ನಕಪೇಟ್' ವಾಳರು 'ನರಿ ತಿನ್ನುವವರು' ಅಥವಾ 'ನರಿಶಿಕಾರಿ'ಗಳೆಂದು ಗುರ್ತಿಸುತ್ತಾರೆ.

೩. ಗುಡ್ಡಗಾಡುಗಳಲ್ಲಿ ವಾಸಿಸುತ್ತಿದ್ದು ತಮ್ಮ ಚಾಣಾಕ್ಷತನದಿಂದ ಬೇಟೆಗಾರಿಕೆಯಲ್ಲಿ ಚತುರರಾಗಿದ್ದ ಜನಾಂಗವನ್ನು ಶಿಶೋದ್ಯನಾದ ಚಿತ್ತೋಡ್‌ಗಡದ ಮಹಾರಾಣಾ ಪ್ರತಾಪಸಿಂಗ್,

ಮಾರವಾಡ್ ಪಂಗಡದ ಧೀರರೂ ಆದ 'ಜಮಲ್-ಫತ್ತೋ'ನನ್ನು ಸೈನ್ಯದ ಮುಖ್ಯಾಧಿಕಾರಿಯನ್ನಾಗಿ ನೇಮಿಸಿದ. ರಾಣಾನ ಅಭಿಮಾನಸಕ್ತರಾದವರು ತಮ್ಮನ್ನೂ ರಾಣಾಗಳು "ಪಹಾಡಿ ರಾಜ್ ಪ್ರೌತ್‌ಗಳು" ಎಂದೂ (ರಾಜ್ ಪಾರಧಿಗಳನ್ನುವರೆನ್ನುತ್ತಾರೆ). ಕರೆಸಿಕೊಂಡರು. ಇಲ್ಲಿ,

| | |
|---|---|
| ೧. ಶಿಶೋದ್ಯವಾಳೋ | ೨. ಮಾರ್‌ವಾಡ್ |
| ೩. ಝಾಲ್ಲಿವಾಡ | ೪. ಏಚಿಣ್ಯೋ |
| ೫. ಡೋಕರಿ | ೬. ಕವರ್ಡ್ಯಾ |
| ೭. ಮಾಳಿವಾಳೋ | ೮. ಕಾಳಿವಾಳೋ |
| ೯. ಗುಜರಾತ್ಯೋ | ೧೦. ನಿಮ್ಯಾಡ್ಯೋ |
| ೧೧. ಗೊಬರ್ಯೋ | ೧೨. ಪವರ್ಯೋಗಳು |

"ವಾಗ್ರಿ" ಪಂಗಡಗಳು.

೪. ಯಾವ ಭೇದ ಭಾವವಿಲ್ಲದೆ ಭಿಕ್ಷೇಬೇಡಿ ತಂದು ಊಟತಿಂಡಿಗಳನ್ನು ಒಂದೇ ಪರ್ರ್ಯೋ(ದೊಡ್ಡ ಹರಿವಾಣ)ದಲ್ಲಿ ಸುರಿದು ಆಯಾ ಕುಟುಂಬದವರು ಹಿಂದೆಲ್ಲ ಉಣ್ಣುತ್ತಿದ್ದವರನ್ನು 'ಏಕ್ಯಕನಾರು' ಎಂಜಲು ತಿನ್ನುವವರು' ಎಂದೇ ಗುರ್ತಿಸಲ್ಪಟ್ಟಿರು. ಆದರೆ ಇತ್ತೀಚಿನವರನ್ನು ಹಾಗೆ ಕರೆದರೆ ಸಿಡಿಮಿಡಿಗೊಳ್ಳುತ್ತಾರೆ. ಹಾಗಾಂತ ಆ ಹೆಸರಿನ ನಿಷ್ಪತ್ತಿಯನ್ನು ಬದಲಾಯಿಸಲಾಗುವುದಲ್ಲ.

೫. ತೇಲಡ್ಯು ಅಥವಾ ತೇಲವೇಚವಾಳ್ಯು ವಿವಿಧ ಪ್ರಾಣಿ-ಪಕ್ಷಿಗಳ ಕಾಲು ತಲೆಯನ್ನು ಚೆನ್ನಾಗಿ ಒಣಗಿಸಿ, ಅಗಲವಾದ ಚೌಕಾಕಾರದ ಡಬ್ಬದಲ್ಲಿರಿಸಿ ಮೂರು ತರಹದ ಎಣ್ಣೆಯನ್ನು ಎಲ್ಲ ತರಹದ ನೋವುಗಳಿಗೆ ಮಸಾಜ್ ಮಾಡಲು ಬಳಸುತ್ತಾರೆ. ಇದರಲ್ಲಿ ಹಲವು ವಿಧಗಳಿವೆ. ಉದಾ. ಉಡದ ಎಣ್ಣೆ, ನವಿಲಿನ ಎಣ್ಣೆ, ಷಾಂಡೂದ ನಾರಾಯಣಿ ಎಣ್ಣೆ, ಬೆಳ್ಳುಳ್ಳಿ ಎಣ್ಣೆ ಇತ್ಯಾದಿ.

೬. ವಾಗ್‌ಘೀಬಿಣ್ಯು, ಫಾಶಪಕ್ಕಿಪಿಕ್ಕಿ ಹರಣ ಹಕ್ಕಿಪಿಕ್ಕಿ (ಟಿಗರೆಪಾರ್ಧಿ) ಹಿಂದೆ ರಾಜ ಮತ್ತು ಆತನ ಮುಖ್ಯ ಸೇವಕರಿಗೆ ಹುಲಿ ಮತ್ತು ಸಿಂಹದ ಮರಿಗಳನ್ನು ತಂದು ಒಪ್ಪಿಸುತ್ತಿದ್ದ ಒಂದು ದಷ್ಟಪುಷ್ಟ ಧೀರ ತುಕಡಿಯಾಗಿತ್ತು. ಈ ಸಮುದಾಯದವರು ಪಾಶಗಳನ್ನು ಬಳಸಿ ಜಿಂಕೆ ಹಾಗೂ ರಾಜರ ಬೇಡಿಕೆಯ ಪ್ರಾಣಿಗಳನ್ನು ಹಿಡಿದು ತಂದೊಪ್ಪಿಸುತ್ತಿದ್ದರಿಂದ ಆ ಹೆಸರುಗಳ ನಿಷ್ಪತ್ತಿಯಾಗಿದೆ. ಕ್ರಮೇಣ ಇವರೂ ಕೂಡ ಪಿಂಡಂಡೆ (ಪಾರ್ಧಿ) ಮತ್ತು ಭರಗಡ್ಯು (ಬಗಾಡೆ)ಗಳ ಜೀವನ ಶೈಲಿಯಂತೆ ಬದುಕುವಂತಾಯಿತೆನ್ನುತ್ತಾರೆ.

೭. ಪಿಂಡಂಡೆ ಸಂಪಾದನೆಗಳು ಕುಟುಂಬದ ಜೀವನ ನಡೆಸಲು ಸಾಧ್ಯವಾಗದಾದಾಗ ಅನಿವಾರ್ಯವಾಗಿ ಹೆಂಡತಿ ಮಕ್ಕಳ ಉಳಿವಿಗಾಗಿ ಚಿಕ್ಕಪುಟ್ಟ ಕಳ್ಳತನ ದರೋಡೆಗಳನ್ನು ರೂಢಿಸಿಕೊಂಡರು. ತಾವೂ ಹಕ್ಕಿಪಿಕ್ಕಿಯರೆಂದು ಹೇಳಿಕೊಳ್ಳುವ ಇವರನ್ನು ಕರ್ನಾಟಕದ ಹಕ್ಕಿಪಿಕ್ಕಿಯರು ಒಪ್ಪಿಕೊಳ್ಳುವುದಿಲ್ಲ. ಅವರೂ ಕೂಡ ಹಕ್ಕಿಪಿಕ್ಕಿಯರನ್ನು ಸೇರದೆ ದೂರವಾಗೇ ಉಳಿದರು.

ಈ ಸಾಲಿನಲ್ಲಿ ಬೇಲ್‌ಹಕ್ಕಿಪಿಕ್ಕಿ ಫಾಶಿಪಾರ್ಧಿ ಹರಣ (ಚಿಗರೆ) ಪಾರ್ಧಿಗಳೂ ಬರುತ್ತಾರೆ. ಆದರೆ ಶಿಶೋದ್ಯರೆನ್ನುವ ರಾಜಾಸ್ಥಾನದಲ್ಲಿರುವ 'ರಾಜ ಪಾರಧಿ'ಗಳೆನ್ನುವ ಪಹಾಡಿ ರಾಷ್‌ಪೂತ್‌ಗಳಿಗೂ ಕರ್ನಾಟಕದ ಹಕ್ಕಿಪಿಕ್ಕಿಯರಿಗೂ ಸಂಬಂಧವಿರುವುದನ್ನು ಖಾಂದಾನಿನ ತಲೆಮಾರುಗಳಿಂದ ತಿಳಿದುಬರುತ್ತದೆ.

ಹಕ್ಕಿಪಿಕ್ಕಿಯರು ಬಹಳಷ್ಟು ಸರಾಯಿ ಕುಡಿಯುತ್ತಾರೆ. ತಿರುಗಾಟದ ಹಕ್ಕಿಪಿಕ್ಕಿಯವರ ಮೈ ಬಣ್ಣವು ಬಹಳ ಕಪ್ಪು ಅಥವಾ ಎಣ್ಣೆಗೆಂಪು ಇರುವುದು. ಇವರು ಸರಾಸರಿ ಉದ್ದವಿದ್ದು (ಎತ್ತರ), ಚಪಲರೂ, ಕಟ್ಟಾಳುಗಳೂ ಆಗಿರುತ್ತಾರೆ. ಇವರ ಉಡಿಗೆ ತೊಡಿಗೆ ನೋಡಿದರೆ ಈ ಬುಡಕಟ್ಟಿನವರ ಗುರುತು ಸಿಗದೇ ಇರಲಾರದು. ಇವರು ಕೊರಳಲ್ಲಿ ಗಲೋಲ್ (ಚಾಟ್) ಕರೀ ಕಟ್ಟಿಗೆಯ ಸೀಟಿ (ಸಿಳ್ಳು ಅಥವಾ ಫೀಕ್, ಕೊಳವೆ)ಯನ್ನು ಹಾಕಿಕೊಳ್ಳುತ್ತಾರೆ. ಅದನ್ನು ಊದಿ ಕೌಜು ಪಕ್ಕಿಯಂತೆ ಶಬ್ದವನ್ನು ಮಾಡುವರು. ತಿರುಗಾಟದ ಹಕ್ಕಿಪಿಕ್ಕಿಯರು ತಮ್ಮ ಹೆಂಡಿರು ಮಕ್ಕಳನ್ನು ಸಂಗಡ ಕಟ್ಟಿಕೊಂಡೇ ಊರೂರು ತಿರುಗಾಡುವರು.

ಕುಲ/ಗೋತ್ರ ಮತ್ತು ಉಪಕುಲ/ಗೋತ್ರ ಪದ ನಿಷ್ಪತ್ತಿಯ ಹಿಂದಿನ ನಂಬಿಕೆಗಳು ಐತಿಹ್ಯಗಳು ಹಕ್ಕಿಪಿಕ್ಕಿ ಬುಡಕಟ್ಟಿನಲ್ಲಿ ಪ್ರಮುಖವಾಗಿ ಪಂಗಡಗಳು ನಾಲ್ಕು. ಅವುಗಳು ಕೆಳಕಂಡಂತಿವೆ.

**ಅ. ಮೇವಾಡೋದವರು:** ರಾಜಸ್ಥಾನದ ಚಿತ್ತೋಡ್‌ಗಡದಿಂದ ಬಂದ ಒಳಪಂಗಡಗಳು ಈ ಕೆಳಕಂಡಂತಿವೆ. ರಾಣಾಪ್ರತಾಪಸಿಂಗ್‌ನ ಸೈನ್ಯದಲ್ಲಿದ್ದವರೆನ್ನಲಾದ್ದರಿಂದ, ಆತನ ಅಭಿಮಾನ ಸಕ್ತರಾದ ಹಕ್ಕಿಪಿಕ್ಕಿಗರ ಮೇವಾಡೋ ಪಂಗಡದವರು ಸರಿಸುಮಾರಾಗಿ ಒಂಬೈನೂರು ಮಂದಿಯಿದ್ದರೆಂದು ಐತಿಹ್ಯವಿದೆ. "ನೌಸ್ಸೋ ರಾಣೋ=ಒಂಬೈನೂರು ರಾಣೆಗಳು=ನೌಸೋ ರಾಣೋ" ಎಂದೇ ಈಗಲೂ ತಮ್ಮನ್ನು ಗುರ್ತಿಸಿಕೊಳ್ಳುವಾಗ ರಾಣಾನನ್ನು ಸ್ಮರಿಸಿಕೊಳ್ಳುವುದನ್ನು ಗಮನಿಸಿಬಹುದು. ಇವರ ಮೂಲಪುರುಷ ಭೈರುನಾಥ್, ಪೌರಾಣಿಕದಲ್ಲಿ ಚಾಮುಂಡಿ ದೇವಿಯ ರಥವನ್ನು ಎಳೆಯಲು ಸೀಮಿತರಾದವರಲ್ಲಿ, ಒಬ್ಬ ಕಟ್ಟು ಸಮಸ್ತಾದ ಮಡಿವಂತ ಹಾಗೂ ಧೀರನಾದ ಪೂಜಾರಿಯೂ ಆಗಿದ್ದನೆಂದು ತಲೆಮಾರನ್ನು ಹೆಸರಿಸುವಲ್ಲಿ ನೋಡಬಹುದು.

ನೌಸೋ ರಾಣೋಗಳೆಂದರೆ: (ಒಂಬೈನೂರು ರಾಣೋಗಳು) ಪ್ರಮುಖರಾದವರು

| | |
|---|---|
| ೧. ನಂದೇವಾಳೋ | ೨. ಗ್ಯಾನಿವಾಳೋ |
| ೩. ಬಾಳುವಾಳೋ | ೪. ತುಲ್ಲೋವಳೋ |
| ೫. ಭಗೋವಾಳೋ | ೬. ಖಿತ್ರೋವಾಳೋ |
| ೭. ಶ್ಯಾಮ್‌ವಾಳೋ | ೮. ಅಂಬೋವಾಳೋ |

೯. ನಾಗೋವಾಳೋ ಗಳಾಗಿದ್ದಾರೆ. ಇಲ್ಲಿ "ವಾಳೋ" ಎಂದರೆ "ಗಳು" ಅಥವಾ "ದವರು" "ನವರು" ಆಗುತ್ತದೆ.

**ಆ. ಗುಜರಾತ್ಯೋದವರು** ತಮ್ಮ ಮೂಲ ಸ್ಥಾನ ಗುಜರಾತ್ ಎಂದು ಹೇಳುತ್ತಾರೆ. ಬರಗಾಲದಲ್ಲಿ ತಮ್ಮ ಪೂರ್ವಿಕರು ಹೊಟ್ಟೆಪಾಡಿಗಾಗಿ ಅಲೆದಾಡುತ್ತ ಇತ್ತ ಬಂದುದಾಗಿ,

ಇವರೂ ಕೂಡಾ ಸರಿಸುಮಾರಾಗಿ "ಬಾರಹಬ್ಬೆ ಗುಜರಾತ್ಯೋಗಳು" = "ಹನ್ನೆರಡು ಗುಜರಾತ್ ಸಹೋದರರು" ಇದ್ದರೆಂದು ಈಗಲೂ ಹೇಳುತ್ತಾರೆ. ಇವರಾಡುವ ಭಾಷೆಗೆ ಗುಜರಾತೀ ಸಾಮ್ಯವಿದೆ. ಇದು ಬರುಬರುತ್ತ ಆಯಾ ಪ್ರಾಂತ್ಯಗಳ ಭಾಷೆಗಳಿಗನುಸಾರವಾಗಿ ಬದಲಾಗುತ್ತದಾದರೂ ತಮ್ಮ ವಾಸ್ತವತೆಯನ್ನು ಉಳಿಸಿಕೊಂಡಿದೆ. ಇವರ ಮೂಲಪುರುಷ ಪರಶುರಾಂಪುತ್, ಹಕ್ಕಿಪಿಕ್ಕಿ ಪುರಾಣದಲ್ಲಿ ದೇವಿಯ ಅಂಗೈಹುಣ್ಣಿನಿಂದ ಹುಟ್ಟಿದಾತ ವಂಶದ ಮಡಿವಂತ ಮೂಲಪುರುಷ.

ಈ ಬಾರಹಬ್ಬೆ ಗುಜರಾತ್ಯೋಗಳೆಂದರೆ: (ಹನ್ನೆರಡು ಗುಜರಾತ್ ಸೋದರರು) ಪ್ರಮುಖರಾದವರು.

| | |
|---|---|
| ೧. ಶಕ್ಯವಾಳೋ | ೨. ಶಿವೋವಾಳೋ |
| ೩. ಶಂಭೋವಾಳೋ | ೪. ಶಂಜಿವಾಳೋ |
| ೫. ರಾಮುವಾಳೋ | ೬. ಮಾಣಿಕ್ಯೋವಲೋ |
| ೭. ಗೋವಿಂದೋವಾಳೋ | ೮. ಭೀಕುವಾಳೋ |
| ೯. ಋಷಿನಾಜಿವಾಳೋ | ೧೦. ದೇವಿಧಾಖ್ (ಸ್) ವಾಳೋ |
| ೧೧. ಮಕ್ಕಾಜಿವಾಳೋ | ೧೨. ಅಮ್ಮವಾಳೋ, ಗಳಾಗಿದ್ದಾರೆ. |

ಇ. ಕಾಳಿವಾಳೋದವರು ತಮ್ಮ ಮೂಲಸ್ಥಾನ ಆಂಧ್ರದ ಡಿಂಬರ್ಕವಾಡ್ ಎನ್ನುತ್ತಾರೆ. ಇವರು ಸರಿಸುಮಾರಾಗಿ "ಖಾತ್‌ಖೋ= ಸಾತ್ ಸೋ= ಏಳುನೂರು ಕಾಳಿವಾಳೋ"ಗಳೆಂದು ಗುರ್ತಿಸಿಕೊಳ್ಳುತ್ತಾರೆ. ಇವರ ಮೂಲಪುರುಷ ಕಾಳ್‌ನಾಥ್ ಪೌರಾಣಿಕದಲ್ಲಿ ಚಾಮುಂಡಿದೇವಿಯ ರಥವನ್ನು ಎಳೆಯಲು ಸೀಮಿತನಾದವರಲ್ಲಿ ಇವನೂ ಒಬ್ಬ, (ಮೇವಾಡೋದ ಭೈರುನಾಥ್ ನೊಂದಿಗಿದ್ದವನು) ಧೀರ, ಕಟ್ಟುಮಸ್ತಾದ, ಮಡಿವಂತ ಪೂಜಾರಿಯಾಗಿದ.

ಆ ಸಾತ್‌ಸೋ= ಖಾತ್ ಖೋ ಕಾಳಿವಾಳೋಗಳಲ್ಲಿ ಪ್ರಮುಖರಾದವರು,

೧. ನರೋತ್ತಂವಾಳೋ
೨. ಮನ್ಯೋವಾಳೋ
೩. ಮಕ್ರ್ಯೋವಾಳೋ
೪. ಬಬೂಲ್‌ವಾಳೋ
೫. ಬಂಗಡಿವಾಳೋ
೬. ಋಷಾಲ್‌ವಾಳೋ
೭. ಪಂಖಿವಾಳೋ ಆಗಿದ್ದಾರೆ.

ಈ. ಪವಾರ್‌ನವರು ಎಲ್ಲಿಂದ ಬಂದವರೆಂದು ನಿಖರವಾಗಿ ಹೇಳುವುದಿಲ್ಲ. ಪವತಣ ಗಡ್‌ನಿಂದ ಬಂದವರೆಂದು ಕೆಲವರು ಹೇಳುತ್ತಾರೆ. ಮೂಲಪುರುಷ ದೂದ್‌ಗವಾರ್ಯೋ ಹಾಲಿನಿಂದ ದೇವಿಯನ್ನು ಪೂಜಿಸುವ (ಜೋತ್‌ಬಾ= ದೇವಿ ರಣಚಂಡಿ) ದನಗಾಹಿಯಾಗಿದ್ದವನೆಂದು ಪವಾರ್ ಪಂಗಡದ ಪುರಾಣದಿಂದ ತಿಳಿಯಬಹುದು. ಈತನೂ ಕೂಡ ಧೀರ, ಕಟ್ಟುಮಸ್ತಾದ ಮಡಿವಂತ ಪೂಜಾರಿ.

ಬಳಿಗಳಲ್ಲಿ ಪ್ರಮುಖರಾದವರು.

೧. ಉಬಾರ್‍ರ್ಯೋ

೨. ಲಿಂಬೋ

೩. ದಾಮೋ

೪. ಬಾಜಿರಾವ್

೫. ಪೆಂಬ್ಡು

೬. ಭೀರ್‌ಪಂಡು

೭. ರಾಮಶೆಟ್ಟಿ ಇತ್ಯಾದಿಗಳು

**ಕುಲ/ಗೋತ್ರ ಮತ್ತು ಉಪಕುಲ/ಗೋತ್ರಗಳ ನಡುವಿನ ವೈವಾಹಿಕ ಸಂಬಂಧ ನಿಷೇಧಗಳು**

ಪ್ರಧಾನ ಗೋತ್ರಗಳನ್ನೊಳಗೊಂಡಂತೆ ನಾಲ್ಕು ಗೋತ್ರ ಪಂಗಡಗಳು ಕರ್ನಾಟಕದ ಹಕ್ಕಿಪಿಕ್ಕಿಯಲ್ಲಿ ಕಾಣಬರುತ್ತದೆ. ಸಗೋತ್ರ ವಿವಾಹ ನಿಷಿದ್ಧವಾದ್ದರಿಂದ ಪಂಗಡಗಳ ಆಯ್ಕೆಗೆ ಪ್ರಮುಖ ಸ್ಥಾನವಿದೆ. ನಾಲ್ಕು ಪಂಗಡದವರು ಒಬ್ಬರಿಗೊಬ್ಬರು ಸಂಬಂಧವನ್ನು ಬೆಳೆಸಬಹುದು.




**ಸಂಬಂಧ ಸೂಚಿ ರೇಖೆಗಳು**

ಇಲ್ಲಿ ಕಾಳಿವಾಳೋ, ಮೇವಾಡೋವಾಳೊ, ಬೋಕ್ನಾವಾಲೋ, ಆದರೂ ಪೂಜಿಸುವ ದೇವರು ಕಾಳಿಕಾದೇವಿ ಮತ್ತು ಎಲ್ಲಮ್ಮ ಕುಲದೇವರು ಆಗಿರುವುದರಿಂದ ಸಂಬಂಧ ಬೆಳೆಸಬಹುದಾಗಿದೆ ಕೆಲವರು ಬೆಳೆಸುವುದಿಲ್ಲ ಗುಜರಾತ್ಯೋಗೆ ಚಾಮುಂಡಿ ಕುಲದೇವಿ ಮತ್ತು ಪವಾರ್‌ನವರಿಗೆ (ಜೋತ್‌ಬಾ) ರಣಚಂಡಿ ಕುಲದೇವತೆಯರಾಗುತ್ತಾರೆ.

**ಕುಲ/ಗೋತ್ರ ಮತ್ತು ಉಪಕುಲ/ಗೋತ್ರಗಳ ನಡುವಿನ ಸ್ಥಾನಮಾನ**

ಹಕ್ಕಿಪಿಕ್ಕಿಯರ ನ್ಯಾಯ ಪಂಚಾಯ್ತಿಗಳಲ್ಲಿ ಆಯಾಪಂಗಡದ ಪ್ರಮುಖನೇ ಭಾಗವಹಿಸಬೇಕಾಗಿತ್ತದೆ. ಪಂಚಾಯ್ತಿಯಲ್ಲಿ ಸ್ತ್ರೀಯರಿಗೆ ಪ್ರವೇಶವಿಲ್ಲ. ಕುಲ ಪಂಚಾಯ್ತಿ ಬಂದರೆ ತಪ್ಪಿತಸ್ಥ ಕುಲದ ಪ್ರಮುಖನನ್ನುಳಿದು ಬೇರೆ ಪ್ರಮುಖರೆನ್ನಿಸಿಕೊಂಡವರು ತೀರ್ಪನ್ನು ನೀಡಬಹುದು. ಆ ತೀರ್ಪನ್ನು ಸಮಂಜಸವಾಗಿದ್ದರೆ ಆತ ಒಪ್ಪಿಕೊಳ್ಳುತ್ತಾನೆ. ಇಲ್ಲವಾದರೆ ಮತ್ತೆ ವಾದಕ್ಕಿಳಿದು ಎಲ್ಲರಿಗೂ ಹೊಂದಿಸ್ನಿಸುವ ತನಕ ಪಂಚಾಯ್ತಿ ಮುರಿಯುವುದಿಲ್ಲ. ಹಾಗೆ ಮದುವೆ ಆಚರಣೆ, ಹಬ್ಬಗಳನ್ನು ಆಚರಿಸುವಾಗ ಊರ ಹೊರಗೆ ಪ್ರತ್ಯೇಕ ಬಿಡಾರಗಳನ್ನು ಹೂಡಿ, ಪ್ರಧಾನ ಗೋತಗಳಲ್ಲಿರುವ ಪಂಗಡಗಳ ದೇವಿಯ ಪಿಟಾರಿ (ತ್ರಾಂಗಡೂ) ಇರುವಲ್ಲಿ ಅವರವರ ಹಿರಿತನಕ್ಕೆ ಸಂಬಂಧಿಸಿದಂತೆ ಸ್ಥಾನವನ್ನು ಅಲಂಕರಿಸಬೇಕಾಗುತ್ತದೆ. ಯಾರಾದ ಮೇಲೆ ಯಾರೆಂತ? ಇಲ್ಲವಾದರೆ ಆತನ ಸ್ಥಾನಮಾನಕ್ಕೇ ಕುಂದಾಗುತ್ತದೆ. ಪಂಚಾಯಿತಿ ನಡೆವ ಸಂದರ್ಭ ಬರಬಹುದು.

**ಕುಲ/ಗೋತ್ರ ಮತ್ತು ಉಪಕುಲ/ಗೋತ್ರಗಳ ಕಸುಬುಗಳು**

ಹಕ್ಕಿಪಿಕ್ಕಿಯರಲ್ಲಿ ಯಾವುದೇ ಗೋತ್ರ ಉಪಗೋತ್ರಗಳನ್ನು ತೆಗೆದುಕೊಂಡರೂ ಕಸುಬುಗಳಲ್ಲಿ ವ್ಯತ್ಯಾಸವಿಲ್ಲ. ಹಿಂದೆಲ್ಲ ಶಿಕಾರಿಯಿಂದಲೇ ಜೀವನ ನಡೆಸುತ್ತಿದ್ದರು. ಎಲ್ಲರ ಕಸುಬೂ ಶಿಕಾರಿಯೇ ಆಗಿರುತ್ತಿತ್ತು. ಇತ್ತೀಚಿನ ದಿನಗಳಲ್ಲಿ ಸರಕಾರ ರೂಪಿಸಿದ ಅರಣ್ಯಕಾಯ್ದೆಯಿಂದ ಶಿಕಾರಿ ಮಾಡುವುದು ಸಾಧ್ಯವಿಲ್ಲ. ಹಾಗಾಗಿ ವಿವಿಧ ಕೈಕಸುಬಿನಡೆ ಮನವಾಲಿಸಿದ್ದಾರೆ. ಉದಾ ಗೊಂಬೆಗಳ ತಯಾರಿಕೆ, ರುದ್ರಾಕ್ಷಿ, ಬಟ್ಟೆಯ ಹೂ, ಪ್ಲಾಸ್ಟಿಕ್ ಮಣಸರಗಳು, ಉಂಗುರದ ಹರಳುಗಳ ವ್ಯಾಪರ, ಹೀಗೆ ಬಹುಭಾಷಾ ಪ್ರಿಯರಾದ ಇವರು ತಮ್ಮ ಜೀವೋಪಾಯಕ್ಕಾಗಿ, ವ್ಯಾಪಾರಿ ಮನೋಭಾವದ ಸಲುವಾಗಿ ವಿವಿಧೆಡೆ ಸಂಚರಿಸಿ, ಆಯಾ ಪ್ರಾಂತ್ಯದ ಭಾಷೆಯನ್ನು ಕರಗತ ಮಾಡಿಕೊಂಡು ಲೀಲಾಜಾಲವಾಗಿ ಮಾತನಾಡುತ್ತಾರೆ.

**ಕುಲ/ಗೋತ ಮತ್ತು ಉಪಕುಲ/ಗೋತಗಳ ಆಚರಣೆ**

ಯಾವುದೇ ಉಪಕುಲ/ಗೋತ/ಪಂಗಡಗಳು ತಮ್ಮ ಹಬ್ಬ ಹರಿದಿನಗಳನ್ನು ಆಚರಿಸುವಾಗ ಪಕ್ಕದ ಗೋತಗಳು ಅಥವಾ ಸಂಬಂಧಿಕರನ್ನು ಮರೆಯಂತಿಲ್ಲ. ಆಯಾ ಪಂಗಡಗಳಲ್ಲಿರಬಹುದಾದ ಎಲ್ಲಾ ಕುಟುಂಬದವರಿಗೂ ಪಾಲನ್ನು ಹಂಚಬೇಕಾಗುತ್ತದೆ. ಇದು ಸಗೋತ ಹಾಗೂ ಸಂಬಂಧಿಕರಿಗೆ ಅಧಿಕವಾಗಿಯೂ, ಅನ್ಯ ಪಂಗಡದವರಿಗೆ ಕಡಿಮೆ ಪಾಲುಗಳಾಗಿರುತ್ತವೆ. ಕುರಿಕೋಣಗಳ ಪ್ರತ್ಯೇಕ ಹಬ್ಬಗಳಾಗಲೀ ಅಥವಾ ಎಲ್ಲರೂ ಕೂಡಿ ಒಮ್ಮೆಲೇ ಆಚರಿಸಬಹುದಾದ 'ಲಂಗರಿ'ನ ಹಬ್ಬಗಳಲ್ಲಾಗಲೀ ಜಾತಿ ಜಮಾತಿಗೆ ತಕ್ಕಂತೆ ತ್ರಾಂಗಡೂದ ಹಿರಿತನಕ್ಕೆ ಸಂಬಂಧಿಸಿದಂತೆ ಜಮೀನ್=ಸ್ಥಳಗಳಲ್ಲಿ ತ್ರಾಂಗಡೂಗಳನ್ನು ಇರಿಸಬೇಕು. ಇಲ್ಲವಾದಲ್ಲಿ ಈ ಜಮೀನ್‌ಗಾಗಿ ಅನೇಕ ಪಂಚಾಯ್ತಿಗಳೂ ಜಗಳಗಳೂ ಆಗಿ ಕೊನೆಗೆ ಸಂಬಂಧಗಳೂ ಕಡಿದು ದೇಶಾಂತರ ಹೋಗಿ ಬಿಡುತ್ತಿದ್ದ ಪ್ರಮೇಯಗಳು ಹೆಚ್ಚಾಗಿದ್ದವು.

**ಕೋಷ್ಟಕ ೨.೧ ಭಾರತದ ಬಾಗ್ರಿ, ಬಾವರಿಗಳ ಜನಸಂಖ್ಯೆ (೧೮೮೧)**

| ಸಮುದಾಯ | ಪ್ರಾಂತ | ಜನಸಂಖ್ಯೆ |
|---|---|---|
| ಬಾಗ್ರಿ | | ೬೩,೮೨೫ |
| ಬಾಗಡಿ | ಮುಂಬೈ | ೧೨ |
| ಬಗಾರಿಯ | ಅಜಮೀರೂ | ೩,೫೭ |
| ತಾಕಣಕರ | ಬೆರಾರ್ | ೪೩,೪೭ |
| ಟಿಕಾರಿ | ಮುಂಬೈ, ಸೆಂಟ್ರಲ್ ಪ್ರಾವಿನ್ಸ್,<br>ಹೈದರಾಬಾದ್ | ೧೦,೨೦ |
| ಥಕ್ಕರ್ | ಮುಂಬೈ | ೧೮೪೮ |
| ಬಾವರಿ | | ೫೬,೯೧೩,೧ |
| ಖಿಡಾಲ | ಸೆಂಟ್ರಲ್ ಪ್ರಾವಿನ್ಸ್ | ೬೫೮ |
| ಮೊಘೆ | ಸೆಂಟ್ರಲ್ ಪ್ರಾವಿನ್ಸ್, | ೧೧೦೪೭ |

| | | |
|---|---|---|
| ಮೋಘಿಯ | ಸೆಂಟ್ರಲ್ ಪ್ರಾವಿನ್ಸ್, | ೫೦೯೧ |
| ಪಾರ್ಧಿ | ಬೇರಾರ್, ಮುಂಬೈ, | |
| | ಸೆಂಟ್ರಲ್ ಪ್ರಾವಿನ್ಸ್ | |
| | ಹೈದರಾಬಾದ್ | ೧೭೬೩೮ |
| ಫಾನ್ಸೆ ಪಾರ್ಧಿ | ಮುಂಬೈ | ೮೬೪ |

ಭಾರತದ ಹಲವೆಡೆ ಹಕ್ಕಿಪಿಕ್ಕಿಯರನ್ನು ಬಾಗ್ರಿ ಅಥವಾ ವಾಗ್ರಿ ಮತ್ತು ಬಾವರಿಗಳೆಂದು ಕರೆಯಲಾಗುತ್ತದೆ. ೧೮೮೧ ರ ಜನಗಣತಿಯಲ್ಲಿ ಭಾರತದಲ್ಲಿಯ ಇವರ ಒಟ್ಟು ಜನಸಂಖ್ಯೆ ೧೩,೭೭,೩೫೬. ಕರ್ನಾಟಕದ ಪಾರ್ಧಿಗಳ ಜನಸಂಖ್ಯೆ ೨೦೦೧ರ ಜನಗಣತಿಯ ಪ್ರಕಾರ ೫,೪೦೩ ಮತ್ತು ಹಕ್ಕಿಪಿಕ್ಕಿಯರ ಜನಸಂಖ್ಯೆ ೮,೪೧೪. ಹಕ್ಕಿಪಿಕ್ಕಿಯರ ಜನಸಂಖ್ಯೆಯಲ್ಲಿ ಬಳ್ಳಾರಿ ಜಿಲ್ಲೆಯ ಪಾರ್ಧಿ, ಬೆಂಗಳೂರಿನ ರಾಜಗೊಂಡ, ಡುಂಗ್ರಿ ಗರಾಸಿಯ ಇತ್ಯಾದಿ ಸಮುದಾಯಗಳ ಜನಸಂಖ್ಯೆ ಸೇರಿರುವ ಸಾಧ್ಯತೆಗಳಿವೆ.

## ಪ್ರಸಾರ ನೆಲೆಗಳು

ಕರ್ನಾಟಕದಲ್ಲಿ ಈ ಸಮುದಾಯ ಇಂದಿಗೂ ಅಲೆಮಾರಿಗಳಾಗಿರುವುದರಿಂದ ಕರ್ನಾಟಕದಾದ್ಯಂತ ಇವರು ಕಂಡು ಬಂದರೂ ನೆಲೆಯಾಗಿ ನಿಂತಿರುವ ಪ್ರದೇಶಗಳು ಅತೀ ಕಡಿಮೆ ಸ್ಥಳಗಳಲ್ಲಿ ಎಂಬುದು ಸಮೀಕ್ಷೆಯ ಮೂಲಕ ತಿಳಿದು ಬಂದಿತು. ಹಕ್ಕಿಪಿಕ್ಕಿ ಸಮುದಾಯ ಕರ್ನಾಟಕದಲ್ಲಿ ಹೆಚ್ಚಾಗಿ ೩ ಜಿಲ್ಲೆಗಳಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಸಮೀಕ್ಷೆಯ ಪ್ರಕಾರ ಶಿವಮೊಗ್ಗ ಜಿಲ್ಲೆಯಲ್ಲಿ ಅತಿ ಹೆಚ್ಚಿನ ಜನಸಂಖ್ಯೆ ಕಂಡುಬರುತ್ತದೆ. ದಾವಣಗೆರೆ ಹಾಗೂ ಮೈಸೂರು ಜಿಲ್ಲೆಯಲ್ಲಿ ಅತಿ ಕಡಿಮೆ ಜನಸಂಖ್ಯೆ ಕಂಡುಬರುತ್ತದೆ. ಜಿಲ್ಲಾವಾರು ಹಾಗೂ ಕುಟುಂಬವಾರು ಜನಸಂಖ್ಯೆ ವಿವರಗಳು ಈ ಕೆಳಗಿನಂತಿವೆ. ಕನ್ನಡ ಪುಸ್ತಕ ಪ್ರಾಧಿಕಾರದ ೨೦೦೭ರ ಅಂಶಿಕ ಸಮೀಕ್ಷೆಯ ವಿವರ ಹೀಗಿದೆ (ಕೋಷ್ಟಕ:೨.೨).

**ಕೋಷ್ಟಕ: ೨.೨ ಸಮೀಕ್ಷೆಗೊಳಪಟ್ಟ ಹಕ್ಕಿಪಿಕ್ಕಿಯರ ಜಿಲ್ಲಾವಾರು ಜನಸಂಖ್ಯೆ (೨೦೦೭)**

| ಜಿಲ್ಲೆ | ಕುಟುಂಬ | ಗಂಡು | ಹೆಣ್ಣು | ಒಟ್ಟು | ಕು.ಗಾತ್ರ | ಲಿಂಗಪ್ರಮಾಣ |
|---|---|---|---|---|---|---|
| ದಾವಣಗೆರೆ | ೧೪೪ | ೩೪೨ | ೩೧೫ | ೬೫೭ | ೫.೧೬ | ೯೨೧ |
| ಮೈಸೂರು | ೮೫ | ೨೮೨ | ೨೫೯ | ೫೪೧ | ೬.೩೬ | ೯೧೮ |
| ಶಿವಮೊಗ್ಗ | ೩೧೧ | ೭೪೧ | ೭೬೫ | ೧೫೦೬ | ೪.೮೪ | ೧೦೩.೨ |
| ಒಟ್ಟು | ೫೪೦ | ೧೩೬೫ | ೧೩೩೯ | ೨೭೦೪ | ೫.೦೦ | ೯೮೦ |

ಕನ್ನಡ ಪುಸ್ತಕ ಪ್ರಾಧಿಕಾರದ ೨೦೦೭ರ ಸಮೀಕ್ಷೆಯ ಅಂಕಿಅಂಶಗಳಲ್ಲಿ ಹಕ್ಕಿಪಿಕ್ಕಿ ಸಮುದಾಯದ ಮೇಲಿನ ೩ ಜಿಲ್ಲೆಗಳಲ್ಲಿ ಲಭ್ಯವಾದ ಜನಸಂಖ್ಯೆ ೨೭೦೪ ಇದರಲ್ಲಿ ೧೩೬೫ ಪುರುಷರು ೧೩೩೯ ಮಹಿಳೆಯರು ಇದ್ದಾರೆ. ಒಟ್ಟು ೫೪೦ ಕುಟುಂಬಗಳು ದಾಖಲಾಗಿವೆ.

ಕರ್ನಾಟಕ
ಹಕ್ಕಿಪಿಕ್ಕಿ ಮತ್ತು ಪಾರ್ಧಿ ಬುಡಕಟ್ಟುಗಳ
ನೆಲೆಗಳು



ಕರ್ನಾಟಕ ಹಕ್ಕಿಪಿಕ್ಕಿ ಕುಟುಂಬದ ಸರಾಸರಿ ಗಾತ್ರವು ೫ ಇರುವುದಾಗಿ ಸಮೀಕ್ಷೆಯ ಅಂಕಿ ಅಂಶಗಳಿಂದ ತಿಳಿದುಬರುತ್ತದೆ. ಹಿಂದೆ ಅವಿಭಕ್ತ ಕುಟುಂಬಗಳು ಹೆಚ್ಚಿರುತ್ತಿದ್ದವು. ಬೇಟೆಗಾಗಿ, ಮೀನುಗಾರಿಕೆ, ಕಾಯಕಗಳಿಗೆ ಇದು ಅನಿವಾರ್ಯವಾಗಿತ್ತು. ಈ ಕಾಯಕಗಳು ನಶಿಸುತ್ತಿದ್ದಂತೆ ವಿಭಕ್ತ ಕುಟುಂಬಗಳು ಹೆಚ್ಚುತ್ತಿವೆ. ಇಲ್ಲಿಯ ನೆಲೆ ಮತ್ತು ಕುಟುಂಬಗಳ ಸಂಖ್ಯೆಯೇ ಅಂತಿಮವೆಂದು ಭಾವಿಸ ಬಾರದು. ಮೊದಲಿಗೆ ತಿಳಿಸಿದಂತೆ ಹಕ್ಕಿಪಿಕ್ಕಿ ಸಮುದಾಯವು ಊರಿಂದೂರಿಗೆ ಅಲೆದಾಡುವ ಸಮುದಾಯವಾಗಿರುವುದರಿಂದ ಸಮೀಕ್ಷೆಗಾಗಿ ಸಮೀಕ್ಷಕರು ಕ್ಷೇತ್ರಕಾರ್ಯಕ್ಕೆ ತೆರಳಿದಾಗ ಎಷ್ಟೋ ಕುಟುಂಬಗಳು ಕಾಣದೇ ಇರುವ ಸಾಧ್ಯತೆಗಳು ಇರಬಹುದು. ಆದರೆ, ಯಾವುದೇ ನಿರ್ವಂಚನೆಯಿಲ್ಲದೆ, ಹೆಚ್ಚು ವೈಜ್ಞಾನಿಕವಾಗಿ ಸಮೀಕ್ಷೆ ನಡೆಸಲಾಗಿದೆ. ಸಮೀಕ್ಷೆಯ ಆಧಾರದ ಮೇಲೆ ೩ ಜಿಲ್ಲೆಗಳು ಹಾಗೂ ಸಮೀಕ್ಷೆಗೊಳಪಡದ ಕುಟುಂಬವಾರು ಸರಾಸರಿ ಜನಸಂಖ್ಯೆಯನ್ನು ನೀಡಲಾಗಿದೆ(ಅಂಕಿ ಅಂಶಗಳು:೧).

ಗ್ರಾಮೀಣ, ನಗರ ಜನಸಂಖ್ಯೆ

ಈ ಸಮುದಾಯವು ಗ್ರಾಮಂತರ ಪ್ರದೇಶಕ್ಕಿಂತ ನಗರ ಪ್ರದೇಶಗಳಲ್ಲಿ ಹೆಚ್ಚಾಗಿ ವಾಸವಾಗಿರುವುದು. ನಗರಗಳ ಕೊಳಗೇರಿಗಳಲ್ಲಿ ಅಥವಾ ಬಯಲು ಜಾಗಗಳಲ್ಲಿ ಗುಡಾರ ಇಲ್ಲವೆ ಚಿಕ್ಕ ಗುಡಿಸಲುಗಳನ್ನು ಹಾಕಿಕೊಂಡು ಜೀವನ ನಿರ್ವಹಣೆ ಮಾಡುವುದನ್ನು ಕಾಣಬಹುದಾಗಿದೆ.

ಲಿಂಗಾನುಪಾತ

ಪ್ರತಿ ೧೦೦೦ ಪುರುಷರಿಗೆ ಮಹಿಳೆಯರ ಸಂಖ್ಯೆ ಎಷ್ಟೆಂಬುವುದನ್ನು ಗುರುತಿಸುವುದೇ ಲಿಂಗಾನುಪಾತವಾಗಿರುತ್ತದೆ. ೨೦೧೧ರ ಜನಗಣತಿಯ ಪ್ರಕಾರ ಕ್ರಮವಾಗಿ ಲಿಂಗ ಅನುಪಾತವು ಭಾರತದಲ್ಲಿ ೯೩೩, ಕರ್ನಾಟಕದಲ್ಲಿ ೯೬೫ ಇದ್ದರೆ ಕರ್ನಾಟಕದ ಹಕ್ಕಿಪಿಕ್ಕಿ ಸಮುದಾಯದ ಸರಾಸರಿ ಲಿಂಗಾನುಪಾತ ೯೮೦ ಇರುವುದು. ಇವರಲ್ಲಿ ಸರಾಸರಿ ಲಿಂಗ ಅನುಪಾತಕ್ಕಿಂತ ಸಾವಿರ ಪುರುಷರಿಗಿಂತ ಹೆಚ್ಚು ಸ್ತ್ರೀಯರು ಇರುವ ಜಿಲ್ಲೆಗಳೆಂದರೆ ಶಿವಮೊಗ್ಗ ಜಿಲ್ಲೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡಬರುತ್ತಾರೆ.

ಶಾರೀರಿಕ ಲಕ್ಷಣಗಳು

ಹಕ್ಕಿಪಿಕ್ಕಿಯರು ಶಾರೀರಿಕವಾಗಿ ಎತ್ತರದಲ್ಲಿ ಗಂಡಸರಗಿಂತ ಹೆಂಗಸರು ಕಡಿಮೆ (೫ರಿಂದ ೬ಅಡಿ)ಇರುತ್ತಾರೆ. ಹೆಂಗಸರು ದೈಹಿಕವಾಗಿ ಗಂಡಸರಷ್ಟು ಬಲಿಷ್ಠತೆಯಿಲ್ಲದಿದ್ದರೂ ದಷ್ಟಪುಷ್ಟರಾಗಿತ್ತಾರೆ. ವಂಶಪರಂಪರಾಗತ ಎಂಬಂತೆ ಬಿಳುಕು ಚರ್ಮದವರೂ ಹಲವರಿದ್ದಾರೆ. ಕಾರಣ ಹಿಂದೆ ಸರಿಯಾದ ಆರೈಕೆಯಿಲ್ಲದೆಯೋ ಅಥವಾ ಅಲೆಮಾರಿತನವು ಇರಬಹುದು. ಹಾಗಂತ ಶ್ವೇತವರ್ಣದವರು ಇಲ್ಲವೆಂದಲ್ಲ. ತುಂಬಾ ಕಡಿಮೆ ಪ್ರಮಾಣದಲ್ಲಿರುತ್ತಾರೆ. ತಲೆಯ ರಚನೆಯಲ್ಲೂ ಕೂಡ ಗಂಡಸರದು ಒರಟಾದ ಕಪ್ಪನೆಯ ಉದ್ದ ಕೂದಲಿನಿಂದ ಕೂಡಿದ ದುಂಡನೆಯ ಲಕ್ಷಣ ಹೊಂದಿದ್ದರೆ, ಹೆಂಗಸರು ನಯವಾದ್ದುದ್ದನೆಯ ಕಪ್ಪು ಕೂದಲಿನಿಂದ

ಕೂಡಿದ ದುಂಡನೆಯ ಆಕಾರದಲ್ಲಿ ಗಂಡಸರಿಗಿಂತ ಚಿಕ್ಕ ಪ್ರಮಾಣದ ತಲೆಯ ರಚನೆಯನ್ನು ಹೊಂದಿರುತ್ತಾರೆ. ಇನ್ನು ಕಣ್ಣಿನ ರಚನೆಯಲ್ಲಿ ಕಪ್ಪುಕಣ್ಣು ಗುಡ್ಡೆಯ ಅಗಲವಾದ ಕೆಲವರಲ್ಲಿ ನೀಲಿಗುಡ್ಡೆಯ ಕಣ್ಣುಳ್ಳವರನ್ನು ಕಾಣಬಹುದು. ಮೂಗಿನ ರಚನೆಯಲ್ಲಿ ಕೂಡ ಗಿಡ್ಡದಾದ, ಸಾಕಷ್ಟು ಉದ್ದನಲ್ಲದ, ಆಕಾರದಲ್ಲಿರುವ ಲಕ್ಷಣವನ್ನು ಹೊಂದಿರುತ್ತಾರೆ. ತೆಳುತುಟಿಯನ್ನು ಹೊಂದಿ ದುಂಡನೆಯ ಮುಖದ ಆಕಾರ, ಸಾಮಾನ್ಯ ಗದ್ದದ ಬೆಳವಣಿಗೆ ಕಟ್ಟುಮಸ್ತಾದ ಆಕರ್ಷಣೀಯ ಮೈಕಟ್ಟು ಹೀಗೆ ಕೆಲವೊಂದು ವಿಶೇಷ ಶಾರೀರಿಕ ಲಕ್ಷಣವನ್ನು ಹೊಂದಿದ್ದಾರೆ.



೩

# ಸ್ಥಳಾವರಣ

## ಮನೆ, ಗಲ್ಲಿ, ಎಲ್ಲೆಕಟ್ಟು, ಅಥವಾ ಮೇರೆ

ಮನೆ, ಕೊಟ್ಟಿಗೆ, ಗಲ್ಲಿ, ಎಲೆಕಟ್ಟು ಅಥವಾ ಮೇರೆ ವಸತಿಗಳ ವಿನ್ಯಾಸದಲ್ಲಿ ಪ್ರಾದೇಶಿಕ ಭಿನ್ನತೆಗಳು ಇರುವವು. ಊರಿನ ಹೊರಗಡೆ ಕಾಡುಗಳಲ್ಲಿ ಬೆಟ್ಟ ಪ್ರದೇಶಗಳಲ್ಲಿ ನದಿಗಳ ಹತ್ತಿರ ಗುಂಪು ಮನೆಗಳು ಟೆಂಟ್‌ಗಳು ವೃತ್ತಾಕಾರದ ಮನೆಗಳು ಚಪ್ಪರದ ಮನೆಗಳು ಚೌಕಾಕಾರದ ಮನೆಗಳು ತ್ರಿಕೋನ ಆಕಾರದ ಮನೆಗಳು ಮತ್ತು ಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಅನುಕೂಲವಾಗುವ ಮತ್ತು ಗಾಳಿ ಬೆಳಕು ಚೆನ್ನಾಗಿ ಒಳಗೆ ಬರಲು ಮತ್ತು ಹೋಗಲು ಅನುಕೂಲ ಆಗುವ ರೀತಿಯಲ್ಲಿ ಮನೆಗಳ ನಿರ್ಮಾಣ ಮಾಡಿಕೊಂಡಿರುತ್ತಾರೆ.

ಹಕ್ಕಿಪಿಕ್ಕಿಯರು ಸಾಮಾನ್ಯವಾಗಿ ನಗರ ಗ್ರಾಮೀಣ ಪ್ರದೇಶಗಳಿಂದ ದೂರವಿರಲು ಇಚ್ಚಿಸುತ್ತಾರೆ. ಸ್ವಲ್ಪ ಎತ್ತರ ಅಥವಾ ಸ್ವಲ್ಪ ಇಳಿಜಾರು ಪ್ರದೇಶವನ್ನು ಕೆರೆ ಹಳ್ಳಗಳ ಬಳಿ ಆಯ್ಕೆಮಾಡಿ ಟೆಂಟು ಹಾಕುತ್ತಾರೆ.

**ವಾಸದ ರೀತಿ :** ಹಕ್ಕಿಪಿಕ್ಕಿ ಸಮುದಾಯದವರು ತಾವು ವಾಸಿಸುವ ಸ್ಥಳದಲ್ಲಿ ಮನೆಕಟ್ಟಲು ಯಾವುದೇ ವಾಸ್ತು ನೋಡುವುದಿಲ್ಲ. ಯಾವುದೇ ಒಂದು ಮೂಲೆಯಲ್ಲಿ ಆಯಾ ಬರುವಂತೆ ಸ್ಥಳನಿಯೋಜಿತವಾದರೆ ಸಾಕು, ಮನೆ ಕಟ್ಟುತ್ತಾರೆ. ಕುಲದೇವರಲ್ಲಿ ಕಣಿಕೇಳಿ, ಹಬ್ಬ ಬಂದರೆ ಆಚರಿಸುತ್ತಾರಲ್ಲದೆ, ವೃಥಾ ಅನ್ಯರ ಹಬ್ಬಗಳಾಗಲೀ ಪೂಜೆಗಳಾಗಲೀ ನಂಬಿಕೆಯಿಡುವುದಿಲ್ಲ.

ಹಿಂದಿನ ಕಾಲದಲ್ಲಿ ಮತ್ತು ಈಗಲೂ ಕೆಲವು ಹಕ್ಕಿಪಿಕ್ಕಿಯರು ಅಲೆಮಾರಿಗಳಾಗಿ ಇರುವುದರಿಂದ ಅವರಿಗೆ ಖಾಯಂ ಆದ ವಸತಿಗಳಿರುವುದು ಕಡಿಮೆಯೇ. ಆದರೆ ಬರಬರುತ್ತಾ ಈ ಪದ್ಧತಿ ಸಡಿಲಗೊಳ್ಳುತ್ತಿದ್ದು ಖಾಯಂ ಆಗಿ ಮಣ್ಣು, ಇಟ್ಟಿಗೆಗಳಿಂದ ನಿರ್ಮಿಸಿದ ಗೋಡೆಗಳ ಮೇಲೆ ಚಾವಣಿಗೆ ಹೆಂಚು ಇಲ್ಲವೇ ತಗಡಿನ ಇಲ್ಲವೆ ತೆಂಗಿನ ಗರಿಗಳನ್ನು ಬಳಸಿ ಚಿಕ್ಕ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದಾರು. ಇದು ಅವರುಗಳು ಕಾಯಂ ಆಗಿ ನೆಲೆನಿಂತ ಊರಿನಲ್ಲಿ ಕಾಣುವ ಅಂಶವಾದರೂ, ಊರಿಂದ ಊರಿಗೆ ಅಲೆಯುವಾಗ ಅವರು ತಮ್ಮ ಮಾಮುಲು ಗುಡ್ಡಲು ಅಥವಾ ಗುಡಾರಗಳಲ್ಲಿಯೇ ವಾಸಿಸುತ್ತಿದ್ದಾರೆ. ಮೊದಮೊದಲಿಗೆ ಗುಡ್ಡಲುಗಳ ನಿರ್ಮಾಣಕ್ಕೆ ಹಳ್ಳಿಗಳಲ್ಲಿ ಸಿಗುತ್ತಿದ್ದ ಆಪಿನ ಕಡ್ಡಿಗಳನ್ನು ಕೊಯ್ದು ಆಯ್ದು ತಂದು, ಅವನ್ನು ಚೆನ್ನಾಗಿ ಒಣಗಿಸಿ, ಒಂದಕ್ಕೊಂದನ್ನು ಸೇರಿಸಿ

ದಬ್ಬಣದಿಂದ ಹೊಲೆದು ಉದ್ದನೆಯ ಚಾಪೆಯ ರೀತಿ ತಟ್ಟಿಗೆ ತಯಾರಿಸಿ, ನೆಟ್ಟಿಗಿರುವ ಗೂಟಗಳಿಗೆ ಅಡ್ಡಲಾಗಿ ಹಾಕಿದ ಬಿದಿರುಗಳ ಮೇಲೆ ಬಿಚ್ಚಿ ಹರಡಿದರೆ ಅದು ಒಂದು ತಾತ್ಕಾಲಿಕ ಟೆಂಟು ಆಗುವಂತೆ ವ್ಯವಸ್ಥೇ ಮಾಡಿಕೊಳ್ಳುತ್ತಿದ್ದರು. ಈ ತಟ್ಟಿಗೆಗೆ ಸುತ್ತುವ ಅಥವಾ ಮಡಿಚಿ ಅಡಕ ಮಾಡಿಕೊಳ್ಳಲು ಅನುಕೂಲವಿರುವಂತೆ ಇರುತ್ತದೆ.

ಈ ರೀತಿಯಾದ ಗುಡ್ಡಲಿಗಳನ್ನು ತಯಾರಿಸಲು ಬೇಕಾಗುವ ಸಾಮಗ್ರಿಗಳೆಂದರೆ, ಎರಡು ಬಿದಿರಿನ ಗಳಗಳು, ಅವೆರಡನ್ನು ಕೂಡಿಸಲು ಒಂದು ಅಡ್ಡಗಳ ಮತ್ತು ನಾಲ್ಕು ಸಣ್ಣ ಗೂಟಗಳು. ಇವುಗಳಿಗೆ ಮೇಲಿನ ಮುಚ್ಚಳದ ಆಪಿನ ತಟ್ಟಿಗೆಯ ನಾಲ್ಕು ತುದಿಗಳಲ್ಲಿರುವ ದಾರದಿಂದ ಸಣ್ಣ ಗೂಟಗಳಿಗೆ ಬಿಗಿಯಾಗಿ ಕಟ್ಟುತ್ತಾರೆ. ಆಗ ಆ ಟೆಂಟು ಒಳ್ಳೇ ಬಂದೋಬಸ್ತಾಗಿರುತ್ತದೆಯಲ್ಲದೇ, ಗಾಳಿ ಮಳೆಗೂ ಸಹ ಬೀಳುವುದಿಲ್ಲ. ಈ ಗುಡ್ಡಲಿನ ಹಿಂಭಾಗಕ್ಕೆ ಸಹ ಆಪಿನ ಕಡ್ಡಿಗಳಿಂದ ಜೋಡಿಸಿ ಹೊಲಿದ ತಟ್ಟಿಗೆಗಳನ್ನು ಮುಚ್ಚಳದ ರೀತಿಯಲ್ಲಿ ಮುಚ್ಚುತ್ತಾರೆ. ಮುಂದಿನ ಮುಖ್ಯದ್ವಾರಕ್ಕೆ ಯಾವುದೇ ಅಡೆಯನ್ನು ಮುಚ್ಚುವುದಿಲ್ಲ. ಅದು ಯಾವಾಗಲೂ ತೆರೆದೇ ಇರುತ್ತದೆ.

ಅಂದಿನ ದಿನಗಳಲ್ಲಿ ಹಳ್ಳಿಗಳಲ್ಲಿ ಸಮೃದ್ಧಿಯಾಗಿ ಬೆಳೆದ ಆಪಿನಿಂದ ಇಂಥಹ ತಟ್ಟಿಗೆಗಳನ್ನು ಮಾಡಿಕೊಳ್ಳುತ್ತಿದ್ದರು. ಈ ಟೆಂಟುಗಳ ಮತ್ತೊಂದು ವಿಶೇಷವೆಂದರೆ ಊರಿಂದ ಊರಿಗೆ ಒಯ್ಯುವಾಗ ಹಗುರವಾಗಿ ಹಕ್ಕಿಪಿಕ್ಕಿಯರ ಜೀವನಕ್ಕೆ ಉಪಯುಕ್ತವಾಗುತ್ತಿತ್ತು. ಆದರೆ ಇದರ ರಚನೆ ಸ್ವಲ್ಪ ಪ್ರಯಾಸವಾದುದ್ದಾಗಿದೆ. ಪ್ರತಿಯೊಂದು ಆಪಿನ ತುದಿಗೆ ಇನ್ನೊಂದು ಆಪಿನ ಕಡ್ಡಿಯನ್ನು ಹೊಲಿದು ಮಾಡುವ ಈ ತಟ್ಟಿಗೆ ಸುಮಾರು ಒಂದು ತಿಂಗಳಿಂದ ಹಿಡಿದು ಮೂರು ತಿಂಗಳುಗಳ ಕಾಲ ಸಮಯ ತಿನ್ನುತ್ತಿತ್ತು. ಇದನ್ನು ಎಲ್ಲಾ ಸದಸ್ಯರು ಸೇರಿ ರಚಿಸುತ್ತಿದ್ದರು. ಹತ್ತಾರು ಜನ ಸೇರಿ ಇದನ್ನು ರಚಿಸುತ್ತಿದ್ದುದರಿಂದ ಇದರ ಕಾರ್ಯ ಬೇಗ ಮುಗಿಯುತ್ತಿತ್ತು.

ಇನ್ನೂ ಕೆಲವು ಹಕ್ಕಿಪಿಕ್ಕಿಯರು ಸಣ್ಣ ಬಿದಿರಿನಿಂದ ಮಾಡಿದ ಕಮಾನಿನಾಕಾರದ ಟೆಂಟುಗಳಲ್ಲಿಯೂ ಕೂಡಾ ವಾಸಿಸುತ್ತಿದ್ದರು. ಇದಕ್ಕೆ ಕಾರಣ ಗಾಳಿ ಮಳೆಗೆ ಬೆಚ್ಚಗಿರುತ್ತದೆ ಮತ್ತು ಬಿದಿರು ಹೇರಳವಾಗಿ ಸಿಗುತ್ತದೆಂಬುವದಾಗಿದೆ. ಅಲ್ಲದೆ ಗುಡ್ಡ ಗಾಡುಗಳಲ್ಲಿ ಅವು ಸಿಗದಿರುವ ಜಾಗದಲ್ಲಿ ಬಿದಿರಿನ ಗುಡ್ಡಲುಗಳು ಹೆಚ್ಚು ಬಳಕೆಯಾಗುತ್ತಿದ್ದವು. ಇದು ಆಪಿನ ತಟ್ಟಿಗೆ ಗುಡ್ಡಲಿಗಿಂತ ಪ್ರಾಚೀನವಾದ ವಸತಿ ವ್ಯವಸ್ಥೆ ಆಗಿದೆ. ಎಷ್ಟೋ ಬಾರಿ ಈ ಬಿದಿರು ಗುಡ್ಡಲಿನ ಮೇಲೆ ಆಪಿನ ತಟ್ಟಿಗೆಗಳನ್ನು ಹೊಂದಿಸಿರುತ್ತಾರೆ. ಅಲ್ಲದೇ ಆಪಿನ ತಟ್ಟಿಗೆ ಇಲ್ಲದ ಕಡೆ ಮರದ ರೆಂಬೆ ಕೊಂಬೆಗಳ ಹಸಿರನ್ನು ಹೊದಿಕೆಯಾಗಿ ಹೊಚ್ಚುತ್ತಾರೆ. ಈ ವ್ಯವಸ್ಥೆಗಳಿಂದ ಗುಡ್ಡಲಿನೊಳಗೆ ನೆರಳಾಗುವದಷ್ಟೇ ಅಲ್ಲದೇ ಮಳೆಗೆ ಸೋರದಂತೆಯು ಇವು ರಕ್ಷಣೆ ನೀಡುತ್ತಿವೆ ಎಂಬುದು ಗಮನಾರ್ಹವಾದದ್ದು.

ಇತ್ತೀಚಿನ ದಿನಗಳಲ್ಲಿ ಈ ರೀತಿಯ ಗುಡ್ಡಲುಗಳು ಹಕ್ಕಿಪಿಕ್ಕಿಯರಲ್ಲಿ ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆಯಾಗಿವೆ. ಕಾರಣ ಈ ಬಗೆಯ ಸಾಮಗ್ರಿಗಳನ್ನು ಊರಿಂದ ಊರಿಗೆ,

ಬಸ್ಸು, ರೈಲುಗಳಲ್ಲಿ ಸಾಗಿಸುವುದು ತುಂಬಾ ಕಷ್ಟದ ಕೆಲಸವಾಗಿದ್ದರಿಂದ ಅಂದಿನ ಸಾರಿಗೆಯ ಸಾಧ್ಯತೆಗಳ್ನು ಅನುಸರಿಸಿ ಅವರ ವ್ಯವಸ್ಥೆಯ ಸಾಮಗ್ರಿಗಳೂ ಬಗೆಬಗೆಯಾಗಿ ಬದಲಾಗಿವೆ. ಈಗ ಪಕ್ಕಿಪಿಕ್ಕಿಯರ ವಸತಿ ವ್ಯವಸ್ಥೆಯು ತುಂಬಾ ಸರಳ ಹಾಗೂ ಅಚ್ಚುಕಟ್ಟಾಗಿದೆಯಲ್ಲದೇ ಇದನ್ನು ಒಂದೂರಿನಿಂದ ಇನ್ನೊಂದೂರಿಗೆ ಸಾಗಿಸಲು ತುಂಬಾ ಸುಲಭವಾಗಿದೆ.

ಆಪಿನ, ಬಿದಿರಿನ ಗುಡ್ಡಲುಗಳಿಂದ ಮುಂದುವರಿದು ಖೌದಿ ಹೊದಿಸಿದ ಗುಡ್ಡಲು, ತಾಡಪಾಲು ಹೊದಿಸಿದ ಗುಡ್ಡಲು, ಈಗ ಇತ್ತೀಚೆಗೆ ಗೋಬ್ಬರದ ಚೀಲಗಳನ್ನು ಕೂಡಿಸಿ ದೊಡ್ಡದಾಗಿ ಹೊಲಿದ ಹಾಳೆಯನ್ನು ಹೊದಿಸಿದ ಗುಡ್ಡಲಿಗಳನ್ನು ಕಾಣಬಹುದಾಗಿದೆ. ಈ ರೀತಿಯ ಕ್ರಮಗಳು ಹಕ್ಕಿಪಿಕ್ಕಿಯರ ವಸತಿ ವ್ಯವಸ್ಥೆಯ ಬೆಳವಣಿಗೆಯನ್ನು ತಿಳಿಸುವ ದಲ್ಲದೆ, ಅವರು ಕಾಲಕಾಲಕ್ಕೆ ಹೇಗೆ ತಮ್ಮ ವ್ಯವಸ್ಥೆಯನ್ನು ಬದಲಿಸುತ್ತಾ, ಅನುಕೂಲತೆಗಳ ಕಡೆಗೆ ಹೆಜ್ಜೆ ಹಾಕುತ್ತಿದ್ದಾರೆ ಎಂಬುದನ್ನು ಇತ್ತೀಚಿನ ಅವರ ವಸತಿ ವ್ಯವಸ್ಥೆಯನ್ನು ಯಾರಿ ಗಾದರೂ ಅರ್ಥವಾಗುತ್ತದೆ. ಇತ್ತೀಚಿನ ಅವರ ಪ್ಲಾಸ್ಟಿಕ್ ಚೀಲದ ಗುಡ್ಡಲುಗಳಿಗೆ ಅವರು 'ಟೆಂಟ್' ಎಂತಲೂ ಕರೆಯುತ್ತಾರೆ.

ವಸತಿಗಳ ವಿನ್ಯಾಸದಲ್ಲಿ ಪ್ರಾದೇಶಿಕ ಭಿನ್ನತೆಗಳು ಕ್ರಮೇಣ ಜೋಂಡಿನ ಗುಡಾರ ಆಪಿನ ಕಡ್ಡಿ ಟೆಂಟು, ಗುಡಿಸಲುಗಳಿಂದ ಸರ್ಕಾರ ನಿರ್ಮಿಸಿಕೊಟ್ಟ ಹಂಚಿನ ಮನೆಗಳಲ್ಲಿ ವಾಸಿಸುತ್ತ ತಮ್ಮದೇ ಆದ ಟೋಳ್ ತಾಂಡಾಗಳಲ್ಲಿ ವಾಸಿಸುತ್ತಿದ್ದವರು. ಇತ್ತೀಚಿಗೆ ನಾಗರಿಕತೆಯ ಬಿರುಗಾಳಿಯಿಂದಾಗಿ ಕೆಲವರು ಆರ್‌ಸಿಸಿ ಮನೆಗಳನ್ನು ನಿರ್ಮಿಸಿ, ವಾಸಿಸುತ್ತಿರುವ ಸಮೂಹ ವಾಸಿಗಳನ್ನು ಕಾಣಬಹುದಾಗಿದೆ.

ಕುಲ ಮತ್ತು ಕುಲ ನಡುವಿನ ಸ್ಥಾನಮಾನದ ಹಿನ್ನೆಲೆಯಲ್ಲಿ ವಾಸದ ಸ್ವರೂಪ ಹಕ್ಕಿಪಿಕ್ಕಿಯರ ಗುಡಾರ ಟೆಂಟು, ಗುಡಿಸಲುಗಳು ಒಂದೇ ಸಾಲಿನಲ್ಲಿ ಅಥವಾ ಎದಿರು ಬದಿರಾಗಿ ನಿರ್ಮಿತಗೊಳ್ಳುತ್ತವೆ. ಎದಿರು ವಾಸಿಸುವವರಿಗೆ ಕಾಲು ಬರುವಂತೆ ಮಲಗುವಂತಿಲ್ಲ. ಇದರಿಂದ ಎದುರಿನವರಿಗೆ ಕೀಳರಿಮೆ, ಅಪಮಾನವುಂಟಾಗಿ ಪಂಚಾಯ್ತಿ ಸೇರಿಸುತ್ತಾರೆ. ಉತ್ತರದೆಡೆ ತಲೆಹಾಕಿ ಮಲಗುವುದಿಲ್ಲ.

ನೆರೆಹೊರೆಯ ಸಮುದಾಯಗಳ ವಾಸದ ಮನೆಗಳ ಅಥವಾ ಕೇರಿಗಳ ವಿವರ : ಹಕ್ಕಿಪಿಕ್ಕಿ ಯರ ತಾಂಡಾದ ಬಳಿಯಲ್ಲಿ ಲಂಬಾಣಿ ತಾಂಡಾಗಳು ಅಥವಾ ಜೋಗೀ ತಾಂಡ ಇರುವುದು ಸರ್ವೇಸಾಮಾನ್ಯ ಲಂಬಾಣಿ ತಾಂಡದವರು ಆಚರಿಸೋ ಹಬ್ಬ, ಆಚರಣೆ, ಮತ್ತು ಭಾಷೆಯಲ್ಲಿ ಸಾಮ್ಯತೆಯಿರುವುದು ಗಮನಾರ್ಹವಾಗಿದೆ. ಇತ್ತೀಚಿನವರ ಕೇರಿಗಳು, ವಾಸದಮನೆಗಳು ಜನ ಸಾಮಾನ್ಯರಲ್ಲಿರುವಂತೆ ಕಂಡುಬರುತ್ತವೆ.

ವಾಸ್ತು : ಹಕ್ಕಿಪಿಕ್ಕಿಯರು ತಾವು ವಾಸಮಾಡಲು ನಿರ್ಮಿಸುವ ಟೆಂಟು ಗುಡಾರ, ಹಂಚಿನ ಮನೆಗಳಲ್ಲಿನ ಬಾಗಿಲುಗಳು ಯಾವಾಗಲೂ ಪೂರ್ವ ಪಶ್ಚಿಮವಾಗಿರಲು ಇಚ್ಛಿಸುತ್ತಾರೆ. ವಲಸೆ ಯಲ್ಲಿರುವವರು ಸಾಮಾನ್ಯವಾಗಿ ಹಳ್ಳ, ಕೆರೆಯ, ಬಾವಿಯ ಬಳಿಯಿರಲು ಇಚ್ಛಿಸುತ್ತಾರೆ. ಇದರಿಂದ ಅಡಿಗೆ ಹಾಗೂ ಬಳಸಲಿಕ್ಕೆ ನೀರಿನ ಅಭಾವ ತಪ್ಪುತ್ತದೆ. ಕಕ್ಕಸು ಕೋಣೆಯನ್ನು

ಮನೆಯ ಆಸುಪಾಸಲ್ಲಿ ನಿರ್ಮಿಸಿಕೊಳ್ಳುವುದಿಲ್ಲ. ಏಕೆಂದರೆ ದೇವಿಯ ಪಿಟಾರಿ (ತ್ರಾಂಗಡೂ) ಇರುವುದರಿಂದ ದೇವಿಯ ಆಸುಪಾಸಿನಲ್ಲಿ ಹೊಲಸುಗುಂಡಿಗಳಿದ್ದು ಮಲ-ಮೂತ್ರದ ದುರ್ನಾತ ಬರದಿರಲೆಂದೇ ಆಗಿದೆ. ಕೊಟ್ಟಿಗೆಗಳು ಪ್ರತ್ಯೇಕವಾಗಿರುವುದಿಲ್ಲ ತಾವು ವಾಸಿಸುವ ಟೆಂಟಾಗಲಿ, ಮನೆಯಾಗಲಿ ಅದರೆದುರಿಗೆ ತಮಗೆ ಕಾಣುವಂತೆ ಗೂಟದೊಂದಿಗೆ ತಮ್ಮ ಆಕಳು, ಎತ್ತುಗಳನ್ನು ಕಟ್ಟುತ್ತಾರೆ. ಮನೆಯ ಮುಂದೆ ಯಾವುದೇ ಕಾಂಪೌಂಡನ್ನು ಕಟ್ಟಿ ಅಂಗಳವನ್ನು ಮಿತಿಗೊಳಿಸುವುದಿಲ್ಲ.

ತ್ರಾಂಗಡೂ ಇಡಲೊಂದು ವರಾಂಡದಂತ ಕೋಣೆ ಹಾಗೂ ಅಡಿಗೆಮನೆ ಅಷ್ಟು ಇವರ ವಾಸದ ಮನೆಯಲ್ಲಿರುತ್ತದೆ. ತ್ರಾಂಗಡು ಇಡುವುದಕ್ಕೆ "ಮುಂಡಾಮಾಚಿ" ಎಂಬ ಆಯತಾಕಾರದ ಚಿಕ್ಕಮಂಚದ ರೂಪವುಳ್ಳ ಸಾಧನ ಉಪಯೋಗಿಸುತ್ತಾರೆ. ಬಚ್ಚಲು ಬಿಡಾರ (ಟೆಂಟು) ಮನೆಯ ಹೊರಭಾಗದಲ್ಲಿರುತ್ತವೆ ಎಂಬುದಾಗಿ ಅಸ್ತಾಪನಹಳ್ಳಿ ವಾಸಿಗಳು ಹೇಳುತ್ತಾರೆ.ಇದು ಇವರಿಗೆ ಪವಿತ್ರ ಸ್ಥಾನ.

ಹೆಚ್ಚಾಗಿ ಪೂರ್ವ ದಿಕ್ಕಿಗೆ ಬಾಗಿಲನ್ನು ಕಟ್ಟುತ್ತೇವೆ ಮತ್ತು ನಾವು ಎಲ್ಲಿಯಾದರು ಹೋದರೆ ಅಲ್ಲಿ ಟೆಂಟ್‌ಗಳು ಹಾಕುವ ರೀತಿ ಒಂದೇ ಲೈನ್ ಹಾಕುವುದು ಹೆಚ್ಚಾಗಿರುತ್ತದೆ. ಇಲ್ಲವಾದರೆ ಎದರು ಬದುರು ಟೆಂಟ್‌ಗಳನ್ನು ಅಥವಾ ಮನೆಗಳನ್ನು ಹಾಕಿ ಕೊಳ್ಳುತ್ತಾರೆ. ರಾತ್ರಿ ಮಲಗುವಾಗ ಒಬ್ಬರ ಮನೆಯ ಕಡೆಗೆ ಕಾಲು ಮಾಡಿ ಮಲಗಬಾರದು. ಆದರಿಂದ ಮನೆಯ ಅಥವಾ ಟೆಂಟ್‌ಗಳು ಆ ರೀತಿಯಲ್ಲಿ ನಿರ್ಮಾಣ ಮಾಡಿಕೊಂಡಿರುತ್ತೇವೆ ಎನ್ನುತ್ತಾರೆ. ಈ ರೀತಿಯಾಗಿ ಅವಮಾನವನ್ನು ಮಾಡಿದವರಿಗೆ ಎಲ್ಲರೂ ಸೇರಿ ಹೊಡೆಯುತ್ತಾರೆ. ಮತ್ತು (ಖ್ವಾಡಿ ಚೆಬ್ಬೀಸ್) ಅಂದರೆ (೧/೨+೨೬ = ೨೬.೫೦ ರೂ ಎಂದರ್ಥ) ಒಟ್ಟು ೨೬ ೧/೨ ರೂ ದಂಡವನ್ನು ಹಾಕುವ ಪದ್ಧತಿಯು ಇದೆ. ಬಾಣಂತಿಗೂ ಈ ನಿಯಮ ಕಟ್ಟುಬದ್ಧ. ಇತ್ತೀಚಿನ ದಿನಗಳಲ್ಲಿ ಕಾಂಪೌಂಡ್‌ಗಳನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ. ಸಮುದಾಯದ ಜನರು ಶೌಚಾಲಯವನ್ನು ಕಟ್ಟಿಸಿಕೊಳ್ಳುವುದು ಬಹಳ ವಿರಳ. ಬಹಿರ್ದೆಸೆಗಾಗಿ ಹೊರವಲಯವನ್ನು ಅವಲಂಬಿಸಿದ್ದಾರೆ. ಪ್ರಸ್ತುತ ದಿನಗಳಲ್ಲಿ ಕೆಲವರು ಆಧುನಿಕತೆಯ ಪ್ರಭಾವದಿಂದ ನಗರಗಳಲ್ಲಿ ನಿರ್ಮಿಸಿಕೊಳ್ಳುವಂತೆ ಮನೆಗಳ ವಾಸ್ತು ಹೆಚ್ಚಾಗಿ ಪೂರ್ವಕ್ಕೆ ಮುಖ್ಯದ್ವಾರ ಬಲಕ್ಕೆ ದೇವರ ಕೋಣೆ ಎಡಭಾಗಕ್ಕೆ ಸ್ನಾನದ ಕೋಣೆ, ಶೌಚಾಲಯ ಮತ್ತು ಅಗ್ನೇಯ ದಿಕ್ಕಿನಲ್ಲಿ ಒಲೆ, ಬಲಭಾಗದಲ್ಲಿ ನೀರಿನ ತೊಟ್ಟಿ ಈ ರೀತಿ ನಗರವಾಸಿಗಳಾಗಿ ನೆಲೆಸಿರುವ ಈ ಸಮುದಾಯದವರು ನಿರ್ಮಿಸಿಕೊಂಡು ವಾಸಿಸುತ್ತಿರುವುದು ಕಂಡುಬರುತ್ತದೆ.

ಮನೆ ಮಾದರಿಗಳು

೧. ಚೌಕಾಕಾರ
೨. ತ್ರಿಭುಜಕಾರ
೩. ವೃತ್ತಕಾರ
೪. ಟೆಂಟು (ಗುಡಾರ)



**ಗೋಡೆಯ ಸ್ವರೂಪ :** ಹತ್ತಿ ಕಟ್ಟಿಗೆಯ ನರಕೆಯನ್ನು ಕಟ್ಟಿ ಅದಕ್ಕೆ ಮಣ್ಣಿನ ಲೇಪವನ್ನು ಕೊಟ್ಟು, ಗೋಡೆಯಂತೆ ಮಾಡುವುದು ಸಣ್ಣ ಬಿಂಚೇ ಕಲ್ಲಿನ ಗೋಡೆ ಕಟ್ಟುವುದು ಕಲ್ಲಿನ ಗೋಡೆ ಬಂಡೆಕಲ್ಲುಗಳನ್ನು ಭೂಮಿಯಲ್ಲಿ ನೆಟ್ಟು ಗೋಡೆ ಕಟ್ಟುವುದು ದುಂಡು ಆಪುನಿಂದ ಛಾಪೆ ಹೊಲಿದು ಸುತ್ತ ತಡಿಕೆ ಕಟ್ಟುವುದು ಇತ್ತೀಚೆಗೆ ಸಾಮಾನ್ಯ ಜನರಂತೆ ಗೋಡೆ ಕಟ್ಟುವುದು ಅವುಗಳಿಗೆ ಗಾಳಿ ಬರುವ ಚಿಕ್ಕ ಕಿಡಕಿಗಳನ್ನು ಬಿಡುವುದು ಕಂಡುಬರುತ್ತದೆ.

**ಛಾವಣಿ :** ಮನೆಯ ಮೇಲ್ಛಾವಣಿಗೆ ಬಳಸುವ ಹತ್ತಿ ಕಟ್ಟಿಗೆ ಆಪು, ದುಂಡು ಆಪಿನಿಂದ ತಯಾರಿಸಿದ ಚಾಪೇ, ಟಿನ್‌ನಿಂದ, ಕುಂಬಾರ ಹಂಚು, ಮಂಗಳೂರು ಹಂಚುಗಳು, ಸಿಮೆಂಟ್ ಶೀಟ್, ತಗಡಿನ ಶೀಟ್ ಇತ್ತೀಚೆಗೆ ಕಾಂಕ್ರೀಟ್ ಕಾಶಿಹುಲ್ಲು, ನೆಲ್ಲು ಹುಲ್ಲು, ತಾಳೆಗರಿ, ತೆಂಗಿನಗರಿ, ಬಿದರಿನ ತಡಿಕೆ ಇನ್ನೂ ಕಬ್ಬಿನ ಒಗಡುಗಳಿಂದ ಇತ್ಯಾದಿಗಳಿಂದ ಸೂರಿನ ಮೇಲೆ ನೆರಳಾಗಿ ಮಾಡಿಕೊಳ್ಳುವರು.

**ಗಾಳಿ ಬೆಳಕಿಗಾಗಿ :** ಬಾಗಿಲು, ಕಿಟಕಿ ಮತ್ತು ಬೆಳಕಿಂಡಿಗಳಾಗಿ ಬಳಸುವ ವಸ್ತುಗಳು. ಬಾಗಿಲನ್ನು ಕಟ್ಟಿಗೆಯಿಂದ ತಯಾರಿಸುತ್ತಾರೆ. ಕಿಟಕಿ ಸಾಮಾನ್ಯ ಜನರಂತೆ ಬಳಸುವ ಕಟ್ಟಿಗೆ ಅಥವಾ ಕಬ್ಬಿಣದಿಂದ ತಯಾರು ಮಾಡಿದ ವಸ್ತುಗಳನ್ನು ಬಳಸುತ್ತಾರೆ ಮತ್ತು ನರಕೆಯ ಮನೆಗಳಿಗೆ ದೊಡ್ಡ ಒಡೆದ ಗಡಿಗೆಯ ಕಂಠ ಗೋಣಿ ಚೀಲದ ತಡಕೆಯಿಂದ ಮಣ್ಣಿನ ಗುಬ್ಬಿ ಅಂಚಿನಿಂದ ನರಕೆಯನ್ನು ಕಟ್ಟಿಗೆಯಿಂದ ಎತ್ತಿ ಗೋಡೆಯ ಮೇಲೆ ನಿಲ್ಲುಸುವುದು.

ದೀರ್ಘ ಮತ್ತು ಅಲ್ಪಕಾಲಿನ ಅಲಂಕಾರಗಳ ವಿವರ ಮನೆಗೆ ಕಟ್ಟಿದ ಸುತ್ತ ಗೋಡೆ ಅಥವಾ ನೆರಕೆಗೆ ಮಣ್ಣಿನ ಲೇಪನ ಮಾಡಿದ್ದರೆ ಆ ಗೋಡೆಗೆ ಸಗಣಿಯಿಂದ ಲೇಪನ ಮಾಡಿ ಅದಕ್ಕೆ ಸುಣ್ಣದಿಂದ ಚಿತ್ರಗಳನ್ನು ತೆಗೆಯುವುದು ಬಾಗಿಲಿಗೆ ಕೆಂಪು ಮಣ್ಣು ಅಥವಾ ಉರಮಂಜಿ ನಿಂದ ಅಲಂಕರಿಸಿ ಕೆಂಪು ಕುಂಕುಮ ಮತ್ತು ಹಳದಿ ಕುಂಕುಮ ಅಲಂಕರಿಸುವುದು ಮನೆಯೊಳಗೆ ಪ್ರಾಣಿ ಪಕ್ಷಿಗಳ ಕೊಂಬು ಮತ್ತು ಗರಿಗಳಿಂದ ಅಲಂಕರಿಸುವುದು ಮತ್ತು ತಿಳಿದ ರಂಗೋಲಿಗಳನ್ನು ಬಿಡಿಸಿ ಹೂವು ಕುಂಕುಮಗಳಿಂದ ತ್ರಾಂಗಡೂದೆದುರು ಅಲಂಕರಿಸುತ್ತಾರೆ.

೩

# ಬಂಧುತ್ವ ಮತ್ತು ವಿವಾಹ

**ಬಂಧುತ್ವ (Kinship):** ಹಕ್ಕಿಪಿಕ್ಕಿಯರ ಬಂಧುತ್ವ ಹೆಚ್ಚಾಗಿ ಅವರುಗಳ ವಿವಾಹಗಳ ಮೂಲಕವೇ ನಿರ್ಧಾರವಾಗುತ್ತದೆ. ತಾಯಿ ಮತ್ತು ತಂದೆಯ ಕಡೆಯಿಂದ ಭಿನ್ನ ಭಿನ್ನ ಬಗೆಯ ರಕ್ತ ಸಂಬಂಧಗಳು ಏರ್ಪಡುತ್ತವೆ. ಹೆಂಡತಿಯಾದವಳ ಕಡೆಯಿಂದಲೇ ಹೆಚ್ಚಿನ ಸಂಬಂಧಗಳು ಏರ್ಪಡುತ್ತವೆ. ಸುಮಾರು ೫೦ಕ್ಕೂ ಹೆಚ್ಚು ಬಂಧುತ್ವಗಳು ಈ ಹಕ್ಕಿಪಿಕ್ಕಿಯರಲ್ಲಿವೆ. ಈ ಬಂಧುತ್ವದ ಸರಪಳಿ ಅವರ ಸಾಂಸ್ಕೃತಿಕ ಸಮಾಜದ ಒಟ್ಟು ರಚನೆಯನ್ನೆ ಹೇಳುತ್ತದೆ. ಬಂಧು ಬಳಗದ ಬಗ್ಗೆ ಹೆಚ್ಚಿನ ಮಹತ್ವ ಕೊಡುವ ಇವರುಗಳು ಬಂಧು ಬಳಗವನ್ನ ದೇವರೆಂದು ತಿಳಿಯುವರು.

ಸಾಮಾನ್ಯವಾಗಿ ಎಲ್ಲ ಸಮಾಜಗಳಲ್ಲಿಯೂ ಜನರು ಅನೇಕ ಬಗೆಯ ಬಂಧನಗಳಿಂದ ಬೆಸೆದುಕೊಂಡಿರುತ್ತಾರೆ. ಇಂಥ ಬಂಧನಗಳಲ್ಲಿ ಸಂತಾನೋತ್ಪತ್ತಿ ಪ್ರವೃತ್ತಿ ಬಹುಮುಖ್ಯವಾದ ಹಾಗೂ ಸರ್ವಸಾಮಾನ್ಯವಾದದ್ದು. ಇದು ಇಬ್ಬಗೆಯ ಬಂಧನಗಳಿಗೆ ದಾರಿ ಮಾಡಿಕೊಡುತ್ತದೆ. ಅದು ಸತಿಪತಿಯರ ವೈವಾಹಿಕ ಸಂಬಂಧ ಆಗಿರಬಹುದು ಮತ್ತು ಸಮಾಜ ಅಥವಾ ಕಾನೂನಿನ ಅಂಗೀಕಾರವಿರಬೇಕಾಗುತ್ತದೆ. ಹಾಗಾಗಿ ಇವುಗಳು ಬಂಧುತ್ವದ ಅಡಿಯಲ್ಲಿ ಬರುತ್ತವೆ. ರಕ್ತ ಸಂಬಂಧದ ಮೂಲಕ ಇವರಲ್ಲಿ ಬಂಧುತ್ವವು ಅನ್ಯಗೋತ ಅಂದರೆ ಬೆಡಗುಗಳೊಂದಿಗೆ ಏರ್ಪಡುತ್ತವೆ. ಸುಮಾರು ೩೫ ಕ್ಕೂ ಹೆಚ್ಚು ಬಂಧುತ್ವ ಬೆಸೆಯುವ ಬಳಿಗಳಿದ್ದು ಸಾಂಸ್ಕೃತಿಕ ಲೋಕದ ಒಟ್ಟು ರಚನೆಯನ್ನು ಕಟ್ಟಿಕೊಡುತ್ತದೆ.

**ಮಾತೃವಂಶೀಯ ಬಂಧುತ್ವ :** ಬಂಧುತ್ವದಲ್ಲಿ ಸಗೋತ ಮದುವೆ ನಿಷಿದ್ಧವಿದ್ದು ಬೆಸಗೋತ ಮದುವೆ ಮಾನ್ಯವಿರುವವು. ತಾಯಿ ಮತ್ತು ತಂದೆಯ ಕಡೆಯಿಂದ ಸಂಬಂಧಗಳುಂಟಾದರೂ ಹೆಚ್ಚಾಗಿ ತಾಯಿಯ ಕುಟುಂಬದರೊಂದಿಗೆ ಸಂಬಂಧಗಳು ಬೆಳೆಯುತ್ತಿರುವುದನ್ನು ಕಾಣಬಹುದು.

**ಪಿತೃವಂಶೀಯ ಬಂಧುತ್ವ :** ತಂದೆಯ ಕುಟುಂಬದವರೊಂದಿಗೂ ಕೂಡ ಸಂಬಂಧಗಳು ಏರ್ಪಡಿಸುತ್ತದೆ. ಆದರೆ ತಾಯಿಯ ಕಡೆಯ ಸಂಬಂಧಗಳಿಗೂ ಹೆಚ್ಚಿನ ಪ್ರಾಧಾನ್ಯತೆಯುಂಟು.

**ವಿನೋದ ಸಂಬಂಧಗಳು :** ವಿನೋದ ಸಂಬಂಧಗಳು ವ್ಯಕ್ತಿಗಳ ನಡುವಣ ಸೌಹಾರ್ದತೆ ಹಾಗೂ ಸಮಾನತೆಯನ್ನು ಸೂಚಿಸುತ್ತವೆ ಎನ್ನಬಹುದು. ಜೊತೆಗೆ ಲೈಂಗಿಕ ಸಂಬಂಧ

ಸಾಧ್ಯತೆಯನ್ನು ಸೂಚಿಸುತ್ತದೆ ಎನ್ನಬಹುದು. ಹಕ್ಕಿಪಿಕ್ಕಿ ಬುಡಕಟ್ಟಿನಲ್ಲಿಯೂ ಕೂಡ ಈ ವಿನೋದ ಸಂಬಂಧಗಳು ಬಂಧತ್ವ ಬೆಳೆಸಲು ಅನುಕೂಲಕರ ಪರಿಸ್ಥಿತಿಯಿದ್ದಾಗ ಅಲ್ಲಲ್ಲಿ ಜರುಗಿರುವುದನ್ನು ಕಾಣಬಹುದು ಆದರೆ ಇದು ಕೂಡ ರಕ್ತಸಂಬಂಧಗಳಡಿಯೇ ಜರುಗುವುದು ಒಂದು ವೈಶಿಷ್ಟ್ಯವಾಗಿದೆ.

**ಪಿತೃಪ್ರಧಾನ ಕುಟುಂಬ :** ಕುಟುಂಬಕ್ಕೆ ಪಿತೃವೇ ಮುಖ್ಯಸ್ಥನಾಗಿರುತ್ತಾನೆ. ಅವನು ಎಲ್ಲ ಅಧಿಕಾರವನ್ನು ಪಡೆದಂಥನಾಗುತ್ತಾನೆ. ಇಲ್ಲಿನ ಪಿತೃ ಕುಟುಂಬದ ಸ್ವತ್ತು ಹಕ್ಕುಗಳ ಒಡೆಯನಾಗಿರುತ್ತಾನೆ. ಉಳಿದವರೆಲ್ಲ ಅಧೀನರಾಗಿರುವರು, ಕುಟುಂಬದ ಧಾರ್ಮಿಕ ಆಚರಣೆಗಳ ಕಾರ್ಯವನ್ನು ನಿರ್ವಹಿಸುವಂತೆ, ರಕ್ಷಕನೂ ಆಗಿರುತ್ತಾನೆ. ಆದರೆ ಹಕ್ಕಿಪಿಕ್ಕಿಗಳಲ್ಲಿ, ಆಹಾರಕ್ಕಾಗಿ ಅಲೆದಾಡುವುದು, ಮಕ್ಕಳನ್ನು ಸಾಕುವುದು ಹಿರಿಯರಲ್ಲಿ ವಿಧೇಯದಿಂದ ನಡೆದುಕೊಳ್ಳುವುದನ್ನು ಬಿಟ್ಟರೆ ಆಸ್ತಿಪಾಸ್ತಿಯೆಂದು, ಏನನ್ನು ಸಂಪಾದಿಸಿಲ್ಲ. ದೇವಿಯ ಪಿಟಾರಿ (ತ್ರಾಂಗಡೂ)ಯು ಒಡೆತನವನ್ನು ಕುಟುಂಬದ ಹಿರಿಯ ಮಗ ಪಡೆಯುತ್ತಾನೆ. ಈ ತ್ರಾಂಗಡೂ, ದೇವಿಯೆಂಬ ಆಸ್ತಿಯೊಂದಿಗೆ ತಲೆಮಾರನ್ನು ಕಲಿಯುವದೊಂದನ್ನು ಬಿಟ್ಟರೆ ಬೇರೇನನ್ನು ನಮ್ಮ ಮುಂದಿನ ಪೀಳಿಗೆಗಾಗಿ ಕೂಡಿಡಲಿಲ್ಲ. ತಲೆಮಾರಿನ ಆಸ್ತಿಗಾಗಿ, ಹಬ್ಬಗಳಲ್ಲಿ ದೇವಿಯ ಪೀಟಾರಿಯನ್ನು ಕೂರಿಸುವ ಜಾಗಕ್ಕಾಗಿ ಅನೇಕ ಪಂಚಾಯ್ತಿಗಳೂ, ಜಗಳಗಳು, ಸಂಬಂಧಗಳನ್ನೆ ಕಳೆದುಕೊಂಡವರೂ ಇದ್ದಾರೆ.

**ಮಾತೃಪ್ರಧಾನ ಕುಟುಂಬ :** ಹಕ್ಕಿಪಿಕ್ಕಿಗಳಲ್ಲಿ ಮಾತೃಪ್ರಧಾನ ಕುಟುಂಬಗಳು ವಿರಳ. ಇಲ್ಲಿ ಕುಟುಂಬದ (ಯಜಮಾನ) ತಂದೆಯು ಅವಸಾನದ ನಂತರ ಆ ಕುಟುಂಬದ ತಾಯಿ ಪ್ರಧಾನವಾಗುತ್ತಾಳೆ. ತಾಯಿಯ ಅಪ್ಪಣೆ ಪಡೆಯದೆ ಮಗನಾದವನು ಯಾವ ಕಾರ್ಯವನ್ನು ಕೈಗೊಳ್ಳುವುದಿಲ್ಲ. ಉದಾಹರಣೆಗೆ ಒಂದೂರಿನಿಂದ ಇನ್ನೊಂದೂರಿಗೆ ವಲಸೆ ಹೋಗುವ ವಿಚಾರವಾಗಿರಬಹುದು, ಹಬ್ಬ ಹರಿದಿನಗಳನ್ನು ಆಚರಿಸುವದಾಗಲೀ, ಕಷ್ಟಕಾರ್ಪಣ್ಯಗಳು ಬಂದಾಗ ದೇವಿಯಲ್ಲಿ ಗುಲಗಂಜಿಯ ಶಾಸ್ತ್ರ ಕೇಳಿ ಹರಕೆಹೊತ್ತಲ್ಲಿ, ತಾಂಡಾಗಳಿಗೆ ಹಿಂತಿರುಗಿ ಬಂದು ಸೇರಿ, ಸಂಬಂಧಿಕರೊಡನೆ ಹಬ್ಬ, ಮದುವೆ, ಮುಂತಾದ ಕಾರ್ಯಗಳನ್ನು ತಾಯಿಯ ಅಪ್ಪಣೆಯಂತೆ ಮಗ ನೆರವೇರಿಸುತ್ತಾನೆ. ಇದನ್ನು ಈ ಜನಾಂಗ ಮಾತೃಪ್ರಧಾನ ಕುಟುಂಬ ಅಂದುಕೊಳ್ಳಬೇಕು. ಆಸ್ತಿ-ಪಾಸ್ತಿಗಳ ಒಡೆತನವಿದ್ದರೇನೇ ಅದನ್ನು ಪಿತೃ ಅಥವಾ ಮಾತೃಗಳಿಗೆ ಪ್ರಧಾನಿಗಳೆಂದು ಕರೆಯಬಹುದು. ಆದರೆ ಒಂದೆಡೆ ನೆಲೆಯಿಲ್ಲದೆ ಆಹಾರಕ್ಕಾಗಿ ಅಲೆದಾಡೋ ಅಲೆಮಾರಿಗಳಾದ ಇವರು ಆಸ್ತಿಪಾಸ್ತಿ ಕೂಡಿಡುವ ಗೋಜಿಗೇ ಹೋಗುವುದಿಲ್ಲ. ತಾವಾಯಿತು ತಮ್ಮ ಮಕ್ಕಳ ಪೋಷಣೆಯಾಯಿತು, ಮುಂದೇನು ಮಕ್ಕಳಿಗಾಗಿ ಮಾಡುತ್ತೀರಿ, ಅಂದರೆ "ಕೈಕಾಲು ಗಟ್ಟಿಯಿವೆಯಲ್ಲ! ದುಡಿದು ತಿಂತಾರೆ, ಆಮೇಲೆ ದೇವರಿದ್ದಾನೆ" ಅಂದು ಬಿಡುತ್ತಾರೆ.

ಬಹುಪತ್ನಿತ್ವ ಕುಟುಂಬ : ಹಕ್ಕಿಪಿಕ್ಕಿಯರಲ್ಲಿ ಬಹುಪತ್ನಿತ್ವ ಕಂಡುಬರುತ್ತದೆ. ಕಾರಣಗಳು

೧. ತಂದೆ ತಾಯಿಯರ ಬಲವಂತಕ್ಕೆ ಆದ ಮದುವೆಯಾಗಿರಬಹುದು.

೨. ಮೊದಲ ಮಡದಿಯಲ್ಲಿ ಮಕ್ಕಳಾಗದಿರಬಹುದು.

೩. ತಂದೆ ತಾಯಿಯರ ಸೇವೆಯನ್ನು ಸರಿಯಾಗಿ ಮಾಡದ ಮಡದಿಯಿದ್ದರೆ.

೪. ಕೂಡಾವಳಿಗಳಿಂದ (ಪಾಟ್) ಹುಟ್ಟಿದ ಮಗನಿಗೆ (ಸೀರುಡಿಕೆ) ದೇವಿಯ ಪಿಟಾರಿ (ತ್ರಾಂಗಡೂ)ಯ ಒಡೆತನ ಸಿಗುವುದಿಲ್ಲ ಎಂದಾಗ,

೫. ತಾನಾಗೇ ಇಚ್ಛಿಸಿದ್ದು ಅದಕ್ಕೆ ಹಿರಿಯರ ಒಪ್ಪಿಗೆಯಿದ್ದರೆ. ಈ ಎಲ್ಲಾ ಕಾರಣಗಳಿಂದಾಗಿ ಕುಟುಂಬದ ಯಾಜಮಾನ ಅಂದರೆ ದುಡಿದು ಸಾಕಲು ಸಮರ್ಥನಾದವನು ಮತ್ತೊಂದೊ, ಮಗದೊಂದೂ ಮದುವೆಯಾಗುತ್ತಾನೆ.

**ಕುಟುಂಬದಲ್ಲಿ ಸ್ತ್ರೀಯರ ಸ್ಥಾನಮನ :** ಬುಡಕಟ್ಟು ಜನಾಂಗಗಳಲ್ಲಿ ಸ್ತ್ರೀಯರಿಗೆ ಉತ್ತಮ ಸ್ಥಾನಗಳಿದ್ದವು. ಆದರೆ ಈ ಹಕ್ಕಿಪಿಕ್ಕಿ ಬುಡಕಟ್ಟು ಜನಾಂಗದವರಲ್ಲಿ ಸ್ತ್ರೀಯರಿಗೆ ಹಬ್ಬ ಪೂಜೆಗಳಲ್ಲಿ ಮತ್ತು ಮದುವೆಗಳಲ್ಲಿ ಕನ್ಯತ್ವದ ಆಧಾರದ ಮೇಲೆ ಟೀಕ ತಿಲಕ ಬೊಟ್ಟಿಡುವ ಶಾಸ್ತ್ರ ಒಂದನ್ನು ಬಿಟ್ಟು ಬೇರೆ ಸಂದರ್ಭಗಳ್ಲೆಲ್ಲ ಗೌರವ ಸ್ಥಾನವಿದೆಯೆಂದೆ ಹೇಳಬೇಕು. ಅವುಗಳನ್ನು ಸಮರ್ಥಿಸಲು ಕೆಲವು ಅಂಶಗಳನ್ನು ಗಮನಿಸಬಹುದು.

ವಿಶಿಷ್ಟ ಸ್ಥಾನಮಾನದಲ್ಲಿ ಮಹಿಳೆಗೆ ಅರ್ಹತೆ ಸೇಂದಿ ಕುಡಿಯುವುದರಲ್ಲಿ ಹೆಂಡತಿ ಭಾಗಿಯಾಗಬಹುದು. ಗಂಡನಾದವನು ಬೇಟೆಯ ಪ್ರಾಣಿಗಳು ಹಗಲು ಹೊತ್ತ ಮಾರಾಟವಾಗೆ ಉಳಿದರೆ, ಸಂಜೆಯಾಗಲು ಸೇಂದಿಯವನ ಸಾಲಾಗುತ್ತಿತ್ತು. ತಾವು ಕುಡಿದು ಬುಲ್ಡಿ ಗಳಲ್ಲಿ ತಮ್ಮ ಮಡದಿಯರಿಗೂ ಒಯ್ಯುತ್ತಿದ್ದರು. ಸರ್ವೇಸಾಮಾನ್ಯವಾಗಿತ್ತು. ಹೆಣ್ಣಿಗೆ ತೆರಕೊಡುವುದು ವಧು ದಕ್ಷಿಣೆ ಕೊಡುವ ವಿಧಾನವನ್ನು ಇಲ್ಲಿಯವರೆಗೂ ಕಾಪಾಡಿಕೊಂಡು ಬಂದಿರುವವರಲ್ಲಿ ಈ ಜನಾಂಗದವರದೇ ಮೇಲುಗೈಯೆನ್ನಬಹುದು. ಸಮಾಜ ಹೆಣ್ಣಿಗೆ ಕೊಡುವ ಅತಿದೊಡ್ಡ ಗೌರವವೆನ್ನಬಹುದು. ಹೆಣ್ಣಿಗೆ ಮರುವಿವಾಹವಾಗುವ ಸ್ವಾತಂತ್ರವಿದೆ. ಇದಕ್ಕೆ ಹಿರಿಯರ ಒಪ್ಪಿಗೆ ಇರಲೇಬೇಕಾಗುತ್ತದೆ. ಅದು ವಿಧವಾ ವಿವಾಹ ಮೈದುನವಿವಾಹ ಅಥವಾ ಬೇರೆ ಕೂಡಾವಳಿ ಪಾಟ್ ಆಗಿರುವುದು. ಕನ್ಯತ್ವಕ್ಕೆ ಹೆಚ್ಚು ಪ್ರಾಮುಖ್ಯತೆಯಿದೆ. ಮದುವೆಯಲ್ಲಿ ಟೀಕ ತಿಲಕ ಹಚ್ಚಲು ದೇವಿಯೆದುರು ತ್ರಾಂಗಡೂ ಎದುರು ಅಂಥವಳು ಮಾತ್ರ ಒಪ್ಪಿ ಕೊಳ್ಳುತ್ತಾಳೆ.ಇಲ್ಲವಾದರೆ ಆಕೆಯ ಮನಸ್ಸಾಕ್ಷಿ ಒಪ್ಪದೆ ಪಾಟ್ ಸೀರುಡಿಕೆ ಆಗುತ್ತಾಳೆ. ಗಂಡು ಒಪ್ಪಿದರೆ ಮಾತ್ರ ಕುಲದೇವಿಯು ಹಾಗೆ ಕನ್ಯತ್ವ ಕಾಪಾಡಿಕೊಂಡಿರುವ ಮಹಿಳೆಯ ಮಗನಿಗೇ ಕುಲದೇವಿಯು ಕೊಡಲ್ಪಡುತ್ತಾಳೆಯಾದ್ದರಿಂದ ಆಕೆಯು ಇಲ್ಲಿ ವಿಶಿಷ್ಟ ಸ್ಥಾನ ಪಡೆಯುತ್ತಾಳೆ. ಆಕೆಯ ಶೀಲಪಾವಿತ್ರ್ಯಕ್ಕಾಗಿ ಆಕೆ ಗುರುಗಳ್ನಿ ವಡ್ಡಿ ಗುರುಮಾತಾ ಅನಿಸಿಕೊಳ್ಳುತ್ತಾಳೆ. ಆಕೆಯ ತಲೆಯ ಮೇಲೆ ಹಬ್ಬದ ಕೊನೆಯದಿನ ಭಂಡಾರ್ಯು ಹರಿವಾಣ ಕೊಡಲಾಗುತ್ತದೆ. ಮದುವೆ ಯಾಗದವಳು ಮದುವೆಯಲ್ಲಿ ಟೀಕ ತಿಲಕ ವಿರಿಸಿಕೊಂಡವಳು. ಹಬ್ಬದಲ್ಲಿ ಹಬ್ಬದ ಬಿಡಾರ ದೊಳಗೆ ಹೊರಗೆ ಸಗಣಿಬಳಿಯಬಹುದು.ತಪ್ಪುಮಾಡಿದವಳು ಹಿರಿಯರಿಗೆ ಜಗಳದಲ್ಲಿ ಅವಾಚ್ಯ ಶಬ್ದಗಳಿಂದ ಬೈದವಳಿಗೆ ಶಿಕ್ಷೆಯಾಗಿ ಆಕೆ ದೊಡ್ಡ ದಂಡವನ್ನೇ ತೆತ್ತು ದೇವರ ಬಿಡಾರದ ಒಳ ಹೊರಗೆ ಲೀಪಣ್ ಸಗಣಿಬಳಿದು ರಂಗವಲ್ಲಿ ಹಾಕಿ ಹಿರಿಯರ ತಲೆಗೆ ಕೊಬ್ಬರಿಎಣ್ಣೆ ಎರೆದರೆ ಆಕೆಯನ್ನು ಅಶಲಾವ್ ಶುದ್ಧಿಮಾಡುವುದು ಶಾಸ್ತ್ರ ಆದಂತೆ ಇದೊಂದು ಅವಕಾಶದಿಂದ

ಆಕೆ ಮತ್ತೊಮ್ಮೆ ತಪ್ಪುಮಾಡಿದಂತೆ ಬೇರೆಯವರು ನೋಡಿ ತಿದ್ದುಕೊಳ್ಳುವಂತೆ ಮಾಡದಂತೆ ಎಚ್ಚರ ವಹಿಸುತ್ತಾರೆ. ಕನ್ಯತ್ವವನ್ನು ಕಾಪಾಡಿಕೊಂಡವಳಿಗೆ ಮದುವೆಯಲ್ಲಿ ಟೀಕ ತಿಲಕ ಬೊಟ್ಟು ಹಚ್ಚುತ್ತಾರೆ.ಅವಳೇ ಗಂಡನಿಗೆ ಟೀಕಂಧಾರಣಿಯಾಗಿ ಕುಟುಂಬದಲ್ಲಿ ಗೌರವ ಪಡೆಯುತ್ತಾಳೆ. ಆಕೆಯಲ್ಲಿ ಹುಟ್ಟಿದ ಮೊದಲ ಗಂಡುಮಗನಿಗೆ ಕುಲದೇವತೆಯಾದ ದೇವಿಯ ತ್ರಾಂಗಡೂ ಬರುತ್ತದೆ. ಆಕೆಗೆ ಗಂಡುಮಕ್ಕಳಾಗದೆ ಬರೀ ಹೆಣ್ಣೆ ಆದರೆ ಆತನಿಗೆ ಇನ್ನೊಂದು ಮದುವೆ ನಿಶ್ಚಿತವಾಗುತ್ತದೆ. ಹೀಗೆ ಗಂಡು ಮದುವೆಯಾದರೂ ಆತನಿಗೆ ಟೀಕ ಹಚ್ಚುತ್ತಾರೆ. ಆದರೆ ಹೆಣ್ಣಿಗೆ ಜೀವನದಲ್ಲಿ ಒಂದೇ ಸಲ ಟೀಕ ಹಚ್ಚುವ ಶಾಸ್ತ್ರವಾಗುತ್ತದೆ. ಆಕೆ ತನ್ನ ಮೈದುನ ವಿವಾಹ, ಇಷ್ಟಪಟ್ಟವನನ್ನು ಮದುವೆಯಾಗಬೇಕು. ಇದಕ್ಕೆಲ್ಲಾ ಹಿರಿಯರ ಒಪ್ಪಿಗೆಯಿರ ಬೇಕಾಗುತ್ತದೆ. ಅಪ್ಪಗೆ ಪಡೆಯದಿದ್ದರೆ ಆಕೆಗೆ ಬೆಲೆಯಿರುವುದಿಲ್ಲ. ಇದರಿಂದ ಆ ಕುಟುಂಬಕ್ಕೆ ಗೌರವವಿರುವುದಿಲ್ಲವಾದ್ದರಿಂದ ಒಪ್ಪಿಗೆ ಪಡೆಯಬೇಕಾಗುತ್ತದೆ. ಹಿಂದೆಲ್ಲ ಒಲೆಯ ಬೆಂಕಿ, ಹುಕ್ಕಾ, ನೀರು ಉಪಯೋಗಿಸಲು ಬಿಡುತ್ತಿರಲಿಲ್ಲ. ಹಬ್ಬಗಳಲ್ಲಿ ತಾವು ಪೂಜಿಸುವ ದೇವರು ಗುರುರಾತ್‌ವಾಳೋರಲ್ಲಿ ವೀಬ್ರಿಸಿ ಕಾಳಿವಾಳದಲ್ಲಿ ದುಗಾವ್. ಪವಾರಲ್ಲಿ ಜೋಗಣ್, ಮೇವಾಡ ರಲ್ಲಿ ನೌಕೋಡ್ ಎಲ್ಲರಲ್ಲು ಹೆಣ್ಣು ದೇವರೇ ಆಕರ. ವಿಶಿಷ್ಟ ಸ್ಥಾನ ಪ್ರಮುಖ ಪಡೆದಿರುವುದನ್ನು ಈ ಬುಡಕಟ್ಟಿನಲ್ಲಿ ಕಾಣಬಹುದು. ಇದು ಅವರ ಕುಲದೇವರೂ ಕೂಡ ಆಗಿರುತ್ತದೆ. ಕುಲ ದೇವತಾ ಪದ್ಧತಿಯ ಪ್ರಕಾರ ದೇವಿಯ ಮತ್ತು ಗುರುವಿನ ಮೂರ್ತಿಯನ್ನು ಬೆಳ್ಳಿಯಲ್ಲಿ ಮಾಡಿಸುತ್ತಾರೆ. ಇದರಿಂದ ಹೆಂಗಸಾದವಳು ಮದುವೆಯ ನಂತರದಲ್ಲಿ ಕಾಲಿಗೆ ಬೆಳ್ಳಿ ಚೈನಾಗಲೀ, ಕಾಲುಂಗರ, ಕಾಲುಪಿಲ್ಲಿಯಾಗಲೀ ಎಷ್ಟೇ ಹಣವಂತರಾದರೂ ಕೂಡ ಇಂದಿಗೂ ಧರಿಸುವಂತಿಲ್ಲ ಹಿಂದೆಲ್ಲಿಯೂ ಧರಿಸಿಲ್ಲ, ಆದರೆ ಉಲ್ಲಂಘಿಸಿ ಎರಡುದಿನ ಶೋಕಿ ನೋಡಿದವರಿಗೆ ದೇವಿ ಅನೇಕ ಕಷ್ಟಗಳನ್ನು ಕೊಡುತ್ತಿಳೆನ್ನುತ್ತಾರೆ. ಇದಕ್ಕೆ ನಿದರ್ಶನಗಳು ನೂರಾರಿವೆ ಅದೇನೇ ಇರಲಿ ಬೆಳ್ಳಿಯ ವಸ್ತುವನ್ನು ಕಾಲಿಗೆ ಧರಿಸದಿರುವುದನ್ನು ಈಗಲೂ ಕಾಣಬಹುದು. ಹೆಂಗಸರು ಕೂಡ ದೇವಿಯನ್ನು ತಯಾರಿಸುವ ವಸ್ತುವನ್ನು ಧರಿಸಲು ನಿರಾಕರಿಸುತ್ತಾನೆ. ಇದರಿಂದ ಈ ಸಮುದಾಯದವರ ದೈವನಿಷ್ಠೆ, ದೇವನಂಬಿಕೆಗಳ ಪರಿಚಯ ಆಗುತ್ತದೆ. ಅನರ್ಹತೆಗಳು ಹೆಣ್ಣು ಮೈನೆರುಯುವುದಕ್ಕೆ ಋತು ಮುಂಚೆ ಬಾಲಕಿಯೊಂದು ಎಲ್ಲ ವಿಧದಲ್ಲೂ ಸ್ವಾತಂತ್ರ್ಯವನ್ನು ಗಂಡಿಗೆ ಸಮನಾಗಿ ಕೊಡುತ್ತಾರೆ. ಆದರೆ ಮೈನೆರದ ಮೇಲೆ ತಿಂಗಳು ಋತುಮಾನಗಳಿಂದಾಗಿ ಆಕೆಯನ್ನು ಹಬ್ಬ ಹರಿದಿನಗಳಲ್ಲಿ ದೇವರ ಬಿಡಾರದ ಬಳಿ ಬರಲು ಬಿಡುವುದಿಲ್ಲ. ಬೇಕಾದರೆ ಹಬ್ಬದ ಹೊಸಬಿಡಾರದಡಿ ಸಗಣಿಯಿಂದ ಬಳಿದು ರಂಗವಲ್ಲಿ ಹಾಕಬಹುದು. ಕನ್ಯತ್ವಕ್ಕೆ ಹೆಚ್ಚು ಪ್ರಾಮುಖ್ಯತೆಯಿರುವುದರಿಂದ ಅಂಥವರಿಗೆ ಗೌರವ ಇಲ್ಲದಿದ್ದರೆ ಸಮಾಜದಲ್ಲಿ ಅಂಥವರ ಕುಟುಂಬಕ್ಕೂ ಕೆಟ್ಟಹೆಸರು ಬರುತ್ತದೆ. ಪರಿಹಾರವಾಗಿ ಆಕೆ ಅಶಲಾವ್ ಶುದ್ಧಿ ಆಗಬಹುದು. ಇದಕ್ಕೆ ಪಂಚಾಯ್ತಿಯವರು ವಿಧಿಸುವ ದಂಡವನ್ನು ಭರಿಸಿದ ನಂತರವೆ ಆಗುತ್ತದೆ. ಏನೇ ದಂಡ ಕಟ್ಟಿದರೂ ಮದುವೆಯಲ್ಲಿ ಆಕೆಗೆ ಟೀಕ ತಿಲಕವನ್ನು ಹಚ್ಚುವುದಿಲ್ಲ. ಗಂಡು ಎಷ್ಟು ಮದುವೆಯಾದರೂ, ಏನೇ ತಪ್ಪು ಮಾಡಿದರೂ ದಂಡ ಕಟ್ಟಿಸಿಕೊಳ್ಳುವುದರ ಮೂಲಕ ಪರಿಹಾರ

ಕಂಡುಕೊಂಡು ಟೀಕ ಹಚ್ಚುತ್ತಾರೆ. ಇದರಿಂದ ಹೆಣ್ಣು ಟೀಕಂಧಾರಣೆ ಯಾಗುವುದಿಲ್ಲ. ಈಕೆಯಲ್ಲಿ ಹುಟ್ಟಿದ ಮಕ್ಕಳಲ್ಲಿ ಹಿರಿಮಗನಿಗೆ ಕುಲದೇವತೆ ಕೊಡಲು ಬರುವುದಿಲ್ಲ. ಆದ್ದರಿಂದ ಗಂಡು ಇನ್ನೊಂದು ಮದುವೆಯಾಗಬಹುದು. ಋತುವಾದ ಹೆಣ್ಣು, ಮದುವೆಯಾದ ಹೆಣ್ಣು ದೇವಿಯ ಹಬ್ಬಗಳಲ್ಲಿ ಕಧ್ಯೆ ಕಜ್ಜಾಯದ ಹಬ್ಬಪೂಜೆ, ಭರ್ರು ಕುರಿಕಡಿಯುವವರಲ್ಲಿ ಕುರಿ ಹಹೆತ್ ಕೋಣ ಕಡಿಯುವವರಲ್ಲಿ ದಹೆತವನ್ನು ಹರಕೆಯೊಪ್ಪಿಸುವುದು. ಇಂತಹ ಪೂಜೆಗಳಲ್ಲಿ ಭಾಗವಹಿಸುವಂತಿಲ್ಲ. ರಾತ್ರಿಯಿಡಿ ಆಚರಿಸುವ ಈ ಹಬ್ಬಗಳಲ್ಲಿ ದೇವರಿಗಾಗಿ ಹೊಸ ಲಂಗರು, ಬಿಡಾರದ ಎದುರು ದೂರದಲ್ಲಿಯೇ ಕುಳಿತು ನೋಡಬೇಕಾಗುತ್ತದೆ. ಆಯಾನು ಪೂಜೆಗಳ ಸಂದರ್ಭಕ್ಕನುಸಾರವಾಗಿ ಪದ್ಯ ಶೋಕಗಳನ್ನು ರಾಗವಾಗಿ ಹಾಡುವ ಭಾಗ್ಯ ಮಾತ್ರ ಆಕೆಯದೆ. ಕನ್ಯತ್ವಕ್ಕೆ ಹೆಚ್ಚಿನ ಗಮನಕೊಡುವುದರಿಂದ ಋತುವಾದ ವರ್ಷದೊಳಗೆ ಅಥವಾ ಅದಕ್ಕೂ ಮುಂಚೆಯೇ ವಿವಾಹ ಮಾಡಿಬಿಡುವ ಪದ್ಧತಿಯಿತ್ತು. ಇದರಿಂದ ಆಕೆಯ ಕನ್ಯತ್ವಕ್ಕೆ ಧಕ್ಕೆ ಬರುವುದಿಲ್ಲವೆಂದೇ ತಿಳಿಯುತ್ತಾರೆ. ಈಗ ಬಾಲ್ಯವಿವಾಹದಂಥ ಪದ್ಧತಿಗಳು ಹೆಚ್ಚಾಗಿ ಕಂಡು ಬರುವುದಿಲ್ಲ. ಈ ಪದ್ಧತಿ ಲಂಬಾಣಿಗರಲ್ಲೂ ಇತ್ತು. ಹಕ್ಕಿಪಿಕ್ಕಿಗರಲ್ಲಿ ಇರುವಂತೆ ಥಾಳಿ ಗಂಗಾಳದಲ್ಲೇ ಮದುವೆ, ನಿಶ್ಚಯ, ಮಾಡುವ ಕಾಲವಿತ್ತು. ಶೀಲಕಳೆದು ಕೊಂಡವಳು ತಡವಾಗಿ ಭಿಕ್ಷೆಯಿಂದ ಬಿಡಾರಕ್ಕೆ ಬರುವವಳು, ಜಗಳದಲ್ಲಿ ಹಿರಿಯರಿಗೆ ಅಗೌರವವಾಗುವಂತೆ ನಡೆದು ಕೊಂಡರೆ ಆಕೆಗೆ ಬೆಲೆಯಿಲ್ಲ. ಆಕೆಯನ್ನು 'ಪಾಪೇಲಿ' ಪಾಪದವಳು "ಚೋದ್‌ಮಾರೇಸಿ" ಬಾಯಿಗೆ ಕಡಿವಾಣವಿಲ್ಲದವಳು ಎಂಬ ಪಟ್ಟ ಬರುತ್ತದೆ. ಇಂತಹ ಕೀಳಿರಿಮೆಯ ಪಟ್ಟದಿಂದಾಗಿ ಆಕೆಯ ಪರಿವಾರದವರಿಗೆ, ಸಮುದಾಯದಲ್ಲಿ ಮತ್ತು ಪಂಚಾಯ್ತಿಯಲ್ಲಿ ಗೌರವವಿಲ್ಲ. ದೂರವಿರಲು ಇಷ್ಟಪಡುತ್ತಾರೆ. ಹೆಂಗಸೊಬ್ಬಳಿಂದ ಖಾಂದಾನಿಗೆ ಕೆಟ್ಟ ಹೆಸರು ಬರುವುದನ್ನು ವರ್ಜಿಸುವ ಹಿರಿಯರು ತಮ್ಮ ಮಗನಿಗೆ ಇನ್ನೊಂದು ಮದುಯಾಗುವಂತೆ ಪ್ರೇರೆಪಿಸುತ್ತಾರೆ. ನಂತರದಲ್ಲಿ ಆಕೆ ಎಷ್ಟೇ ಸದ್ಬುದ್ಧಿಯಿಂದ ನಡೆದುಕೊಂಡು ದಂಡತೆತ್ತರೂ ಆಕೆಗೆ ಗುರುಗಳ್ಳಿ, ಹಿರಿವಡಿ ಸ್ಥಾನ ನೀಡಲು ಹಿಂಜರಿಯುತ್ತಾರೆ. ಇಲ್ಲಿ ಆಕೆಗೆ ಭಂಡಾರ್ರು ಎತ್ತುವ ಒಂದು ವಿಶಿಷ್ಟ ಕಾರ್ಯ ದಿಂದ ವಂಚಿತಳಾಗಿರುತ್ತಾಳೆ.

**ವಿವಾಹ ನಂತರದ ವಾಸ :** ಇವರಲ್ಲಿ ಹೆಚ್ಚಾಗಿ ಅವಿಭಕ್ತ ಕುಟುಂಬದ ವಾಸಿಗರೇ ಹೆಚ್ಚು, ಇತ್ತೀಚೆಗೆ ವಿಭಕ್ತ ಕುಟುಂಬಗಳು ನಾಗರೀಕತೆಯ ಪ್ರಭಾವದಿಂದಾಗಿ ರೂಪುಗೊಂಡಿದೆ. ಇದರಿಂದ ಹೆತ್ತವರ ಸೇವೆ ಮಾಡಿದಂತಾಗುವುದಿಲ್ಲ ಎಂದೇ ಹಕ್ಕಿಪಿಕ್ಕಿಯರು ಅವಿಭಕ್ತ ಕುಟುಂಬಕ್ಕೆ ಹೆಚ್ಚಿನ ಆದ್ಯತೆ ಕೊಡುವರು.

**ಹೆಣ್ಣು, ತೆರ, ಮದುವೆ**

ಹಕ್ಕಿಪಿಕ್ಕಿಯರು ಹೆಣ್ಣಿಗೆ ಸರಿಸಮಾನವಾದ ಸ್ಥಾನಮಾನವನ್ನು ಕೊಟ್ಟಿರುವರು. ಹಾಗೆಯೇ ಹೆಣ್ಣು ಹುಟ್ಟಿದಾಗ, ಸತ್ತಾಗ ಯಾವುದೇ ತರಹದ ಲೋಪ ಮಾಡುವುದಿಲ್ಲ. ಹೆಣ್ಣು ಹುಟ್ಟಿದರೆ ಗಂಡು ಹುಟ್ಟಿದಷ್ಟೇ ಸಂತೋಷವನ್ನು ಪಡುತ್ತಾರೆ. ಹೆಣ್ಣನ್ನು ಕೀಳಾಗಿ ಯಾರು ನೋಡುವುದಿಲ್ಲ. ಹೆಣ್ಣಿನ ಸ್ವಗೋತ್ರವನ್ನು ಬಿಟ್ಟು ಇತರೆ ಬೆಸ ಬೆಡಗಿನವರ ಜೊತೆ

ಸಂಬಂಧವನ್ನು ಬೆಳೆಸುತ್ತಾರೆ. ಮೊದಲು ಗಂಡಿನವರು ಹೆಣ್ಣನ್ನು ಕೇಳಿದರೆ ಅವರ ಗೋತ್ರ ಅಥವಾ ಬಳ್ಳಿ ಗೊತ್ತು ಮಾಡಿಕೊಂಡು ಹುಡುಗನ ಬಗ್ಗೆ ತಿಳಿದುಕೊಂಡು ಅವರ ಮನೆಯಲ್ಲಿ ಹೆಣ್ಣು ಮಗು ಇದ್ದರೆ ಆ ಹೆಣ್ಣನ್ನು ನಮ್ಮ ಮನೆಗೆ ಕೊಡಲು ಕೇಳುವರು. ಅವರು ಒಪ್ಪಿ ಹೆಣ್ಣನ್ನು ಎದುರಬದರಾಗಿ ಅಂದರೆ ಇವರ ಹೆಣ್ಣು ಅವರಿಗೆ ಅವರ ಹೆಣ್ಣು ಇವರ ಮನೆಗೆ ಕೊಡಲು ಮತ್ತು ತೆಗೆದುಕೊಳ್ಳಲು ನಿಶ್ಚಯಿಸುತ್ತಾರೆ. ಇದನ್ನು 'ಆಟಾ-ಸ್ಟಾಟ' ಎನ್ನುತ್ತಾರೆ. ಅವರ ಮನೆಯಲ್ಲಿ ಹೆಣ್ಣು ಇಲ್ಲದಿದ್ದರೆ ತಾವು ಕೊಟ್ಟ ಹೆಣ್ಣಿನ ಹೊಟ್ಟೆಯಲ್ಲಿ ಹುಟ್ಟುವ ಹೆಣ್ಣು ಮಗುವನ್ನು ಕೊಡತಕ್ಕದ್ದು. ಇಲ್ಲದಿದ್ದರೆ ಹೆಣ್ಣಿನ ತೆರ ೬೦ ರೂ.ಗಳನ್ನು ಹೆಣ್ಣು ಹೆತ್ತವರಿಗೆ ಕೊಡತಕ್ಕದು. ಈ ತೆರ ಇತ್ತೀಚೆಗೆ ಬೇರೆ ಕಡೆ ೬೦ ರೂ.ಗಳಿಂದ ೧೦,೦೦೦ ಗಳವರೆಗೆ ಹೆಣ್ಣಿನ ತೆರ ರೂಪದಲ್ಲಿ ನೀಡಲಾಗುತ್ತದೆ. ಈ ತೆರವನ್ನು ತೆಗೆದುಕೊಂಡು ನಂತರ ಗಂಡಿನ ಮನೆಯ ಮುಂದೆ ದೇವರ ಕಾರ್ಯಗಳ ಎಲ್ಲಾ ಜವಾಬ್ದಾರಿಯನ್ನು ಗಂಡಿನವರೇ ವಹಿಸಿಕೊಂಡು ಮದುವೆ ನಡೆಸಿಕೊಡಬೇಕು.

### ಮದುವೆಯ ಕ್ರಮ

**ವೀಳ್ಯಶಾಸ್ತ್ರ :** ಹಕ್ಕಿಪಿಕ್ಕಿಯರಲ್ಲಿ ಮೊದಲಿಗೆ ಬಾಲ್ಯವಿವಾಹ ಪದ್ಧತಿ ರೂಢಿಯಲ್ಲಿತ್ತು. ಇತ್ತೀಚೆಗೆ ಬಾಲ್ಯವಿವಾಹ ಮದುವೆಗಳು ನಡೆಯುವುದಿಲ್ಲ. ಮದುವೆಗೆ ಮೊದಲು ಮಾತುಕತೆಗಳಾಗಿ ಇಂಥ ಹೆಣ್ಣಿಗೆ ಇಂಥವನೆ ಗಂಡು ಎಂದು ನಿರ್ಧಾರವಾದ ಮೇಲೆಯೇ ಗಂಡಿನ ತಂದೆ ಎದುರಿನಲ್ಲಿ ಖಾತ್ರಿ ಮಾಡಿಕೊಳ್ಳುತ್ತಾರೆ. ಮದುವೆಗೆ ಎರಡೂ ಮನೆಗಳ ಮುಂದೆ ಚಪ್ಪರ ಹಾಕುತ್ತಾರೆ. ಮಾಡಿದ ಸಿಹಿ ಅಡಿಗೆಯನ್ನು ಸೇರಿದ ಹಿರಿಯರೆಲ್ಲರಿಗೂ ಫಲಹಾರ ಹಂಚಿದಂತೆ ಹಂಚುತ್ತಾರೆ.

**ಬೊಬ್ಬಿಡುವ ಶಾಸ್ತ್ರ :** ಈ ಶಾಸ್ತ್ರದಲ್ಲಿ ಹೆಣ್ಣು ಹೆತ್ತವರು ತಮ್ಮ ಮಗಳು ಅಪ್ರಾಪ್ತಳಾದರೆ ತಮ್ಮ ಹತ್ತಿರದಲ್ಲೇ ಇಟ್ಟುಕೊಳ್ಳಬಹುದು. ಇಲ್ಲವಾದರೆ ಸಂಬಂಧಿಕರಿಗೇ ಒಪ್ಪಿಸಬಹುದು. ಒಟ್ಟಿನಲ್ಲಿ ಮೈನೆರೆಯುವವರೆಗೂ ಹೆತ್ತವರು ತಮ್ಮಲ್ಲಿ ಇಟ್ಟುಕೊಳ್ಳಬಹುದು. ನಂತರದಲ್ಲಿ ಸಂಬಂಧಿಕರನ್ನು ಹುಡುಕಿ ಮದುವೆ ಮಾಡಿ ಒಪ್ಪಿಸಬೇಕಾಗುತ್ತದೆ. ಬೊಬ್ಬಿಡುವ ಶಾಸ್ತ್ರಕ್ಕೆ ಮುಂಚೆ ಮದುಮಕ್ಕಳಿಗೆ ಹಲ್ಲಿಟ್ಟು(ಮೀಜಿ) ಹಚ್ಚುವುದು ಸಂಪ್ರದಾಯ.

**ಬೆಲ್ಲದನ್ನದ ಶಾಸ್ತ್ರ :** ಯಾವ ಪಂಗಡದಲ್ಲೂ ಇರದ ವಿಶೇಷ ರೀತಿ ರಿವಾಜು ಈ ಪಾರ್ಧಿ ಬುಡಕಟ್ಟು ವಿವಾಹ ಶಾಸ್ತ್ರದಲ್ಲಿದೆ. ಮದುವೆಯಲ್ಲಿ ಟೀಕ ತಿಲಕಧಾರಣೆ ಕಾರ್ಯವನ್ನು ಗಂಡಿನ ಪರಿವಾರದ ಹಿರಿಯ ನಡೆಸುತ್ತಾನೆ. ಇದು ಆಯಾ ಗಂಡಿನ ಮನೆಯ ತ್ರಾಂಗಡೊ ದೆದುರೇ ಮಾಡಬೇಕಾಗುತ್ತದೆ. ಯಾರ್‍ಯಾರ ತ್ರಾಂಗಡೊದೆದುರೋ, ಹೆಣ್ಣಿನ ಮನೆಯ ತ್ರಾಂಗಡೊದೆದುರೋ ಮಾಡುವಂತಿಲ್ಲ. ಬೆಲ್ಲದನ್ನದಲ್ಲಿ ಎರಡು ವಿಧಗಳು.

೧. ಮವಾಳ್ ೨. ದಾಪು

**ಮವಾಳ್ :** ಬೊಬ್ಬಿಡುವ ಶಾಸ್ತ್ರಕ್ಕೆ ಮೊದಲು ಗಂಡಿನ ಮನೆಯ ತ್ರಾಂಗಡೊದೆದುರು ಮೂರು ಕಲ್ಲನ್ನಿಟ್ಟು, ಒಲೆ ರಚಿಸಿ ಹಾಕಿದ ಬೆಂಕಿಯ ಮೇಲೆ ಬೆಲ್ಲದನ್ನ ಬೇಯಿಸುತ್ತಾರೆ.

ಅದು ಗಂಡು ಮತ್ತು ಹೆಣ್ಣು ಇಬ್ಬರ ಮನೆಯಲ್ಲೂ ಬೇಯಿಸುವುದುಂಟು. ಗಂಡಿನ ಮನೆಯ ಬೆಲ್ಲದನ್ನಕ್ಕೆ 'ಮವಾಳ್' ಎನ್ನುತ್ತಾರೆ. ಬೊಬಿಡುವ ಶಾಸ್ತ್ರಕ್ಕೆ ಮೊದಲು ಹರಿವಾಣದಲ್ಲಿ ಬೆಲ್ಲದನ್ನ ತೆಗೆದು ತ್ರಾಂಗಡೂದೆದುರು ಹರಡುತ್ತಾರೆ. ಇದಕ್ಕೆ 'ಥಾಳ್‌ಭರಾನು' ಅನ್ನುತ್ತಾರೆ. ನಂತರ ಬೊಟ್ಟಿಡುತ್ತಾರೆ. ದೊಡ್ಡ ಉಂಡೆಗಳನ್ನು ಕಟ್ಟಿ ಮಧ್ಯದಲ್ಲಿ ಗುಳಿ ಮಾಡಿ, ಮೊದಲು ಅಲ್ಲಿದ್ದ ಹಿರಿಯರಿಗೆಲ್ಲ ಒಳ್ಳೆಣ್ಣೆ ಹಾಕಿ ಕೊಡುತ್ತಾರೆ. ಇತ್ತೀಚಿನ ದಿನಗಳಲ್ಲಿ ತುಪ್ಪ ಹಾಕಿ ಕೊಡುತ್ತಾರೆ. ಅಂದಿನ ದಿನಗಳಲ್ಲಿ ಅವರ ಆರ್ಥಿಕ ಪರಿಸ್ಥಿತಿ ಸರಿಯಿರದ ಕಾರಣವಿರಬಹುದು. ಹೆಂಡ ಕುಡಿಯುವುದು ಇದ್ದೇ ಇರುತ್ತಿದ್ದರಿಂದ ಒಂದು ಉಂಡೆ ಬೆಲ್ಲದನ್ನಕ್ಕೆ ತುಪ್ಪ ಸುರಿದು ಕೊಡುವ ಬದಲು ಅವರಿಗೆ ಕುಡಿಸುವುದು ಅಥವಾ ಕುಡಿಯುವುದಕ್ಕೆ ಹಣವನ್ನು ಕೊಡುತ್ತಿದ್ದರು. ಗಂಡು ಹೆಣ್ಣು ಸರಿಸಮಾನಾಗಿ ಕುಡಿದು ಹಾಡು ಹೇಳಿ ಕುಣಿಯುತ್ತಿದ್ದರು. ಮಕ್ಕಳಿಂದ ವಯಸ್ಸಾದವರೂ ಚಪ್ಪರದೆದುರು ತಮ್ಮ ನೃತ್ಯ ಪ್ರದರ್ಶಿಸಿ ಹರ್ಷಪಡುತ್ತಾರೆ.

ಮವಾಳನ್ನ ಎಲ್ಲರ ಮನೆಗೂ ಒಂದೊಂದುಂಡೆಯಂತೆ ತಲುಪಿಸಬೇಕಾಗುತ್ತದೆ. ಇಲ್ಲದಿದ್ದರೆ ಆ ಮನೆಯ ಹಿರಿಯರಿಂದ ಛೀಮಾರಿ ಹಾಕಿಕೊಳ್ಳಬೇಕಾಗುತ್ತದೆ. ಅವರು ಎಷ್ಟೇ ಕುಡಿಸಿದರೂ ಈ ಮಾತು ಇದ್ದೇ ಇರುತ್ತದೆ. ಆದ್ದರಿಂದ ಮದುಮಕ್ಕಳು ಹಾಗೂ ಹೆತ್ತವರು ತಮ್ಮ ಮೇಲೆ ಈ ವ್ಯಂಗ್ಯ ಮಾತು ಬಾರದಂತೆ ಎಚ್ಚರ ವಹಿಸಬೇಕಾದರೆ ಪ್ರತಿ ಬಿಡಾರ ಮನೆಗಳಿಗೂ ಮವಾಳ್ ತಲುಪಿಸುವ ವ್ಯವಸ್ಥೆ ಮಾಡುತ್ತಾರೆ. ಇಲ್ಲದಿದ್ರೆ ಇದೇ ಕಾರಣಕ್ಕಾಗಿ ಬಿರುಕುಂಟಾಗಿ ಮದುವೆ ಮುರಿದು ಬಿದ್ದು, ಪಂಚಾಯ್ತಿಯಿಂದ ಸರಿಪಡಿಸುವವರೆಗೂ ಮುಂದು ವರೆವ ಸಂಭವವಿರುತ್ತದೆ.

ದಾಫು : ಇದು ಹೆಣ್ಣಿನ ಮನೆಯ ಬೆಲ್ಲದನ್ನ, ಗಂಡಿನ ಮನೆಯ ತ್ರಾಂಗಡೊದೆದುರು ಬೊಟ್ಟಿಡುವ ಶಾಸ್ತ್ರ ನಡೆಯುತ್ತಿದ್ದಂತೆ ದಾಫುವನ್ನು ಹೆಣ್ಣಿನ ಮನೆಯ ತ್ರಾಂಗಡೊದೆದುರು ಬೇಯಿಸುತ್ತಾರೆ. ಶಾಸ್ತ್ರ ಮುಗಿದ ಮೇಲೆ ದೊಡ್ಡ ದೊಡ್ಡ ಉಂಡೆಗಳನ್ನು ಕಟ್ಟಿ, ಒಳ್ಳೆಣ್ಣೆಯೋ, ಡಾಲ್ಡವೋ, ತುಪ್ಪವನ್ನೋ ಹಾಕಿ ಕೊಡುತ್ತಾರೆ. ಇದು ಅವರ ಆರ್ಥಿಕ ಪರಿಸ್ಥಿತಿಯ ಮೇಲೆ ಆಧಾರವಾಗುತ್ತದೆ. ಇಲ್ಲೂ ಕೂಡ ಈ ದಾಫುವನ್ನು ಪ್ರತಿ ಬಿಡಾರಗಳಿಗೂ ತಲುಪಿಸ ಬೇಕಾಗುತ್ತದೆ.

ನಿಶ್ಚಯದಿಂದ ಹಿಡಿದು ಮದುವೆ ಶಾಸ್ತ್ರ ಮುಗಿಯುವವರೆಗೂ ಇವರಲ್ಲಿ ಗಂಡಿನ ಕಡೆಯವರೇ ಖರ್ಚು ನೋಡಿಕೊಳ್ಳುತ್ತಾರೆ. ಆದರೂ ಹೆಣ್ಣು ಹೆತ್ತವರಿಗೇ ಗಡಶನ್ ಪ್ರಬಲ ಸ್ಥಾನವಿರುತ್ತದೆ. ಹೆಣ್ಣು ಹೆತ್ತವರು ಏನು ಹೇಳಿದರೂ ಗಂಡಿನ ಕಡೆಯವರು ಕೇಳಬೇಕಾಗುತ್ತದೆ.

ಅಳಿಯನಾದವನು ಅತ್ತೆ ಮಾವಂದಿರಿಗೆ ಗೌರವಭಾವನೆಯಿಂದ ಕಾಣಬೇಕು. ಇಲ್ಲಿ ಗೌರವ ಭಾವನೆಯೆಂದರೆ ಹೆಂಡ ಕುಡಿಸುವುದು, ಇಲ್ಲದಿದ್ದರೆ ಕುಡಿದು ಕೊಳ್ಳುವಂತೆ ಹಣ ಕೊಡ ಬೇಕಾಗುತ್ತದೆ. ಹೋಟೆಲ್‌ಗಳಿದ್ದರೆ ಚಹ, ತಿಂಡಿ ತಿನ್ನಿಸಬೇಕಾಗುತ್ತದೆ. ಇಲ್ಲದಿದ್ದರೆ ಅಳಿಯನಾಗಿ ಒಂದರ್ಧ ಟೀ ಕುಡಿಸೋಲ ಅವನಿಗ್ಯಾಕೆ ನನ್ನ ಮಗಳನ್ನ ಕೊಡಬೇಕಾಗಿತ್ತು ಅನ್ನುವ ಮಾತಿನ ಜೊತೆಗೆ ಮಗಳನ್ನು ಕರೆದುಕೊಂಡು ಮನೆಯಲ್ಲಿ ಕೂರಿಸಿಕೊಳ್ಳುವ

ಪದ್ಧತಿಯೂ ಇದೆ. ಆಗ ಹೆಂಡತಿಯನ್ನು ಮತ್ತೆ ಕರೆತರಬೇಕಾದರೆ ಪಂಚಾಯ್ತಿ ಕೂರಿಸಿ ದಂಡ ತೆತ್ತು ಹೆತ್ತವರ ಜೊತೆ ಹಿರಿಯರಿಗೆಲ್ಲ ಕುಡಿಸಿ, ಕರೆತರಬೇಕಾಗುತ್ತದೆ. ಇದೇ ಕಾರಣಕ್ಕಾಗಿ ಕೆಲವು ಸಂದರ್ಭಗಳಲ್ಲಿ ಸಂಬಂಧಗಳು ಮುರಿದು ಬೀಳುವ ಸಂಭವವಿರುತ್ತದೆ.

ವೃಹಶಾಸ್ತ್ರ : ಗಂಡಿನ ತಂದೆ ಅಥವಾ ಕುಲದ ಹಿರಿಯ ಏಳು ಸಲ ದೇವರಿಗೆ ಎರಡೂ ಹೆಬ್ಬೆಟ್ಟುಗಳಿಂದ ಅರಿಷಿಣ ಕುಂಕುಮ ಕಲಿಸಿದ ಬೊಟ್ಟು ಇಡುತ್ತಾರೆ. ಆ ಮೇಲೆ ಎಡಗೈಯಿಂದ ಹೆಣ್ಣಿಗೂ ಮತ್ತು ಬಲಗೈಯಿಂದ ಗಂಡಿಗೂ ಹಣೆಗೆ ಏಳು ಸಲ ಬೊಟ್ಟು ಇಡುತ್ತಾರೆ. ನಂತರ 'ಟೀಕಂದಾರ್‌ನಿ' ಎಂದು ಘೋಷಿಸುತ್ತಾರೆ. ಹೀಗೆಂದರೆ 'ದೇವರಿಗೆ ಅರ್ಪಿತವಾದ ಹೆಣ್ಣು ಇವಳು ಇನ್ನೂ ಮೈಲಿಗೆ ಆಗಿಲ್ಲ' ಎಂದರ್ಥ. ಈ ಸಂದರ್ಭದಲ್ಲಿ ಕಾಂಡು (ಕಂಕಣ) ವನ್ನು ಮೂರು ದಿನಗಳವರೆಗೆ ಕಟ್ಟುತ್ತಾರೆ. ಮೂರನೆಯ ದಿವಸದ ಒಂದು ಯಾವುದಾದರೂ ತಟ್ಟೆಯ ಜೊತೆಗೆ ಒಂದು ಕೊಡ ನೀರನ್ನು ಇಟ್ಟುಕೊಂಡಿರುತ್ತಾರೆ. ಮನೆ ಮುಂದೆ ಚಪ್ಪರದ ಕೆಳಗೆ ಮಾಡುವ ಶಾಸ್ತ್ರ ಇದಾಗಿದೆ. ಒಂದು ತಟ್ಟೆಯಲ್ಲಿ ನೀರಿರುತ್ತದೆ. ಬೆಳ್ಳಿ, ಬಂಗಾರ, ತಾಮ್ರದ ಯಾವುದೇ ಬಗೆಯ ಏಳು ಉಂಗುರಗಳನ್ನು ಹಾಕಿ ಯಾರು ಎಷ್ಟು ಮೀನುಗಳನ್ನು ಹಿಡಿಯುತ್ತೀರಿ ನೋಡೋಣವೆಂದು ಸಾರಥಿಗಳು 'ಮೀನಿನ ಆಟ'ವನ್ನು ಆಡಿಸುತ್ತಾರೆ. ಕಂಕಣಕ್ಕೆ ಹಾಕಿದ್ದ ಏಳು ಗಂಟುಗಳನ್ನು ಗಂಡು ಹೆಣ್ಣಿನದನ್ನು, ಹೆಣ್ಣು ಗಂಡಿನದನ್ನು ಬಿಚ್ಚುತ್ತಾ ಈ ಆಟವನ್ನು ಆಡುತ್ತಾರೆ. ಇದರೊಂದಿಗೆ ಮದುವೆಯೆಂಬ ಕಾರ್ಯ ಮುಗಿದಂತಾಗುತ್ತದೆ. ಗಂಡು ಹೆಣ್ಣುಗಳು (ಗಂಡ-ಹೆಂಡತಿ) ಹಿರಿಯರ ಕಾಲಿಗೆ ಬೀಳುತ್ತಾರೆ. ಹಕ್ಕಿಪಿಕ್ಕಿಯಲ್ಲಿ ಗಂಡ ಹೆಂಡತಿ ಯರ ಹೆಸರು ಕೇಳುವ ಸಂಪ್ರದಾಯ ಇಲ್ಲ, ಒಂದು ವೇಳೆ ಯಾರಾದರೂ ಹೆಸರನ್ನು ಕೇಳಿದರೆ ಹಿರಿಯರ ಕಾಲಿಗೆ ಬೀಳದೆ ಯಾರು ತಮ್ಮ ಗಂಡ ಅಥವಾ ಹೆಂಡತಿಯ ಹೆಸರನ್ನು ಹೇಳುವದಿಲ್ಲ. ಹಕ್ಕಿಪಿಕ್ಕಿಯರಲ್ಲಿ ಇದೇ ಕೊನೆಯ ಬಾರಿ ಎಂಬಂತೆ ಹೆಸರನ್ನು ಕೇಳುತ್ತಾರೆ. ನಂತರ ಹೆಣ್ಣು ಯಾವಾಗಲೂ ಗಂಡಿನ ಹೆಸರನ್ನು ಹೇಳುವುದಿಲ್ಲ.

ಇವುಗಳ ಜೊತೆಗೆ ಇನ್ನೂ ಕೆಲವು ವಿಶೇಷತೆಗಳೆಂದರೆ, ಲಗ್ನಕ್ಕೆಂದು ಎರಡು ಜೋಡಿ ಕರಿಮಣಿಸರ ಕಟ್ಟುತ್ತಾರೆ. ಆದರೆ ಬದಲಾದ ಇಂದಿನ ದಿನಗಳಲ್ಲಿ ಬಂಗಾರದಿಂದ ಮಾಡಿದ ತಾಳಿಯನ್ನು ಕೂಡಾ ಕಟ್ಟುತ್ತಿದ್ದಾರೆ. ಗಂಡಿನ ಕಡೆಯವರೇ ತಾಳಿಯನ್ನು ತರಬೇಕಾಗುತ್ತದೆ.

ಹಿಂದೆಲ್ಲಾ ಮದುವೆ ಉಸ್ತುವಾರಿತ ಸಾರಥಿಯೇ ತಾಳಿಯನ್ನು ಕಟ್ಟುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಮದುವೆಯಾಗುವ ಗಂಡೇ ತಾಳಿಯನ್ನು ಕಟ್ಟುತ್ತಾನೆ.

ಗಂಡನಾಗುವವನು ಹೆಂಡತಿಯಾಗುವಳ ಕಾಲಿಗೆ ಕುಂಕುಮದಿಂದ ನಾಲ್ಕು ಪಟ್ಟೆಗಳನ್ನು ಬರೆಯುತ್ತಾನೆ. ಇದಕ್ಕೆ "ಮಾಂಗ್‌ಭರಾನು" ಎನ್ನುತ್ತಾರೆ. ಗಂಡಿನ ಕೈಲಿ ವಿಳೆದೆಲೆಗಳನ್ನು ಸುತ್ತಿ ಚಾಕುವಿನ ತುದಿಗೆ ನಿಂಬೆ ಹಣ್ಣನ್ನು ಚುಚ್ಚಿ, ಗಂಡಿನ ಎಡಗೈಗೆ ಕೊಟ್ಟಿರುತ್ತಾರೆ. ಅದೇ ರೀತಿ ಹೆಣ್ಣಿಗೂ ಸಹ ಕೊಟ್ಟಿರುತ್ತಾರೆ.

ಮದುವೆಯ ಹೆಣ್ಣು ಮಗಳಿಗೆ ಮತ್ತು ಗಂಡನಾಗುವ ಗಂಡಿಗೆ ಎಣ್ಣೆ ಹಚ್ಚಿ ಬೆಳಿಗ್ಗೆ ಮತ್ತು ಸಾಯಂಕಾಲ ಸ್ನಾನ ಮಾಡಿಸುತ್ತಾರೆ. ಊಟವಾದ ಮೇಲೆ ಗಂಡ ಹೆಂಡಿರಿಬ್ಬರಲ್ಲೂ

ಮಮತೆ ಇರಲೆಂದು ಗಂಡಿನ ತಾಂಬೂಲದ ಎಂಜಲನ್ನು ಹೆಣ್ಣಿಗೂ, ಹೆಣ್ಣಿನ ತಾಂಬೂಲದ ಎಂಜಲನ್ನು ಗಂಡಿಗೂ ತಿನ್ನಿಸುತ್ತಾರೆ.

ಗಂಡಿನ ಕಡೆಯವರು ಹೆಣ್ಣಿಗೆ ಕಡೇ ಪಕ್ಷ ಒಂದು ಸಾವಿರ ರೂಪಾಯಿಗಳನ್ನಾದರೂ ವಧುದಕ್ಷಿಣೆ ಎಂದು ಕೊಡಬೇಕಾಗುತ್ತದೆ. ಇದಕ್ಕೆ ಅವರು 'ಮಹರ್' ಎಂದು ಕರೆಯುತ್ತಾರೆ. ನೆಂಟರಿಷ್ಟರಿಗೆ ಬಟ್ಟೆಗಳನ್ನು ಇತ್ತೀಚಿನವರು ಕೊಡುತ್ತಾರೆ. ಹೆಣ್ಣು ಮಕ್ಕಳಿಗೆ ಬಳೆಗಳನ್ನು ತೊಡಿಸುತ್ತಾರೆ. ಬಂದ ನೆಂಟರು ಹಾಗೂ ಗೆಳೆಯರು ವಧುವರರಿಬ್ಬರಿಗೂ ತಮ್ಮ ಕೈಲಾದಷ್ಟು ಹಣವನ್ನು ಮುಯ್ಯಿಯ ರೂಪದಲ್ಲಿ ಇತ್ತೀಚಿನವರು ಕೊಡುತ್ತಾರೆ. ಮದುವೆಯಾದ ನಂತರ ಸೇಂಧಿ ಸರಾಯಿಯ ಕುಡಿತ ಅಥವಾ ಮಾಂಸದ ಭರ್ಜರಿ ಊಟವನ್ನು ತಯಾರು ಮಾಡ್ತಾರೆ. ಈಗ ಮಹರ್ ಬೆಲೆ ಐದು ಸಾವಿರದವರೆಗೂ ಇದೆ.

ಇದರ ಮರುದಿನವೇ ಗಂಡು ಮತ್ತು ಹೆಣ್ಣಿನ ಪ್ರಸ್ಥ (ಸೋಬಾನ) ಮಾಡಿಕೊಡುತ್ತಾರೆ. ಒಂದು ವೇಳೆ ಆಗ ಹೆಣ್ಣು ಒಪ್ಪದಿದ್ದಾಗ ಒಂದೆರಡು ದಿನ ಅಥವಾ ಎರಡ್ಮೂರು ತಿಂಗಳುಗಳ ಕಾಲ ಹೆಂಡತಿಗಾಗಿ ಗಂಡನಾದವನು ಅವರ ತಂದೆ ತಾಯಿಗಳೊಂದಿಗೆ ಊರೂರು ಸುತ್ತುತ್ತಾನೆ. ಹೆಣ್ಣು ತನ್ನ ಸ್ವ-ಇಚ್ಛೆಯಿಂದ ಗಂಡಿನ ಜೊತೆ ಸೇರಿಕೊಳ್ಳುವವರೆಗೂ ಈ ಪದ್ಧತಿಯು ಮುಂದುವರೆಯುತ್ತದೆ. ಅಲ್ಲದೆ ತಾಯಿಯು ತನ್ನ ಮಗಳಿಗೆ ಸಂಭೋಗ ಹೇಳಿಕೊಟ್ಟು ಸಾಕಷ್ಟು ಧೈರ್ಯವನ್ನು ತುಂಬುತ್ತಾಳೆ. ಹೆಣ್ಣು ತೀರಾ ಚಿಕ್ಕ ವಯಸ್ಸಿನವಳಾಗಿದ್ದಲ್ಲಿ ಮಾತ್ರ ಈ ರೀತಿಯ ಸಮಸ್ಯೆಗಳು ಉದ್ಭವವಾಗುತ್ತವೆ. ಬೇರೆ ಜಾತಿಯವರಿಗೆ ಹೋಲಿಸಿದಾಗ, ಹಕ್ಕಿಪಿಕ್ಕಿಯರಲ್ಲಿ ಕಂಡು ಬರುವ ವಿಶೇಷತೆಯೇನೆಂದರೆ, ಇವರಲ್ಲಿ ಅಳಿಯನೆನಿಸಿಕೊಂಡವನು ತನ್ನ ಅತ್ತೇ ಮಾವಂದಿರಿಗೆ ಚೆನ್ನಾಗಿ ಕುಡಿಸಿ ತಿನ್ನಿಸಬೇಕಾಗುತ್ತದೆ. ಆಗಲೇ ಅವರು ತಮ್ಮ ಮಗಳಿಗೆ ಒಳ್ಳೇ ಬುದ್ಧಿ ಹೇಳಿಕೊಡುವರು. ಅಳಿಯನೇನಾದರೂ ಈ ರೀತಿ ಮಾಡದಿದ್ದರೆ, ಅತ್ತೆ ಮಾವಂದಿರು ತಮ್ಮ ಮಗಳಿಗೆ ಬೇರೆ ಗಂಡನ್ನು ಹುಡುಕುವ ಸಾಧ್ಯತೆಗಳೂ ಇವೆ. ಎಲ್ಲರೂ ಜವಾಬ್ದಾರಿಯುತವಾಗಿ ವರ್ತಿಸಿದಾಗ ಮಾತ್ರ ಯಾವುದೇ ರೀತಿಯಲ್ಲಿ ಸಮಸ್ಯೆಗಳು ಉದ್ಭವವಾಗದೆ ಇರುತ್ತವೆ. ಇಲ್ಲದಿದ್ದರೆ ಅಷ್ಟೇ, ಗಂಡನೊಂದಿಗೆ ಸರಿಯಾಗಿ ಕೂಡಿಕೊಳ್ಳದೆ ಹೆಣ್ಣಿಗೆ, ಗಂಡನ ಮನೆಗೆ ಬೇಗ ಹೋಗದೆ ಬಹಳ ಕಾಲ ತಂದೆ ತಾಯಿಗಳ ಜೊತೆಯೇ ಇರುವ ಹೆಣ್ಣಿಗೆ ಅಥವಾ ಮೂರು ದಿವಸಕ್ಕೊಮ್ಮೆ ಗಂಡನನ್ನು ಬಿಟ್ಟು ತಂದೆ ತಾಯಿಗಳ ಬಳಿಗೆ ಓಡಿಬರುವ ಹೆಂಡತಿಗೆ ಕುಲದ ಹಿರಿಯರ ಸಮ್ಮುಖದಲ್ಲಿ ಗಂಡನಾದವನೇ ತನ್ನ ಹೆಂಡತಿಯ ಬಟ್ಟೆ ಬಿಚ್ಚಿ ಅಥವಾ ಬಟ್ಟೆಯಿದ್ದಾಗಲೇ ಓತಿಕ್ಯಾತವನ್ನು ಹೆಣ್ಣಿನ ಮೈ ಮೇಲೆ ಬಿಡುತ್ತಿದ್ದನು. ಇದಕ್ಕೆ ಹಕ್ಕಿಪಿಕ್ಕಿಯಲ್ಲಿರುವ ನಂಬಿಕೆ ಏನೆಂದರೆ, ಇದರಿಂದ ಹೆಣ್ಣಿಗೆ (ಹೆಂಡತಿಯಾದವಳಿಗೆ) ಬುದ್ಧಿಬಂದು ಗಂಡನ ಮನೆಯಲ್ಲಿ ನೆಟ್ಟಗೆ ಬಾಳುವೆ ಮಾಡುತ್ತಾಳಂತೆ! ಆದರೆ ಬದಲಾದ ಈ ದಿನಗಳಲ್ಲಿ ಓತಿಕ್ಯಾತನಾಗಲಿ ಅಥವಾ ಇನ್ನಾವುದೇ ಪ್ರಾಣಿಯನ್ನು ಮೈಮೇಲೆ ಬಿಡದೇ, ಪಂಚರ ಸಮ್ಮುಖದಲ್ಲಿ ನ್ಯಾಯ ಬಗೆಹರಿಸುತ್ತಿದ್ದಾರೆ. ಜೊತೆಗೆ ಇತ್ತೀಚೆಗೆ ಹುಡುಗಿಯರು ಪ್ರಾಪ್ತ ವಯಸ್ಕರಾದ ಮೇಲೆಯೇ ಮದುವೆ ಮಾಡುತ್ತಿರುವದರಿಂದ ಈ ತರಹದ ಸಮಸ್ಯೆಗಳು ಉದ್ಭವವಾಗುತ್ತಿಲ್ಲ.

ಎದುರು ಹೆಣ್ಣು ಅಥವಾ ಎದುರು ಗಂಡು (Mutual Exchange) ತರುವ ಪದ್ಧತಿ ಇವರಲ್ಲಿದೆ ಇದಕ್ಕೆ 'ಅಟಾಖ್ವಾಟಿ' ಎನ್ನುತ್ತಾರೆ.

ಪಾಟ್ ಅಥವಾ ಸೀರುಡಿಕೆ : ಹಿಂದಿನ ಕಾಲದಲ್ಲಿ ಒಂದು ಹೆಣ್ಣು ಅಥವಾ ಒಂದು ಗಂಡು ಎಷ್ಟು ಬೇಕಾದರೂ ಮದುವೆಯಾಗಬಹುದಿತ್ತು. ಆದರೆ ಇತ್ತೀಚೆಗೆ ಈ ಕೆಟ್ಟ ಪದ್ಧತಿಯು ಕಡಿಮೆಯಾಗುತ್ತಾ ಬರುತ್ತಿದೆ. ಮದುವೆಯ ಶಾಸ್ತ್ರ ಮಾಡಿಸುವುದು ಆ ಮದುವೆ ಆ ಹೆಣ್ಣಿಗೆ ಮೊದಲ ಮದುವೆಯಾಗಿದ್ದಾಗ ಮಾತ್ರ. ಅದು ಲೆಕ್ಕಕ್ಕೆ ಬರುತ್ತದೆ. ಗಂಡಿಗೆ ಈ ತರಹದ ನಿರ್ಬಂಧವೇನೂ ಇಲ್ಲ. ಹೆಣ್ಣಿಗೆ ಎರಡು, ಮೂರು, ನಾಲ್ಕು ಐದನೆಯ ಸಂಬಂಧ ಗಳನ್ನು ಮದುವೆ ಮಾಡುವುದಿಲ್ಲ. ಆದರೆ ಆದಕ್ಕೆ 'ಸೀರುಡಿಕೆ', 'ಕೂಡಾವಳಿ' ಎಂಬ ಹೆಸರಿ ನಿಂದ ಕರೆಯುತ್ತಾರೆ.

ಹಕ್ಕಿಪಿಕ್ಕಿಯರಲ್ಲಿ ಒಬ್ಬ ವ್ಯಕ್ತಿಗೆ ಮದುವೆಯಾಗಿದೆ ಎಂದು ನಿರ್ಧರಿಸಲು, ಮದುವೆಯ ಸಂದರ್ಭದಲ್ಲಿ 'ಮೀಶಿ'(ಹಲ್ಲಿಟ್ಟು)ಯನ್ನು ಹಲ್ಲಿಗೆ ತಿಕ್ಕುತ್ತಾರೆ. ಈ ಹಿಟ್ಟುಹಲ್ಲುಗಳ ಸಂದಿಗೆಲ್ಲಾ ಸೇರಿಕೊಂಡಿರುತ್ತದೆ. ಒಂದು ಹೆಣ್ಣಿಗೆ ಮೀಶಿ ಹಚ್ಚಿದಾರೆಯೆ ಇಲ್ಲವೋ ಎಂದು ನೋಡಿ ಖಾತ್ರಿ ಮಾಡಿಕೊಂಡರೆ ಅವಳನ್ನು ಪುನಃ ಮದುವೆ ಮಾಡಿಕೊಳ್ಳುವದಿಲ್ಲ. ಬದಲಿಗೆ ಸೀರುಡಿಕೆ ಎಂಬ ಕಾರ್ಯವನ್ನು ಮಾಡಿಕೊಳ್ಳುತ್ತಾರೆ. ಇದು ಅವರವರ ಸಂಗಾತಿಗಳನ್ನು ಪಡೆದು ಕೊಳ್ಳುವ ಎರಡನೇ ದಾರಿಯಾಗಿದೆ. ಇವರಲ್ಲಿ ಒಬ್ಬೊರನ್ನೊಬ್ಬರು ಒಪ್ಪಿಕೊಳ್ಳಲು ವಿಧಿ ವಿಧಾನಗಳು ತುಂಬಾ ಸರಳವಾಗಿವೆ. ಒಬ್ಬ ವ್ಯಕ್ತಿ ವಿಧವೆಯಾಗಿರುವ ತನ್ನ ಅಣ್ಣನ ಹೆಂಡತಿ ಯನ್ನು ಸೀರುಡಿಕೆ ಮಾಡಿಕೊಳ್ಳಬಹುದಾಗಿದೆ. ಅಣ್ಣ ವಿಧವೆಯಾದ ತಮ್ಮನ ಹೆಂಡತಿಯನ್ನು ಸೀರುಡಿಕೆ ಮಾಡಿಕೊಳ್ಳಬಹುದಾಗಿದೆ.

ವಿಧವೆ ಅಣ್ಣನ ಹೆಂಡತಿಗೆ ಮಕ್ಕಳಿದ್ದರೆ ಆಕೆ ಒಂಟಿಯಾಗಿಯೇ ಉಳಿಯಲು ಇಷ್ಟ ಪಡುತ್ತಾಳೆ. ಪಾರ್ಧಿಯರಲ್ಲಿ ವಿಧವೆಯಾದ ಹೆಣ್ಣಿನ ತೀರ್ಮಾನಕ್ಕೆ ತುಂಬಾ ಗೌರವವಿದೆ. ಈ ಸಂದರ್ಭದಲ್ಲಿ ಮೈದುನನಿಗೆ ಮದುವೆಯಾಗುವ ಬಿಡುವ ನಿರ್ಣಯ ತಿಳಿಸಲು ಅವಕಾಶ ನೀಡಿರುತ್ತಾರೆ. ವಿಧವೆ ಹೆಣ್ಣು ಇಷ್ಟಪಟ್ಟು ಗಂಡು ಒಪ್ಪದಿದ್ದಲ್ಲಿ ಕುಲಸ್ಥರೆಲ್ಲಾ ಸೇರಿ ಅವನ ಮನ ಒಲಿಸಿ ಅವನಿಗೆ ಒತ್ತಡ ತಂದು ಅವನನ್ನು ಈ ಕೆಲಸಕ್ಕೆ ಒಪ್ಪಿಸುತ್ತಾರೆ.

ಈ ಸೀರುಡಿಕೆ ಸಮಾರಂಭ ಅತಿ ವಿಜೃಂಭಣೆಯಿಂದ ಕೂಡಿರದೇ ತುಂಬಾ ಸರಳವಾಗಿ ರುತ್ತದೆ. ವಿಧವೆ ಹೆಣ್ಣಿಗೆ ಮತ್ತೊಮ್ಮೆ 'ಮೀಶಿ' (ಹಲ್ಲಿಟ್ಟು) ಹಚ್ಚುತ್ತಾರೆ. ಅವಳು ಎಲೆ ಅಡಿಕೆಯನ್ನು ವಿನಿಮಯ ಮಾಡಿಕೊಳ್ಳುತ್ತಾಳೆ. ಈ ಎಲ್ಲಾ ಕಾರ್ಯಕ್ರಮಗಳು ಗುಂಪಿನ ಹಿರಿಯ ಸದಸ್ಯ ಅಥವಾ ಯಜಮಾನ ಮತ್ತು ಇನ್ನಿತರ ಹಿರಿಯರ ಮುಂದೆಯೇ ನಡೆಯುತ್ತದೆ. ಇಂಥಹ ಸಂದರ್ಭದಲ್ಲಿ ಒಂದು ಚಿಕ್ಕ ಔತಣವನ್ನೇರ್ಪಡಿಸುತ್ತಾರೆ. ಈ ಕಾರ್ಯಕ್ರಮದಲ್ಲಿ ಸ್ತ್ರೀಯರು ಪಾಲ್ಗೊಳ್ಳುತ್ತಾರೆಯೋ ಹೊರತು ಪುರುಷರಲ್ಲ. ಏಕೆಂದರೆ ಗಂಡಸರು ಈ ಸೀರುಡಿಕೆಯ ಕಾರ್ಯಕ್ರಮವನ್ನು ಕೀಳುಮಟ್ಟದ್ದು ಎಂದು ಭಾವಿಸುತ್ತಾರೆ. ಈ ಮದುವೆಯಿಂದ ಪಾರ್ಧಿಯ ಹೆಣ್ಣು ಇತರ ಹೆಣ್ಣುಗಳಂತೆಯೇ ಸಮಾನ ಸ್ಥಾನಮಾನವನ್ನು ಹೊಂದಿರುತ್ತಾರೆ. ಈ

ಸಂದರ್ಭದಲ್ಲಿ ಹೆಣ್ಣಿಗೆ ಗಂಡನು ಕೇವಲ ೧೫ ರೂಪಾಯಿಗಳನ್ನು ಕೊಡುತ್ತಾನೆ. ವಿಧವೆಗೆ ಮಕ್ಕಳಿದ್ದರೆ, ಅಂಥಹ ಮಕ್ಕಳು ಅಜ್ಜನ ಮನೆ ಅಥವಾ ಚಿಕ್ಕಪ್ಪನ ಮನೆಗಳನ್ನು ಸೇರಿ ಕೊಳ್ಳುತ್ತಾರಾಗಲಿ, ತನ್ನ ತಾಯಿಯ ಹಿಂದೆ ಹೋಗುವದಿಲ್ಲ. ಆದರೆ ಆ ಸ್ತ್ರೀಯು ನವವಧುವಿ ನಂತೆಯೇ ಗಂಡನ ಮನೆಗೆ ಹೋಗುತ್ತಾಳೆ. ಗಂಡ ಇದ್ದ ಮಹಿಳೆ ಕೂಡಾ ಸೀರುಡಿಕೆ ಮಾಡಿಕೊಳ್ಳುವ ಪದ್ಧತಿಯು ಇವರಲ್ಲಿದೆ. ಅಷ್ಟೇ ಏಕೆ ಒಬ್ಬ ವಿವಾಹಿತ ಹೆಣ್ಣು ತನಗಿಂತ ಕಿರಿಯ ಅಥವಾ ಹಿರಿಯ ವಯಸ್ಸಿನ ವಿಧುರನ ಜೊತೆ ಸಹ ಸೀರುಡಿಕೆ ಮಾಡಿಕೊಳ್ಳಬಹುದಾಗಿದೆ. ಈ ಸೀರುಡಿಕೆ ಪದ್ಧತಿಯು ಕೇವಲ ಹೆಣ್ಣಿಗೆ ಸಂಬಂಧಿಸಿದ್ದೆ ಹೊರತು ಪುರುಷರಿಗಲ್ಲ.

ಪಟ್‌ಕರ್‌ವಾನಾ : ಪಾರ್ಧಿಯರು ಮಾಡುವ ಅನೇಕ ಮದುವೆ ವಿಧಗಳಲ್ಲಿ ಇದೂ ಒಂದು. 'ಪಟ್‌ಕರ್‌ವಾನಾ' ಎಂದರೆ 'ಓಡಿಹೋಗಿ ಮದುವೆಯಾಗುವುದು' ಎಂದರ್ಥ. ಇಲ್ಲಿ ವಯಸ್ಸಿಗೆ ಬಂದ ಗಂಡು ಮತ್ತು ಹೆಣ್ಣು ಇಬ್ಬರೂ ಯಾರ ಅನುಮತಿಯೂ ಇಲ್ಲದೆ ಓಡಿ ಹೋಗಿ ವಿವಾಹವಾಗುತ್ತಾರೆ.

ಇಂಥಹ ಮದುವೆಯನ್ನು ಹಿರಿಯರು ಒಪ್ಪದೇ, ಕುಲದ ಪಂಚ ಹಿರಿಯರನ್ನು ಕೂಡಿಸಿ, ನ್ಯಾಯ ನಿರ್ಣಯ ಮಾಡಿ ಎರಡೂನೂರರಿಂದ ಮೂರುನೂರು ರೂಪಾಯಿಗಳವರೆಗೆ ದಂಡ ವನ್ನು ವಿಧಿಸುತ್ತಾರೆ. ಇಂಥಹ ಜೋಡಿಯನ್ನು ಕೀಳಾಗಿ ಕಾಣುವದರ ಜೊತೆಗೆ ಸ್ವಲ್ಪ ದಿನ ಯಾರೊಬ್ಬರೂ ಇವರನ್ನು ತಮ್ಮ ಮನೆಗೆ ಕರೆಯುವುದಿಲ್ಲ. ಹೀಗಾಗಿ ಅವರು ತಮ್ಮದೇ ಆದ ಪ್ರತ್ಯೇಕ ಗುಡಿಸಲನ್ನು ಹಾಕಿಕೊಳ್ಳಬೇಕಾಗುತ್ತದೆ. ಇವರ ತಪ್ಪಿನ ಪ್ರಾಯಶ್ಚಿತತೆಯೆನ್ನುವ ಅರ್ಥವನ್ನು ಇವರು ನೆರವೇರಿಸುತ್ತಾರೆ.

ಓಡಿಹೋಗಿ ಹೋಗಿ ಮದುವೆಯಾದ ಹೆಣ್ಣು ಮತ್ತು ಗಂಡುಗಳನ್ನು ಸ್ವಲ್ಪ ದಿನಗಳ ಕಾಲ ತಮ್ಮ ಸಿಟ್ಟೆಲ್ಲಾ ಶಮನವಾದ ಮೇಲೆ ಅವರನ್ನು ಮಾನವೀಯತೆಯಿಂದ ಕಾಣಲು ಮತ್ತು ಮದುವೆಯ ಮೈಲಿಗೆಯನ್ನು ಕಳೆಯಲು ಒಂದು ಬಾಳೆ ಮರವನ್ನು ಹೆಣ್ಣಿನಂತೆ ಶೃಂಗರಿ ಸುತ್ತಾರೆ. ಈ ಕಾರ್ಯವನ್ನು ಹೆಣ್ಣು ಮತ್ತು ಗಂಡಿನ ತಂದೆ ತಾಯಿಗಳೆ ನೆರವೇರಿಸುವುದು ಒಂದು ಗಮನಾರ್ಹ ವಿಷಯ. ಇದಾದ ನಂತರ ಆ ಹೆಣ್ಣು ಮತ್ತು ಗಂಡು ಪುನರ್ ವಿವಾಹಕ್ಕೆ ಯೋಗ್ಯರಾಗಿರುತ್ತಾರೆ. ಈ ಪದ್ಧತಿಯು ಅವರಲ್ಲಿ ಅದೆಷ್ಟು ಕಟ್ಟುನಿಟ್ಟುಎಂದರೆ, ಈ ರೀತಿಯಲ್ಲಿ ಮದುವೆಯಾಗದ ಜೋಡಿಗಳು ಮತ್ತೇ ಇವರ ಕುಲದ ಪದ್ಧತಿಯಂತೆ ಮರು ಮದುವೆ ಯಾಗದಿದ್ದರೆ ಅಂಥವರಿಗೆ ಯಾವುದೇ ಸ್ಥಾನಮಾನವನ್ನು ಕೊಡುವದಿಲ್ಲ. ಈ ಕಾರಣಕ್ಕಾಗಿ ಎಷ್ಟೋ ಕಡೆ ತಮ್ಮ ತಂದೆ ತಾಯಿಗಳ ಮದುವೆಗೆ ಸ್ವತಃ ಅವರ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೇ ಅಕ್ಷತೆಯನ್ನು ಹಾಕಿದ ಅನೇಕ ಉದಾಹರಣೆಗಳಿವೆ. ಈ ರೀತಿ ಮಾಡುವದರಿಂದಲೇ ಅವರ ದೇವತೆ ತೃಪ್ತಿಪಟ್ಟು ಗಂಡು ಹೆಣ್ಣುಗಳ ದೋಷವನ್ನು ಕಳೆಯುತ್ತಾಳೆಂಬುದು ಅವರ ದೃಢ ನಂಬಿಕೆ. ಹೀಗೆ ಪಲಾಯನಗೈದು ಮದುವೆಯಾದ ಹೆಣ್ಣನ್ನು ಅನೇಕ ಉತ್ತಮ ಸಮಾರಂಭಗಳಿಗೆ ಸೇರಿಸಿಕೊಳ್ಳುವುದಿಲ್ಲ. ಹಾಗೂ ತಮ್ಮ ದೇವತೆಯ ಕುಂಕಮವನ್ನು ಅಂಥಹ ಹೆಣ್ಣು ಮಕ್ಕಳಿಗೆ ಕೊಡುವುದಿಲ್ಲ.

**ಕೇಳವಂತಿ ವಿವಾಹ :** ಓಡಿಹೋಗಿ ಬಂದ ಹೆಣ್ಣು ಮತ್ತು ಗಂಡುಗಳನ್ನು ಪಾಟ್ ಮಾಡುತ್ತಾರೆ. ಸ್ವಲ್ಪ ದಿನಗಳ ಕಾಲ ತಮ್ಮ ಸಿಟ್ಟೆಲ್ಲಾ ಶಮನವಾದ ಮೇಲೆ ಅವರನ್ನು ಮಾನವೀಯತೆಯಿಂದ ಕಾಣಲು ಮತ್ತು ಮದುವೆಯ ಮೈಲಿಗೆಯನ್ನು ಕಳೆಯಲು ಒಂದು ಬಾಳೆ ಮರವನ್ನು ಹೆಣ್ಣಿನಂತೆ ಶೃಂಗರಿಸುತ್ತಾರೆ. ಈ ಕಾರ್ಯವನ್ನು ಹೆಣ್ಣು ಮತ್ತು ಗಂಡಿನ ತಂದೆ ತಾಯಿಗಳೆ ನೆರವೇರಿಸುವುದು ಒಂದು ಗಮನಾರ್ಹ ವಿಷಯ. ಈ ವಿಧಾನಕ್ಕೆ "ಕೇಳವಂತಿ ವಿವಾಹ" ಎನ್ನುತ್ತಾರೆ. ಈ ಪದ್ಧತಿಯು ಅವರಲ್ಲಿ ಅದೆಷ್ಟು ಕಟ್ಟುನಿಟ್ಟುನೆಂದರೆ, ಈ ರೀತಿಯಲ್ಲಿ ಮದುವೆಯಾಗದ ಜೋಡಿಗಳು ಮತ್ತೇ ಇವರ ಕುಲದ ಪದ್ಧತಿಯಂತೆ ಮರು ಮದುವೆಯಾಗದಿದ್ದರೆ ಅಂಥವರಿಗೆ ಯಾವುದೇ ಸ್ಥಾನಮಾನವನ್ನು ಕೊಡುವದಿಲ್ಲ. ಈ ಕಾರಣಕ್ಕಾಗಿ ಎಷ್ಟೋ ಕಡೆ ತಮ್ಮ ತಂದೆ ತಾಯಿಗಳ ಮದುವೆಗೆ ಸ್ವತಃ ಅವರ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೇ ಅಕ್ಷತೆಯನ್ನು ಹಾಕಿದ ಅನೇಕ ಉದಾಹರಣೆಗಳಿವೆ. ಈ ರೀತಿ ಮಾಡುವದರಿಂದಲೇ ಅವರ ದೇವತೆ ತೃಪ್ತಿಪಟ್ಟು ಗಂಡು ಹೆಣ್ಣುಗಳ ದೋಷವನ್ನು ಕಳೆಯುತ್ತಾಳೆಂಬುದು ಅವರ ದೃಢ ನಂಬಿಕೆ. ಹೀಗೆ ಪಲಾಯನಗೈದು ಮದುವೆಯಾದ ಹೆಣ್ಣನ್ನು ಅನೇಕ ಉತ್ತಮ ಸಮಾರಂಭಗಳಿಗೆ ಸೇರಿಸಿಕೊಳ್ಳುವುದಿಲ್ಲ. ಹಾಗೂ ತಮ್ಮ ದೇವತೆಯ ಕುಂಕಮವನ್ನು ಅಂಥಹ ಹೆಣ್ಣು ಮಕ್ಕಳಿಗೆ ಕೊಡುವುದಿಲ್ಲ.

**ಇತರೇ ವಿಧದ ಮದುವೆಗಳು :** ಒಬ್ಬ ಹಕ್ಕಿಪಿಕ್ಕಿ ಗಂಡಸು ತನ್ನ ಹೆಂಡತಿಯು ತೀರಿದಾಗ ಅಥವಾ ಅವಳು ಜೀವಂತ ಇದ್ದಾಗಲೇ ಆಕೆಯ ತಂಗಿಯನ್ನು ಮದುವೆಯಾಗಬಹುದಾಗಿದೆ. ಈ ಮದುವೆಗೆ ಸ್ವಲ್ಪ ಮಟ್ಟಿನ ವಿರೋಧವಿದ್ದರೂ, ಇದು ನಿಷಿದ್ಧವಂತೆನಲ್ಲ. ಈಗಲೂ ಗಂಡು ತನ್ನ ಹೆಂಡತಿಗೆ ಹೆಚ್ಚಿನ 'ವಧುದಕ್ಷಿಣೆ' ಕೊಡಬೇಕಾಗುತ್ತದೆ. ಈ ತರಹದ ಮದುವೆಯಿಂದ ತನ್ನ ಅಕ್ಕನ ಮಕ್ಕಳನ್ನು ತಂಗಿ ಚೆನ್ನಾಗಿ ನೋಡಿಕೊಳ್ಳುತ್ತಾಳೆ ಎಂದು ಜನರು ನಂಬುತ್ತಾರೆ.

ಹಕ್ಕಿಪಿಕ್ಕಿಯರಲ್ಲಿ ಸೊದರತ್ತೆ ಮತ್ತು ಸೋದರ ಮಾವನ ಸಂಬಂಧಗಳು ಹೆಚ್ಚಾಗಿ ಕಂಡುಬರುತ್ತವೆ. ಇವರು ಅಪರಿಚಿತರೂ ಅಥವಾ ದೂರದ ಊರಿನವರಿಗಿಂತಲೂ ಹೆಚ್ಚಾಗಿ ಪರಿಚಿತರನ್ನು ಹಾಗೂ ಹತ್ತಿರದ ಬಂಧುಗಳನ್ನೇ ಹೆಚ್ಚಾಗಿ ಮದುವೆಯಾಗಲು ಇಷ್ಟಪಡುತ್ತಾರೆ. ಈ ತರಹದ ಸಂಬಂಧಗಳಲ್ಲಿ ವಧು ದಕ್ಷಿಣೆ ಇರುತ್ತದೆ.

ಭಾರತೀಯ ಹಿಂದೂ ಸಂಸ್ಕೃತಿಯಂತೆ ಬಹುತೇಕ ಹಕ್ಕಿಪಿಕ್ಕಿಯರು ಒಂದೇ ಹೆಣ್ಣಿನ ಜೊತೆಗೇ ಮತ್ತೊಂದು ಮದುವೆ ಏನಾದರೂ ಆದರೆ, ಮೊದಲಿನ ಹೆಂಡತಿ ಇವನ ಜೊತೆ ಇರಲು ಇಷ್ಟ ಪಡುವುದಿಲ್ಲ. ಬದಲಿಗೆ ಜಗಳವಾಡಿಕೊಂಡು ತಾನು ಬೇರೆಯಾಗಿ ಇದ್ದು ಬಿಡುತ್ತಾಳೆ. ಇದಕ್ಕೆ ವಿರುದ್ಧವಾಗಿ ಕೆಲವು ಗಂಡಸರು ೫-೬ ಜನ ಉಪಪತ್ನಿಯರನ್ನು ಕಟ್ಟಿಕೊಂಡು ಸುಖವಾಗಿರುವ ನಿದರ್ಶನಗಳು ಕಾಣಬಹುದಾಗಿದೆ.

ಇಂದಿನ ದಿನಗಳಲ್ಲಿ ಅರಣ್ಯ ನೀತಿಯು ತುಂಬಾ ಬಿಗಿಯಾಗಿದ್ದು, ಹಿಂದಿನಂತೆ ಬೇಟೆಯಾಡಲು ವಿಫುಲ ಅವಕಾಶಗಳು ಇಲ್ಲದಿದ್ದರೂ, ಅಧಿಕವಾಗಿ ಬೇಟೆಯಾಡುವ ಮತ್ತು ವ್ಯಾಪಾರದಲ್ಲಿ ಅಧಿಕವಾಗಿ ಹಣಗಳಿಸುವ ಗಂಡಸರು ಒಬ್ಬರಿಗಿಂತ ಹೆಚ್ಚು ಹೆಂಡಿರನ್ನು

ಹೊಂದಿರುವುದು ಕಂಡುಬಂತು. ಒಬ್ಬರಿಗಿಂತ ಹೆಚ್ಚು ಹೆಣ್ಣುಗಳನ್ನು ಮದುವೆಯಾದ ಗಂಡಸು ತನ್ನ ಮೊದಲ ಪತ್ನಿಯಂತೆ ಇತರರಿಗೂ ಸಮಾನವಾದ ಸ್ಥಾನಮಾನ ಕೊಟ್ಟು ಅವರಿಗೆಲ್ಲಾ ಪ್ರತ್ಯೇಕವಾಗಿ ಮನೆಗಳನ್ನು ಮಾಡಿ ಬಿಟ್ಟಿದ್ದಾರೆ. ಇನ್ನೂ ಕೆಲವು ಕಡೆ ಹಕ್ಕಿಪಿಕ್ಕಿ ಪುರುಷರು ಅಂತರ್‌ಜಾತಿ ಮಹಿಳೆಯರನ್ನು ಮಾಡಿಕೊಂಡು ಅವರೆಲ್ಲಾ ಒಂದೇ ಕಡೆ ಜೀವನ ಸಾಗಿಸುತ್ತಿರುವುದು ಕಂಡುಬರುತ್ತದೆ. ನಾಲ್ಕೈದು ಹೆಂಡಿರನ್ನು ಮಾಡಿಕೊಂಡ ಪುರುಷರು ನಾಲ್ಕೈದು ದಿನವೂ ಒಬ್ಬೊಬ್ಬ ಹೆಂಡತಿಯ ಮನೆಯಲ್ಲಿ ಮಲಗುತ್ತಾನೆ. ಹಿರಿಯ ಹೆಂಡತಿಗೆ ಇನ್ನುಳಿದ (ಚಿಕ್ಕ ಎರಡು, ಮತ್ತು ಮೂರನೆಯ) ಹೆಂಡಿರು ಸಹಾಯಕಿಯಾಗಿ ತಮ್ಮ ಅತ್ತೇ ಮಾವಂದಿರಿಗೂ ಸರಿಯಾಗಿ ನೋಡಿಕೊಳ್ಳುತ್ತಾರೆ. ಇತ್ತೀಚಿನ ದಿನಗಳಲ್ಲಿ ಅಕ್ಕನ ಮಗಳನ್ನು ಮದುವೆಯಾಗುತ್ತಾರೆ.

**ಅನೈತಿಕ ಸಂಬಂಧ :** ಹಕ್ಕಿಪಿಕ್ಕಿಯರಲ್ಲಿ ಅನೈತಿಕ ಸಂಬಂಧಗಳಿಗೆ ಅವಕಾಶವಿರುವುದಿಲ್ಲ. ಒಂದು ವೇಳೆ ಹಾಗೇನಾದರೂ ಯಾರಾದರೂ ಈ ರೀತಿಯ ಚಟುವಟಿಕೆಯಲ್ಲಿ ತೊಡಗಿದ್ದರೆ ಆ ಕೂಡಲೇ ತಮ್ಮ ತಪ್ಪನ್ನು ತಮ್ಮ ಕುಲದೇವತೆಯ ಮುಂದೆ ಒಪ್ಪಿಕೊಳ್ಳಬೇಕು. ಇಲ್ಲದಿದ್ದರೆ ಮನೆಯಲ್ಲಿ ಇಲ್ಲದ ತೊಂದರೆಯಾಗುವುದರ ಜೊತೆಗೆ ಇನ್ನೂ ಹೆಚ್ಚಿನ ಅನಾಹುತಗಳು ಆಗುತ್ತವೆ ಎಂದು ಇವರು ನಂಬುತ್ತಾರೆ. ಮದುವೆಗೆ ಮುನ್ನ ಹುಡುಗ ಮತ್ತು ಹುಡುಗಿ ನೈತಿಕವಾಗಿ ಸರಿಯಾಗಿರಬೇಕು. ಕೆಟ್ಟ ನಡವಳಿಕೆಗಳನ್ನು ಕುಲಸ್ಥರು ವಿರೋಧಿಸುತ್ತಾರೆ. ಹಾಗೂ ನೂರರಿಂದ ಇನ್ನೂರು ರೂಪಾಯಿಗಳವರೆಗೆ ದಂಡವನ್ನು ಹಾಕುತ್ತಾರೆ. ಇವರಲ್ಲಿ ಯಾರೂ ಒಂದೇ ಗೋತ್ರದಲ್ಲಿ ಮದುವೆ ಆಗುವ ಹಾಗಿಲ್ಲ. ಒಂದು ವೇಳೆ ಹಾಗಾದರೆ ಅಂಥವರನ್ನು ದಂಡ ಹಾಕುತ್ತಾರೆ. ಹುಡುಗಿಯರನ್ನು ಯಾರಾದರೂ ಬಸುರು ಮಾಡಿಬಿಟ್ಟರೆ (ಬಸುರು ಮಾಡಿರುವಂತ ವ್ಯಕ್ತಿ ತಮ್ಮ ಜಾತಿಯವನಾಗಿರಬಹುದು ಅಥವಾ ಬೇರೆ ಜಾತಿಯವನಾಗಿರಬಹುದು) ಕುಲಸ್ಥರೆಲ್ಲಾ ಸೇರಿ ಅವನಿಗೆ ಮದುವೆ ಮಾಡಿಕೊಳ್ಳುವಂತೆ ಹೇಳುತ್ತಾರೆ. ಬೇರೆ ಜಾತಿಯವರನ್ನು ಮದುವೆಯಾಗಲು ಹಕ್ಕಿಪಿಕ್ಕಿಗರಲ್ಲಿ ಸಮ್ಮತಿಲ್ಲ. ಒಂದುವೇಳೆ ಆದ ಪಕ್ಷದಲ್ಲಿ ಜಾತಿಯಿಂದ ದೂರವಿಡುತ್ತಾರೆ.

'ಪಾಟ್' ಎನ್ನುವ ಒಂದು ಬಗೆಯ ಔಪಚಾರಿಕ ಕಾರ್ಯಕ್ರಮ ಮಾಡಿ ಇಬ್ಬರಿಗೂ ಮದುವೆ ಮಾಡಿಸುತ್ತಾರೆ. ಇವರಿಂದ ದಂಡದ ರೂಪದಲ್ಲಿ ಪಡೆದ ಹಣವನ್ನು ಎಲ್ಲರೂ ಸೇರಿ ಸೇಂದಿ ಸರಾಯಿ ಕುಡಿದು ಮುಗಿಸುತ್ತಾರೆ.

**ವಿಚ್ಛೇದನೆ :** ವಿವಾಹ ವಿಚ್ಛೇಧನೆ ಎಂಬುದು ಇಂದಿನ ಬಹುತೇಕ ಎಲ್ಲಾ ಜಾತಿಗಳಲ್ಲಿ ಸಾಮಾನ್ಯವಾಗಿದೆ. ಆದರೆ ಹಕ್ಕಿಪಿಕ್ಕಿಯರಲ್ಲಿ ವಿವಾಹ ವಿಚ್ಛೇಧನೆ ಎಂಬುದು ಪಾಶ್ಚಾತ್ಯರಷ್ಟೇ ಸಾಮಾನ್ಯವಾಗಿದೆ ಮತ್ತು ಅವರಷ್ಟೇ ಸರಳವಾಗಿದೆ. ಈ ಬುಡಕಟ್ಟು ತೀರಾ ಮುಂಗೋಪಿಯಾಗಿರುವುದರಿಂದ ತಮ್ಮ ಕೋಪದಷ್ಟೇ ಬೇಗ ತಮ್ಮ ಹೆಂಡಿರನ್ನು ಹೊರಗೆ ಹಾಕುತ್ತಾರೆ. ಹೆಂಗಸರೂ ಸಹ ಅಷ್ಟೇ ಕೋಪಿಷ್ಟರಾಗಿರುವುದರಿಂದ ಅವರೂ ಸಹ ಅಷ್ಟೇ ದಿಢೀರನೇ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾರೆ. ಸಣ್ಣ ಪುಟ್ಟ ಜಗಳಗಳಿಂದ ಹಿಡಿದು ಎಷ್ಟೋ ಸಲ ಕಾರಣವೇ ಇಲ್ಲದ ಕ್ಷುಲ್ಲಕ ವಿಷಯಗಳಿಗೂ ವಿಚ್ಛೇಧನೆಗಳಿಗೆ ಅನೇಕ ಕಾರಣಗಳುಂಟು.

ಹೆಣ್ಣು ಗರ್ಭಧರಿಸದೇ ಬಂಜೆಯಾಗಿರುವದರಿಂದ, ಗಂಡನಾದವನು ತನ್ನ ಪುರುಷತ್ವ ಕಳೆದು ಕೊಂಡು ಷಂಡನಾದರೆ, ಗಂಡ ಹೆಂಡಿರಿಬ್ಬರಲ್ಲಿ ಯಾರಾದರೂ ಒಬ್ಬರ ಚಾರಿತ್ರ್ಯ ಒಳ್ಳೆಯದಿಲ್ಲದಿದ್ದರೆ ಅಥವಾ ಇಬ್ಬರಲ್ಲಿ ಯಾರಿಗಾದರೂ ಒಬ್ಬರಿಗೆ ಭೀಕರ ಕಾಯಿಲೆ ಯಿರುವುದರಿಂದ, ಈ ರೀತಿಯಾಗಿ ಅನೇಕ ರೀತಿಯ ಕಾರಣಗಳನ್ನು ಮುಂದೊಡ್ಡಿ ವಿವಾಹ ವಿಚ್ಛೇಧನೆಗಳು ಆಗುತ್ತವೆ. ಇಂಥಹ ಸಂದರ್ಭಗಳಲ್ಲಿ ಸಮಾಜದ ಹಿರಿಯರು ವಿಚ್ಛೇಧನೆಯನ್ನು ಘೋಷಿಸುತ್ತಾರೆ. ಗಂಡಸು ಹೆಂಗಸು ಎರಡೂ ಕಡೆಯವರು ಸೇರಿ ಪಂಚರ ಸಮ್ಮುಖದಲ್ಲಿ ವಾದ ಪ್ರತಿವಾದಗಳು ನಡೆದು ಪಂಚಾಯ್ತಿ ನಡೆದು ವಿಚ್ಛೇಧನೆಯನ್ನು ನಿರ್ಧರಿಸುತ್ತಾರೆ. ಅಷ್ಟೇ ಅಲ್ಲದೇ ವಿಚ್ಛೇಧನೆ ಪಡೆದ ಹೆಣ್ಣಾಗಲಿ ಅಥವಾ ಗಂಡಾಗಲಿ ಪುನಃ ಮದುವೆ ಯಾಗುವಂತೆ ಅವಕಾಶ ಮಾಡಿಕೊಡುತ್ತಾರೆ.

ಸಾಮಾನ್ಯವಾಗಿ ಗಂಡಸು ವಿಚ್ಛೇಧನೆ ಮಾಡಿದಾಗ ತಾನು ಕೊಟ್ಟಿದ್ದ ವಧು ದಕ್ಷಿಣೆಯನ್ನು ಹಿಂತಿರುಗಿ ಕೇಳುವಂತಿಲ್ಲ. ಮತ್ತು ಮಕ್ಕಳು ತಂದೆಯ ಕಡೆಗೆ ಹೋಗುತ್ತವೆ. ಈ ತರಹದ ವಿಚ್ಛೇಧನೆಗೆ ಹಲವು ಕಾರಣಗಳಿರುತ್ತವೆ. ಮೂಲತಃ ಜಗಳಗಂಟಿಯಾದ ಹೆಂಡತಿ, ಬಾಯಿಗೆ ಬಂದ ಹಾಗೆ ಬೈಯುವ ಅತ್ತೆ ಮಾವಂದಿರು, ಕುಡಿದು ಬಂದು ಹೊಡೆಯುವ ಗಂಡ ಈ ಎಲ್ಲಾ ಕಾರಣಗಳಿಂದ ವಿಚ್ಛೇಧನಕ್ಕೆ ಮನಸ್ಸು ಮಾಡುತ್ತಾರೆ. ಗಂಡ ಹೆಂಡತಿ ಒಬ್ಬರಿಗೊಬ್ಬರು ಅಸಡ್ಡೆ ಮಾಡುವುದು, ಬೇಟೆಯಾಡಿ ಬಂದ ಗಂಡನಿಗೆ ಸರಿಯಾಗಿ ನೋಡಿಕೊಳ್ಳದೇ ಇರುವುದು, ಮನೆಗೆ ಸರಿಯಾದ ಖರ್ಚು ವೆಚ್ಚವನ್ನು ಗಂಡನು ಕೊಡದಿದ್ದರೆ ಇಂಥಹ ಸಂದರ್ಭಗಳಲ್ಲೂ ವಿವಾಹ ವಿಚ್ಛೇಧನೆಗಳು ಆಗುತ್ತವೆ. ಹೆಂಡತಿ ಯಾವಾಗಲೂ ಸಾಮಾಜಿಕ ಮತ್ತು ಆರ್ಥಿಕ ರಕ್ಷಣೆಯನ್ನು ತನ್ನ ಗಂಡನಿಂದ ಬಯಸುತ್ತಾಳೆ. ಗಂಡ ಪರಸ್ತ್ರೀಯರಲ್ಲಿ ಅನುರಕ್ತನಾಗಿದ್ದರೆ, ಅಥವಾ ಹೆಂಡತಿ ಸುಂದರದವಳಾಗಿರದ್ದಂತಹ ಸಂದರ್ಭದಲ್ಲಿಯೂ ಅನೇಕ ವಿವಾಹ ವಿಚ್ಛೇಧನೆಗಳು ಆಗಿರುವುದನ್ನು ಕಂಡು ಬರುತ್ತವೆ.

ವೈವಾಹಿಕ ಸ್ಥಾನಮಾನ

ಹಕ್ಕಿಪಿಕ್ಕಿ ಬುಡಕಟ್ಟಿನಲ್ಲಿ ಶೇಕಡ ೪೫.೪೫ ರಷ್ಟು ಜನರು ಅವಿವಾಹಿತರಿರುವರು. ವಿವಾಹಿತ ಶೇ. ೫೪.೫೪ ರಷ್ಟು ಕಂಡುಬಂದರೆ, ವಿಧುರ ವಿಧವೆಯರು ಶೇ. ೧.೨೨ ರಷ್ಟಿದ್ದಾರೆ ಹಾಗೂ ಬೇರ್ಪಟ್ಟ ಕುಟುಂಬಗಳು ಶೇ. ೦.೧೪ರಷ್ಟು ಇರುವುದು ಕಾಣಸಿಗುತ್ತದೆ.

**ಕೋಷ್ಟಕ : ೪.೧**

**ಸಮೀಕ್ಷೆಗೊಳಪಟ್ಟ ಹಕ್ಕಿಪಿಕ್ಕಿ ಸಮುದಾಯದ ವೈವಾಹಿಕ ಸ್ಥಾನಮಾನ (೨೦೦೭)**

| ಸಂ. | ವೈವಾಹಿಕ ಸ್ಥಾನಮಾನ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ಅವಿವಾಹಿತರು | ೬೭೦ | ೫೫೯ | ೧೨೨೯ |
| ೨ | ವಿವಾಹಿತರು | ೬೮೫ | ೭೪೮ | ೧೪೭೫ |
| ೩ | ವಿಧುರ/ವಿಧವೆಯರು | ೦೮ | ೨೫ | ೩೩ |
| ೪ | ಬೇರ್ಪಡೆಯಾದವರು | ೦೨ | ೦೨ | ೦೪ |

## ೫

# ಆರಾಧನೆ ಆಚರಣೆ ನಂಬಿಕೆ

### ಜನನ, ನಾಮಕರಣ, ಋತುಮತಿ, ಸೀಮಂತ, ಮರಣ

ಜನನ : ಹಿಂದಿನ ಕಾಲದಲ್ಲಿ ಹಕ್ಕಿಪಿಕ್ಕಿಯರ ಹೆಣ್ಣು ಮಕ್ಕಳು ತಮ್ಮ ಹೆರಿಗೆಯನ್ನು ತಾವೇ ಮಾಡಿಕೊಳ್ಳಬೇಕಾಗುತ್ತಿತ್ತು. ತಮ್ಮ ಗುಡಿಸಲಿನಿಂದ ದೂರದಲ್ಲಿ ಒಂದು ಚಿಕ್ಕ ಗುಡಿಸಲು ಹಾಕಿ ಅಲ್ಲಿಗೆ ಬಾಣಂತಿಯನ್ನು ಕರೆತಂದು ಬಿಟ್ಟರೆ, ನಂತರದಲ್ಲಿ ಅಲ್ಲಿಗೆ ಬೇರೆ ಯಾರು ಹೋಗುವಹಾಗಿಲ್ಲ. ಮಗು ಹುಟ್ಟಿದ ಮೇಲೆ ಹೊಕ್ಕುಳ ಬಳ್ಳಿಯನ್ನು ಕಲ್ಲಿನ ತುಂಡು ಇಲ್ಲವೇ ಗಾಜು, ಬಳೆಯ ಚೂರಿಯಿಂದ ತಾನೇ ಕೊಯ್ದು ಸೀರೆಯ ನೂಲಿನಿಂದ ಹೊಕ್ಕುಳ ಬಳ್ಳಿಯನ್ನು ಕಟ್ಟಿಕೊಳ್ಳುತ್ತಿದ್ದಳು. ಮಾಂಸ ಮತ್ತು ಮಣ್ಣುಲೇಪನ ದಿಂದ ಕೂಡಿದ್ದ ಮಗುವನ್ನು ಹಸಿಬಾಣಂತಿಯೇ ತನ್ನ ಕಾಲ ಮೇಲೆ ಹಾಕಿಕೊಂಡು ದನದ ಸಗಣಿಯಿಂದ ಅದನ್ನು ಸ್ನಾನ ಮಾಡಿಸುತ್ತಿದ್ದಳು. ಮಗುವಿನ ಸ್ನಾನದ ನಂತರ ತಾನೂ ಸ್ನಾನ ಮಾಡಿ ಬಟ್ಟೆ ಬರೆಗಳನ್ನು ತೊಳೆದುಕೊಂಡು ಬೆಂಕಿಯ ಅಗ್ಗಿಷ್ಟಿಕೆ ಹಾಕಿಕೊಳ್ಳುತ್ತಾಳೆ. ಆ ಬೆಂಕಿಯ ಬಳಿ ಹಸಿಬಾಣಂತಿ ಮತ್ತು ಮಗು ಕಾಯಿಸಿಕೊಂಡ ನಂತರ ಅವಳ ಗಂಡ ಎನಿಸಿಕೊಂಡವನು ಅರ್ಧ ಪಾವು ಅಕ್ಕಿ ಬೆಲ್ಲ ಹಾಕಿ ಗಂಜಿ ಮಾಡಿ ಮುತ್ತುಗದ ಎಲೆಯ ದೊನ್ನೆ ಮಾಡಿ ಬಾಣಂತಿಗೆ ಕೊಡುತ್ತಾರೆ. ಐದು ದಿನಗಳ ತರುವಾಯ ಮಗುವನ್ನು ಜೋಳಿಗೆಗೆ ಕಟ್ಟಿಕೊಂಡು ಊರೆಲ್ಲಾ ತಿರುಗಿ ಬಿಕ್ಷೆ ಬೇಡಬೇಕು. ಇವಳು ಬಿಕ್ಷೆಬೇಡಿತಂದ ಆಹಾರವನ್ನು ಅವಳಷ್ಟೇ ತಿನ್ನಬೇಕು. ಬೇರೆಯವರು ತಿಂದರೆ ಅದನ್ನು ಮೈಲಿಗೆ ಎಂದು ಭಾವಿಸುತ್ತಾರೆ. ಹೆರಿಗೆಯ ನಂತರ ಬಾಣಂತಿಯೇ ನೀರು, ಸೌದೆ, ಒಲೆಕಲ್ಲು ಹಾಕಿ ಅಡಿಗೆ ಮಾಡಿ ಊಟ ಮಾಡಬೇಕಾಗುತ್ತದೆ. ಬಾಣಂತಿಯೂ ಸುಮಾರು ೩ ತಿಂಗಳುಗಳ ಕಾಲ ತಾನೇ ಭಿಕ್ಷೆಬೇಡಿ ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳಬೇಕಾಗುತ್ತದೆ. ಬಾಣಂತಿಯು ತನ್ನ ಹೊಟ್ಟೆಗಾಗಿ ಭಿಕ್ಷೆ ಯನ್ನು ಮಾತ್ರಬೇಡದೇ, ಕಸ್ತೂರಿ, ಗೋರೋಜನ, ಪಿನ್ನು, ದಬ್ಬಣ, ಕರಿಮಣಿಗಳ್ನು ಸಹ ಮಾರಾಟ ಮಾಡುತ್ತಾಳೆ.

ಹುಟ್ಟಿದ ಮಗುವಿಗೆ ದಿನಾಲು ಸ್ನಾನ ಮಾಡಿಸಿದರೆ, ಪಾರ್ಧಿಗಳಲ್ಲಿ ಬಾಣಂತಿಯಾದವಳಿಗೆ ಐದು ದಿನಗಳ ನಂತರವೇ ಸ್ನಾನಮಾಡಿಸಿ, ಬೆಲ್ಲಹಾಕಿ ಮಾಡಿದ ಸಿಹಿ ಅನ್ನ (ಮಿಟ್ಟುದಾನ್) ನನ್ನು ಕೊಡುತ್ತಾರೆ. ಹಕ್ಕಿಪಿಕ್ಕಿಯರಲ್ಲಿ ಐದು ದಿನವೂ ಬೆಳಗ್ಗೆ ಸಂಜೆ ಸ್ನಾನವಿರುತ್ತದೆ.

ಮುಂದಿನ ಐದು ದಿನಗಳ ತನಕವೂ ಗಂಜಿ ಅಥವಾ ರವೆಯ ಗಂಜಿಯನ್ನು ಕೊಡುತ್ತಾರೆ. ಹೆರಿಗೆಯಾದ ಹೆಂಗಸು ಮೂರು ತಿಂಗಳುಗಳವರೆಗೆ ಹಾಸಿಗೆ, ಒಲೆ, ಪಾತ್ರೆ ಹಾಗೂ ಇನ್ನುಳಿದ ಯಾವುದೇ ಸಾಮಗ್ರಿಗಳನ್ನು ಮುಟ್ಟುವಂತಿಲ್ಲ. ಅಷ್ಟೇ ಏಕೆ ಗಂಡ ಹೆಂಡಿರಿಬ್ಬರು ಕೂಡಿ ಮಾತು ಕೂಡಾ ಆಡುವಂತಿಲ್ಲ!

ಆದರೆ ವಿಜ್ಞಾನ ಮತ್ತು ತಂತ್ರಜ್ಞಾನ ಬೆಳೆದಂತೆ ಹಾಗೂ ಬದಲಾಗುತ್ತಿರುವ ಈ ದಿನಗಳಲ್ಲಿ ಇಂದು ಅಷ್ಟೊಂದು ಕಟ್ಟು ನಿಟ್ಟನ್ನು ಪಾಲಿಸದೆ ಇಂದಿನ ಹಕ್ಕಿಪಿಕ್ಕಿಯರು ಆಸ್ಪತ್ರೆ ಗಳಲ್ಲಿ ಹಾಗೂ ಸೂಲಗಿತ್ತಿಯರಿಂದ ತಮ್ಮ ಹೆರಿಗೆಯನ್ನು ಮಾಡಿಸಿಕೊಳ್ಳುತ್ತಿದ್ದಾರೆ.

ಗರ್ಭವತಿಯಾದ ಹೆಣ್ಣು ಒಬ್ಬಳೇ ಕಾಡಿಗೆ ಹೋದರೆ ದೆವ್ವ ಹಿಡಿಯುತ್ತದೆ ಎಂಬ ನಂಬಿಕೆ ಇವರಲ್ಲಿ ಚಾಲ್ತಿಯಲ್ಲಿದೆ. ಅಂದಿನ ದಿನಗಳಲ್ಲಿ [illegible]ದ ಹೆಣ್ಣನ್ನು ಮೈಲಿಗೆ ಎಂದು ಭಾವಿಸುತ್ತಿದ್ದರು. ಏಕೆಂದರೆ ಅಲ್ಲಿಯ ಡಾಕ್ಟರ್‌ಗಳು ಮತ್ತು ನರ್ಸ್‌ಗಳು ಎಲ್ಲಿ ತಮ್ಮ ಗುಪ್ತಾಂಗ ಗಳಿಗೆ ಕೈಹಾಕಿ ಬಿಡುತ್ತಾರೋ ಎಂದು ಹೆದರಿ ಮತ್ತು ನಾಚಿಕೊಂಡು, ಹೆರಿಗೆಗೆ ಮುನ್ನ ಹರಳೆ ಗಿಡದ ಬೇರಿನ ರಸವನ್ನು ಕುಡಿಸಿ ಅಂಗಾತ ಮಲಗಿಸಿ ಎರಡೂ ಕಡೆಯಿಂದ ಹೊಟ್ಟೆಯನ್ನು ಅದುಮಿ ಮಗುವನ್ನು ಹೊರತೆಗೆಯುತ್ತಿದ್ದರು. ಒಂದು ವೇಳೆ ಹೆರಿಗೆ ತಡವಾದರೆ ಅಥವಾ ಹೆರಿಗೆ ಆಗುವ ಸಮಯದಲ್ಲಿ ಏನಾದರೂ ತೊಂದರೆಯಾದರೆ ಅದು ದೆವ್ವದ ಕಾಟವೇ ಇರಬೇಕೆಂದು ಭಾವಿಸಿ, ಅದರ ಪರಿಹಾರಕ್ಕಾಗಿ ತಮ್ಮ ಕುಲದೇವತೆಯನ್ನು ಮೊರೆ ಹೊಗುತ್ತಿರು ತ್ತಾರೆ. ಅನೈತಿಕವಾಗಿ ಬಸಿರಾದರೆ ಅದು ಯಾರ ಬಸಿರು ಎಂದು ಹೇಳುವವರೆಗೂ ಹೆರಿಗೆ ತಡವಾಗುತ್ತದೆಂದು ಇವರು ನಂಬುತ್ತಾರೆ.

ಗಂಡುಮಗು ಹುಟ್ಟಿದ ೩ನೇ ದಿವಸಕ್ಕೆ ಶಿವಮೊಗ್ಗ ಪ್ರಾಂತ್ಯದಲ್ಲಿ 'ಛಟ್ಟಿ' ಸಮಾರಂಭ ಮಾಡುತ್ತಾರೆ. ಅಂದರೆ ಮಾಂಸದ ಊಟವನ್ನು ಈ ಸಮಾರಂಭದಲ್ಲಿ ಮಾಡುತ್ತಾರೆ. ತಮ್ಮ ಕುಲದೇವತೆಯನ್ನು ಪೂಜಿಸಿ ಮಗುವಿಗೆ 'ಉಡದಾರ' ಹಾಕುತ್ತಾರೆ. ಅವರ ದೇವತೆಗಳ ಮೂಲಕ, ತೀರಿಕೊಂಡ ಮಾತಾ ಪಿತೃಗಳಿಗೆ ಮತ್ತು ತಮ್ಮ ಪೂರ್ವಿಕರಿಗೆ ಮಗು ಹುಟ್ಟಿದ ವಿಚಾರವನ್ನು ತಿಳಿಸುತ್ತಾರೆ. ತಮ್ಮ ಕುಲದೇವತೆಗಳನ್ನು ಗಂಡು ಮಗುವಿಗೆ ಯಾರದೋ ಕೆಟ್ಟ ದೃಷ್ಟಿ ಬೀಳದಿರಲೆಂದು ಹಾಗೂ ಪಾರ್ಶ್ವವಾಯುವಿನಿಂದ ರಕ್ಷಣೆ ಪಡೆಯುವುದಕ್ಕಾಗಿ ಉಡದಾರವನ್ನು ಕಟ್ಟುತ್ತಾರೆ. ಹಾಗೂ ಛಟ್ಟಿ ದೇವತೆಯ (ಅಳಿಸುವ ನಗಿಸುವ ದೇವತೆ) ರಕ್ಷಣೆ ಮಗುವಿಗೆ ಬರುತ್ತದೆ.

ಹಕ್ಕಿಪಿಕ್ಕಿಯರು ಗಂಡು ಮಗುವಿಗಿಂತ ಹೆಣ್ಣು ಮಗು ಹುಟ್ಟಿದಾಗ ಹೆಚ್ಚು ಸಂಭ್ರಮ ಪಡುತ್ತಾರೆ. ಏಕೆಂದರೆ ಇವರಲ್ಲಿ 'ವರದಕ್ಷಿಣೆ'ಯ ಬದಲಾಗಿ 'ವಧುದಕ್ಷಿಣೆ ಪದ್ಧತಿ' ಚಾರಿ ಯಲ್ಲಿದೆ.

ದೀಪಾವಳಿ, ದಸರಾ ಹಬ್ಬ ಹರಿದಿನಗಳಲ್ಲಿ ಇವರು ತಮ್ಮ ದೈವಗಳನ್ನು ಪ್ರಾಣಿ ಬಲಿಯಿಂದ ಸಂತೃಪ್ತಿಪಡಿಸುವರು.

**ಹಕ್ಕಿಪಿಕ್ಕಿಯರ ವಿಚಿತ್ರವಾದ ಹೆಸರುಗಳ ಕೆಲವು ಉದಾಹರಣೆಗಳು**

೧. **ಆಯಿಮರಿ :** ಈ ಬಾಲಕ ಹುಟ್ಟಿದಾಗ ಬಾಲಕನ ತಂದೆ ಒಂದು ಜಿಂಕೆಮರಿ ಬೇಟೆ ಮಾಡಿಕೊಂಡು ಬಂದಿದ್ದನಂತೆ. ಈ ಬಾಲಕ ಬೆಂಗಳೂರು ಬಳಿಯರ ಗೊರೊರು ಬಳಿ ಹುಟ್ಟಿದು ಆ ಸಮಯದಲ್ಲಿ ಜಿಂಕೆ ಮರಿಯೊಂದಿಗೆ ಬಂದ ಅವನಪ್ಪ ಹೇಮರಿ, ಹೇಮರಿ ಎಂದು ಮಗುವನ್ನು ನೋಡಿ ಆಡಿಸಿದನಂತೆ ಮುಂದೆ ಅದೇ 'ಹೇಮರಿ', 'ಆಯಿಮರಿ' ಎಂದಾಯಿತಂತೆ.

೨. **ತಿಗಳುಬ್ಬಿ :** ಈಕೆ ಆಯಿಮರಿ ಎಂಬ ವ್ಯಕ್ತಿಯ ಹೆಂಡತಿ. ಈಕೆ ಹಿರೇಸಾವೆಯಲ್ಲಿ ಹುಟ್ಟಿದ್ದು, ಈಕೆ ಹುಟ್ಟಿದಾಗ ತೀರಾ ಬರಗಾಲವಿದ್ದು ಜನರೆಲ್ಲಾ ಬರೆ ಲಂಗೋಟಿ ಕಟ್ಟಿ ಕೊಂಡೇ ಆಡ್ಡಾಡುತ್ತಿದ್ದರಂತೆ. ಅಂಥಹ ಕಾಲದಲ್ಲಿ ಇವಳು ಹುಟ್ಟಿದ ಕಾರಣ ಇವಳಿಗೆ ತಿಗಳುಬ್ಬಿ ಎಂದು ಹೆಸರಿಟ್ಟರಂತೆ. ಇವರ ಭಾಷೆಯಲ್ಲಿ ತಿಗಳು ಎಂದರೆ ತುಂಡುಬಟ್ಟೆಯಂತೆ. ತಿಗಳುರ್‌ಬಿ ಎಂದರೆ ಬಟ್ಟೆ ಇಲ್ಲದ ಟೈಮಿನಲ್ಲಿ ಹುಟ್ಟಿದವಳು ಎಂದರ್ಥ.

೩. **ಗಣಪತ್ :** ಆಯಿಮರಿ ಮತ್ತು ತಿಗಳುಬ್ಬಿಯರ ಮಗನೆ ಈ ಗಣಪತ್. ಈ ಗಣಪತ್ ಗೌರಿಹಬ್ಬದಲ್ಲಿ ಹುಟ್ಟಿದವ ಆದ್ದರಿಂದ ಇವನಿಗೆ ಈ ಹೆಸರು ಬಂದಿದೆ.

೪. **ಚೆಲುವಿ :** ಕನ್ನಡದ ಮಯೂರ್ ಚಿತ್ರದಲ್ಲಿ ಡಾ ರಾಜಕುಮಾರ್ ಅಲ್ಲಿಯ ಹಿರೋಯಿನಿಗೆ ಚೆಲವಿ ಎಂದು ಕರೆದಂಥಹ ಸಂದರ್ಭದಲ್ಲಿ ಇವಳು ಹುಟ್ಟಿದವಳಂತೆ ಹೀಗಾಗಿ ಇವಳ ಹೆಸರು ಚೆಲುವಿ ಎಂದೇ ಖಾಯಂಯಾಯಿತು.

೫. ಜಂಪರ್‌ಬಾಯಿ : ಈ ಅಜ್ಜಿಗೆ ಜಂಪರ್ ಅಜ್ಜಿ ಎಂತಲೂ ಕರೆಯುತ್ತಾರೆ. ಈ ಅಜ್ಜಿಗೆ ಈ ಹೆಸರು ಬರಲು ಕಾರಣವೆಂದರೆ, ಈ ಮುದುಕಿಗೆ ಈಗ ಸುಮಾರು ೧೦೦ ವರ್ಷ ವಯಸ್ಸಾಗಿದ್ದು ಇವಳು ಹುಟ್ಟಿದಂತಹ ಸಂದರ್ಭದಲ್ಲಿ ಪುರುಷರು ಮತ್ತು ಸ್ತ್ರೀಯರು ಅಂಗಿಯ ಒಳಗೆ ಬನಿಯನ್ ಹಾಕುತ್ತಿದ್ದರಂತೆ ಆ ಬನಿಯನ್‌ಗಳು ಒಳ್ಳೆ ಜಂಪರ ನಂತೆ ದೊಡ್ಡವಾಗಿರುತ್ತಿದ್ದವಂತೆ.

೬. ಒಬ್ಬ ಎಮ್‌ಜಿಆರ್: ಈ ಎಮ್‌ಜಿಆರ್ ಎಂಬ ವ್ಯಕ್ತಿಯು ತಮಿಳುನಾಡಿನ ಮುಖ್ಯ ಮಂತ್ರಿಯಾಗಿದ್ದ ದಿವಂಗತ ಎಮ್ ಜಿ ರಾಮಚಂದ್ರ ಅವರು ತೊಡುತ್ತಿದ್ದಂಥಹ ಟೋಪ್ಪಿಗೆ ಯನ್ನು ಒಂದು ಸಲ ತೊಟ್ಟಿದ್ದನಂತೆ. ಅದನ್ನು ನೋಡಿ ಎಲ್ಲರೂ ಏ ನೀನು ಎಮ್‌ಜಿಆರ್ ತರಹ ಕಾಣುತ್ತಿ ಎನ್ನುವುದರಿಂದ ಅವನ ಹೆಸರು ಶಾಶ್ವತವಾಗಿ ಎಮ್‌ಜಿಆರ್ ಎಂದೇ ಆಯಿತು.

೭. ಇನ್ನೊಬ್ಬ ಸರ್ಕಲ್ : 'ಸರ್ಕಲ್' (Circle) ಎನ್ನುವ ಈ ವ್ಯಕ್ತಿ ತಮ್ಮ ಊರಿನ ಸರ್ಕಲ್(ವೃತ್ತ)ದ ಬಳಿ ಹುಟ್ಟಿದ್ದನಂತೆ ಅವನ ಜನನಕ್ಕೆ ಕಾರಣವಾದ ಆ ಸರ್ಕಲ್‌ನ್ನೇ ಇವನ ಹೆಸರಾಗಿ ಮಾರ್ಪಟ್ಟಿತ್ತು.

೮. ಲಾಯರ್ : ಈ ವ್ಯಕ್ತಿಗೆ ಈ ಹೆಸರು ಬರಲು ಕಾರಣವೆಂದರೆ ಇವನು ಹುಟ್ಟಿದ

ಸಮಯದಲ್ಲಿ ಇವರ ಹಟ್ಟಿಯ ಕಡೆಯಿಂದ ಒಬ್ಬ ಲಾಯರ್ ನಡೆದು ಹೋದನಂತೆ ನಡೆದು ಹೋದ ಆ ಲಾಯರ್‌ನನ್ನೇ ನೋಡಿ ತನ್ನ ಮಗನಿಗೆ ಲಾಯರ್ (Lawyer) ಎಂದೇ ಹೆಸರಿಟ್ಟಳಂತೆ ಆ ಮಹಾತಾಯಿ.

೯. ಡಿವಿಜನ್ (Division) : ಎಂಬ ಹೆಸರಿನ ವ್ಯಕ್ತಿಯು ಬೆಂಗಳೂರಿನ ಬನ್ನೆರುಘಟ್ಟದ ಬಳಿಯ ಭೂತಾನ್ ಹಳ್ಳಿ ಎಂಬ ಹಕ್ಕಿಪಿಕ್ಕಿ ಕಾಲೋನಿಯಲ್ಲಿ ವಾಸಿಸುತ್ತಿದ್ದು ಈ ವೃದ್ಧ ವ್ಯಕ್ತಿಯು ಸಮಾಜ ಕಲ್ಯಾಣ ಇಲಾಖೆಯ ಹಾಸ್ಟೆಲ್‌ನಲ್ಲಿ ಅಡಿಗೆಯವನಾಗಿದ್ದು ನಿವೃತ್ತನಾಗಿರುತ್ತಾನೆ. ಈ ವ್ಯಕ್ತಿಯು ಹುಟ್ಟಿದ ಸಂದರ್ಭದಲ್ಲಿ ಒಬ್ಬ 'ಡಿವಿಜನಲ್ ಕಮೀಷನರ್' (Division Commissioner) ಇವರ ಪ್ರದೇಶಕ್ಕೆ ಬಂದಿದ್ದನಂತೆ ಆ ಡಿಸಿಯ ದರ್ಪಗಿರ್ಪ ನೋಡಿ ಆ ಮಹಾತಾಯಿ ತನ್ನ ಮಗನಿಗೆ 'ಡಿವಿಜನ್' ಎಂದೇ ನಾಮಕರಣ ಮಾಡಿದಳಂತೆ.

೧೦. ಎಕ್ಸ್‌ಪ್ರೆಸ್ (Express) : ಎಂಬ ವ್ಯಕ್ತಿಯ ತಾಯಿಯು ಕೆಕೆ ಎಕ್ಸ್‌ಪ್ರೆಸ್ ಟ್ರೈನ್ (Karnataka Express Train)ನಲ್ಲಿ ಪ್ರಯಾಣ ಮಾಡುತ್ತಿರುವಾಗಲೇ ಈ ಮಹಾನುಭಾವ ಜನಿಸಿದನಂತೆ. ಆ ಕಾರಣಕ್ಕಾಗಿ ಈ ಮಹಾನುಭಾವನ ಹೆಸರು 'ಎಕ್ಸ್‌ಪ್ರೆಸ್' ಎಂತಲೆ ಬಿತ್ತಂತೆ.

ಈ ರೀತಿಯಾದಂತಹ ವಿಚಿತ್ರ ಹೆಸರುಗಳನ್ನಿಟ್ಟು ಕೊಳ್ಳುವದರ ಜೊತೆಗೆ ಇನ್ನು ಎಷ್ಟೋ ಜನರು ಸಿನಿಮಾ ನಟ, ನಟಿಯರ ಹೆಸರುಗಳನ್ನಿಟ್ಟುಕೊಂಡಿರುವುದೂ ಕಂಡುಬಂರುವುದು. ಹೀಗೆ ಬಗೆಬಗೆಯ ಹೆಸರುಗಳನ್ನು ಇಟ್ಟುಕೊಂಡಿರುವ ಈ ಜನ ಎಷ್ಟೊಂದು ಸೂಕ್ಷ್ಮಮತಿಗಳು ಮತ್ತು ಆಧುನಿಕರಣಕ್ಕೆ ಒಳಗಾಗಿದ್ದಾರೆಂಬುದು ಅವರ ಹೆಸರುಗಳಿಂದಲೇ ಸ್ಪಷ್ಟವಾಗಿರುತ್ತದೆ.

**ಜವಳ ಕಾರ್ಯಕ್ರಮ :** ಹಕ್ಕಿಪಿಕ್ಕಿಯರಲ್ಲಿ ಜವಳ ಕಾರ್ಯವೂ ಅತ್ಯಂತ ಸುಲಭವಾಗಿದ್ದು. ಮಗು ಹುಟ್ಟಿದ ಐದನೇ ದಿನಕ್ಕೆ ತಾಯಿಯೇ ಮಗುವನ್ನು ಕಾಲಮೇಲೆ ಹಾಕಿಕೊಂಡು, ಬ್ಲೇಡಿನಿಂದ ಅದರ ಕೂದಲವನ್ನು ಕತ್ತರಿಸುವ ಮೂಲಕ ಜವಳವನ್ನು ಮಾಡುತ್ತಾಳೆ. ಇದು ತ್ರಾಂಗಡೂ ಮತ್ತು ಹಿರಿಯರ ಎದುರು ನಡೆವಂಥಾದ್ದು. ಇದಕ್ಕೆ ಛಟ್ಟಿ ಪೂಜೆಯಲ್ಲಿ ಲಟ್ಟಿ ತೊಳೆಯುವುದು ಎನ್ನುತ್ತಾರೆ. ಇಲ್ಲಿ ತಾಯಿಯ ಲಟ್ಟಿ ಮುಂದಲೆ ಕೂದಲು ತೊಳೆದು ಮಗುವಿನ ಕೂದಲು ತೆಗೆಯಲಾಗುತ್ತದೆ.

**ಪಹಿಲೋಟಿ (ಋತುಮತಿ) ಕಾರ್ಯ :** ಹುಡುಗಿಯರು ಋತುಮತಿಯಾದಾಗ ಅವಳಿಗೆ ಸ್ನಾನ ಮಾಡಿಸಿ, ಮುಖಕ್ಕೆ ಕೈ ಕಾಲುಗಳಿಗೆ ಅರಿಶಿಣವನ್ನು ಹಚ್ಚುತ್ತಾರೆ. ಮೊದಲು ಐದು ಮುತ್ತೈದೆಯರಿಂದ ಸ್ನಾನ ಮಾಡಿಸುತ್ತಾರೆ. ನಂತರ ಬಂಧು ಬಳಗವನ್ನು ಕರೆದು ಊಟ ಬಡಿಸುತ್ತಾರೆ. ಆಗಲೇ ಆ ಹುಡುಗಿ ಮದುವೆಗೆ ಬಂದಿದ್ದಾಳೆಂದು ನಿರ್ಧರಿಸುತ್ತಾರೆ. ಈ ಸಂದರ್ಭವನ್ನು ಇತ್ತೀಚಿನವರು ಇತರೇ ಜಾತಿಯವರಂತೆ ಅದ್ದೂರಿ ಸಮಾರಂಭವನ್ನು ಮಾಡುತ್ತಿರುವದು ಕಂಡು ಬರುತ್ತದೆ. ಅನೇಕ ಪರಿವಾರಗಳಲ್ಲಿ ಈ ದಿನವೇ ಮದುವೆಯ ಮಾತು ಕತೆಗಳು ಸಹ ನಡೆಯುತ್ತವೆ. ಹುಡುಗಿಯು ಮದುವೆಯಾದ ನಂತರ ಋತುಮತಿಯಾದರೆ

ಆಗ ಯಾವುದೇ ಸಮಾರಂಭಗಳನ್ನು ಮಾಡುವುದಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಬಹುತೇಕ ಹಕ್ಕಿಪಿಕ್ಕಿಯರು ಬಾಲ್ಯ ವಿವಾಹದಂತಹ ಅನಿಷ್ಟ ಪದ್ಧತಿ ಯನ್ನು ಬಿಟ್ಟು ಹುಡುಗಿಯು ಪ್ರೌಢಾಳಾದ ನಂತರವೇ ಮದುವೆಯ ಸಮಾರಂಭಗಳನ್ನು ಮಾಡುತ್ತಿರುವುದು ಸಂತೋಷ ಮತ್ತು ಸಮಾಧಾನದ ಸಂಗತಿಯಾಗಿದೆ.

ಬಾಲೆಯರು ಕನ್ನೆಯಾಗುವ ಪ್ರಕ್ರಿಯೆಯನ್ನು ಬುಡಕಟ್ಟುಗಳು ಅತೀ ಸಂಭ್ರದಿಂದಲೇ ಎದುರುಗೊಳ್ಳುತ್ತವೆ. ಈ ಕಾರ್ಯವು ಒಂದೊಂದು ಬುಡಕಟ್ಟುಗಳಲ್ಲಿ ಒಂದೊಂದು ರೀತಿ ಯಲ್ಲಿ ಆಚರಿಸುತ್ತವೆ. ಇವರು ಈ ಕಾರ್ಯವನ್ನು ಹೆಣ್ಣಿನ ಜೀವನದ ಮುಖ್ಯ ಅಂಗ ಎಂದು ಭಾವಿಸಲಾಗುತ್ತದೆ.

ಹಕ್ಕಿಪಿಕ್ಕಿಯರು ಮೈನೆರೆದ ಹುಡುಗಿಯನ್ನು ತಮ್ಮ ಹಟ್ಟಿ(ಗುಡಿಸಲು)ಯಿಂದ ದೂರಕ್ಕೆ ಒಂದು ಪ್ರತ್ಯೇಕ ಗುಡಿಸಲನ್ನು ಹಾಕಿ ಸೂತಕ ಕಳೆಯುವರೆಗೂ ಆ ಹೆಣ್ಣನ್ನು ಗುಡಿಸಲಿನಲ್ಲಿ ಇಡುತ್ತಾರೆ. ಆದರೆ ಇತ್ತೀಚೆಗೆ ಈ ಎಲ್ಲ ಕಟ್ಟುನಿಟ್ಟುಗಳು ಕಡಿಮೆಯಾಗುತ್ತಿವೆ. ಅಂದಿನ ಪ್ರತ್ಯೇಕ ಗುಡಿಸಲಿನ ಸ್ಥಾನವನ್ನು ಇಂದು ಮನೆಯ ಒಂದು  ಕೋಣೆಯಾಗಿ ಮಾರ್ಪಾಡು ಗೊಂಡಿವೆ. ಋತುಮಾತಿ ಹುಡುಗಿಯನ್ನು ಕೂಡಿಸಿದ ಆ ಜಾಗವನ್ನು ಚಾದರ್ ಇಲ್ಲವೆ ಯಾವುದಾದರೂ ಪರದೆಯಿಂದ ಮರೆಮಾಡಿ ಇಡಲಾಗುತ್ತದೆ.  ಮೈನೆರೆದ ಹೆಣ್ಣಿರುವ ಜಾಗಕ್ಕೆ ಯಾವುದೇ ದುಷ್ಟಸಕ್ತಿಗಳು ನುಸುಳದಂತೆ ಹಳೆ ಚಪ್ಪಲಿ, ಕಸಬಾರಿಗೆ, ಕುಡುಗೋಲುಗಳನ್ನು ಇಡುವ ಪದ್ಧತಿಯು ಚಾಲ್ತಿಯಲ್ಲಿದೆ. ಹಾಗೆಯೇ ಆ ಹುಡುಗಿಯು ಮಲಗುವ ಹಾಸಿಗೆಯ ಕೆಳಭಾಗದಲ್ಲಿ ಚಾಕುವನ್ನು ಇಡಲಾಗಿರುತ್ತದೆ.

ಹುಡುಗಿ ಮೈನೆರೆದಿದ್ದಾಳೆಂದು ತಿಳಿದ ತಕ್ಷಣ ಮನೆಯ ಯಜಮಾನಿಯಾಗಲಿ, ಮೈನೆರೆದ ಹೆಣ್ಣಿನ ಸೋದರತ್ತೆಯಾಗಲೀ ಅಥವಾ ಸೋದರಮಾವನಾಗಲಿ ಮೊದಲ ಮುಟ್ಟು ನೀರನ್ನು ಹಾಕುತ್ತಾರೆ. ಅಲ್ಲಿಗೆ ಆಕೆ ಆ ಮನೆ ಸೇರುತ್ತಾಳೆ ಎಂದರ್ಥ. ಹಕ್ಕಿಪಿಕ್ಕಿಯರಲ್ಲಿ ಐದು ಮುತ್ತೈದೆ ಯರ ಕೈಯಿಂದ ಮೊದಲ ಮುಟ್ಟು ನೀರನ್ನು ಹಾಕಿಸುತ್ತಾರೆ. ಮೈನೆರೆದ ಮನೆಯನ್ನು ಸೂತಕದ ಮನೆಯೆಂದು ಪರಿಗಣಿಸುವದರಿಂದ ಇತರ ಸಂಬಂಧಿಗಳು ಸೂತಕ ಕಳೆಯುವವರೆಗೂ ವಿಶೇಷವಾದ ಪೂಜಾ ವಿಧಿ-ವಿಧಾನಗಳು ಈ ಮನೆಯಲ್ಲಿ ನಡೆಯುವಂತಿಲ್ಲ.

ಹುಡುಗಿಯ ಮೈನೆರೆದ ಐದು ದಿನಕ್ಕೆ ಹುಡುಗಿ ಕುಳಿತ ಮೂಲೆಯನ್ನು ಆ ಹುಡುಗಿಯ ಕೈಯಿಂದಲೇ ಸಗಣಿಯಿಂದ ಸಾರಿಸಿ, ನಂತರ ಹುಡುಗಿಯನ್ನು ದೇವರ ಮನೆಗೆ ಕರೆದುಕೊಂಡು ಹೋಗಿ ಮನೆ ದೇವತೆಗೆ ಪೂಜೆ ಮಾಡಿಸುತ್ತಾರೆ. ಈ ಎಲ್ಲ ಕ್ರಿಯೆಗಳ ನಂತರ ಹುಡುಗಿಗೆ ಧಾನ್ಯ, ಚಿಗಳಿ ಮತ್ತು ಫಲ ತಾಂಬೂಲಗಳನ್ನು ಐದು ಜನ ಮುತ್ತೈದೆಯರು ಉಡಿ ತುಂಬುತ್ತಾರೆ. ಐದನೇ ದಿನದಿಂದ ಹನ್ನೊಂದು ದಿನದವರೆಗೂ ಅರಶಿಣದ ನೀರನ್ನು ಕಡ್ಡಾಯ ವಾಗಿ ಹಾಕುತ್ತಾರೆ. ಈ ರೀತಿಯಲ್ಲಿ ನೀರು ಹಾಕುವಾಗ ಬಂಧು ಬಳಗವೆಲ್ಲಾ ಸೇರಿ ಸಡಗರ ಸಂಭ್ರಮವನ್ನು ಆಚರಿಸಿ ಬಂದಂಥಹ ಬೀಗರಿಗೆಲ್ಲಾ ಸಿಹಿ ಊಟವನ್ನು ಹಾಕುತ್ತಾರೆ. ಹುಟ್ಟು ಸಾವಿನ ಕಾರ್ಯಗಳ ಹಾಗೆಯೇ ಋತುಮತಿ ಕಾರ್ಯವು  ಒಂದು ಮುಖ್ಯ ಕಾರ್ಯವಾಗಿದೆ.

## ಮದುವೆಯ ನಿರ್ಬಂಧಗಳು

ಹಕ್ಕಿಪಿಕ್ಕಿಯರಲ್ಲಿ ಮದುವೆಗಳಿಂದ ಗಂಡಿನ ಕಡೆಯವರಿಗಿಂತಲೂ ಹೆಣ್ಣಿನ ಕಡೆಯವರಿಗೇ ಲಾಭ ಹೆಚ್ಚು ಇದೆ. ಗಂಡು ವಧುದಕ್ಷಿಣೆ ಕೊಟ್ಟು ನಂತರ ಮದುವೆಯಾಗಬೇಕಿರುವದರಿಂದ ಹೆಣ್ಣುಗಳಿಗೆ ಬೇಡಿಕೆ ಹೆಚ್ಚು. ಒಂದು ಮದುವೆಯಿಂದ ಹೆಣ್ಣಿನ ಕಡೆಯವರಿಗೆ ನಾಲ್ಕೈದು ಸೀರೆ, ಸಾವಿರಾರು ರೂಪಾಯಿ, ಹಣ, ಶರಾಬು ಹಾಗೂ ಬ್ರಾಂಧಿಯ ಮಜಾ ಉಡಾಯಿಸಲು ಅವಕಾಶವಿರುವದರಿಂದ ಇವರ ಮದುವೆಗಳಲ್ಲಿ ವಿಶೇಷತೆ ಇದೆ. ಅಲ್ಲದೇ ಯಾರಾದರೂ ಮದುವೆಯಾದ ಹೆಣ್ಣನ್ನು ತನ್ನ ಗಂಡ ಮನೆಯಿಂದ ತವರಿಗೆ ಓಡಿಸಿದರೆ, ಆ ಬಗ್ಗೆ ಆ ಹೆಣ್ಣಿನ ಬಗ್ಗೆ ತಲೆಯೇನು ಕೆಡಿಸಿಕೊಳ್ಳುವುದಿಲ್ಲ. ಕಾರಣ ಆ ಹೆಣ್ಣಿಗೆ ಇನ್ನೊಂದು ಮದುವೆ ಮಾಡಲು ಅವಕಾಶವಿರುವುದರಿಂದ, ಬೇರೆ ಮದುವೆ ಮಾಡುವ ಕಡೆಗೂ ಯೋಚಿಸುತ್ತಿರುತ್ತಾರೆ. ಮದುವೆಯಾದ ಮೇಲೆ ಅತ್ತೆ ಮಾವಂದಿರಿಗೆ ಅಳಿಯನಾದವನು ಸರಿಯಾಗಿ ಹೋಟೆಲ್‌ಗಳಲ್ಲಿ ತಿನ್ನಿಸದಿದ್ದರೆ ಅಂಥವನ್ನಿಂದ ತಮ್ಮ ಮಗಳನ್ನು ಕಿತ್ತುಕೊಳ್ಳುತ್ತಾರೆ. ಅವನಿಗೆ ಪುನಃ ಹೆಂಡತಿ ಬೇಕಾದರೆ ಅವನು ಪುನಃ ಅತ್ತೆ ಮಾವ ಅವರಿಗೆ ಚೆನ್ನಾಗಿ ಕುಡಿಸಿ, ತಿನ್ನಿಸಿ, ಹಣಕೊಟ್ಟು ಹೆಂಡತಿಯನ್ನು ಕರೆದುಕೊಂಡು ಹೋಗಬೇಕಾಗುತ್ತದೆ. ಇದಕ್ಕೆ ವಿರುದ್ಧವಾಗಿ ಒಬ್ಬ ಗಂಡು ತಂದೆ ತಾಯಿಗಳನ್ನು ಸರಿಯಾಗಿ ಊಟಕ್ಕೆ ಹಾಕಿ ಸಾಕಿದರೆ ಆತನಿಗೆ ನಾಲ್ಕಾದರು ಹೆಚ್ಚಿನ ಮದುವೆಗಳನ್ನು ಮಾಡುತ್ತಿದ್ದರು. ಈಗ ಅದು ಕಡಿಮೆಯಾಗಿ. ಇದಕ್ಕೆ ಒಪ್ಪದಿದ್ದರೆ ಹುಡುಗಿಯ ತಂದೆ ತಾಯಿಗಳು ಅವಳು ಸತ್ತ ಮೇಲೆ ಅವಳ ಹೆಣವನ್ನು ನಿಮ್ಮ ಕೈಲಿ ಕೊಡುವದಿಲ್ಲ ಎಂದು ಹೆದರಿಸುತ್ತಿದ್ದರು. ಒಬ್ಬ ಅಳಿಯ ಹೆಣ್ಣನ್ನು (ತನ್ನ ಹೆಂಡತಿಯನ್ನು) ಉದಾಸೀನ ಮಾಡಿದರೆ ಅದರ ಬಗ್ಗೆ ಹೆಚ್ಚು ಚಿಂತೆಯನ್ನಾಗಲಿ ಅಥವಾ ಅವರನ್ನು ಒಂದು ಮಾಡುವ ಬಗ್ಗೆಯಾಗಲಿ ಕುಲಸ್ಥರು ತಲೆಕೆಡಿಸಿಕೊಳ್ಳುವುದಿಲ್ಲ. ಹಕ್ಕಿಪಿಕ್ಕಿಯರಲ್ಲಿಯು ಪಾಶ್ಚಾತ್ಯರಂತೆ ತಮ್ಮ ವೈವಾಹಿಕ ಜೀವನವನ್ನು ಬಲುಬೇಗ ಶಿಥಿಲಗೊಳಿಸಿಕೊಳ್ಳುತ್ತಾರೆಂದರೂ ಅದು ಅತಿಶಯೋಕ್ತಿ ಏನು ಆಗದು.

ಇತರೇ ಜಾತಿಗಳಲ್ಲಿ ಇರುವಂತೆ ಹಕ್ಕಿಪಿಕ್ಕಿಯರಲ್ಲಿಯೂ ಅನೇಕ ವಿವಾಹ ನಿರ್ಬಂಧಗಳಿವೆ. ಆ ನಿರ್ಬಂಧಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

೧. ಅಕ್ಕನ ಮಗನಿಗೆ ಅಣ್ಣನ ಮಗಳನ್ನು ಮದುವೆ ಮಾಡುವ ಪದ್ಧತಿ ಇತ್ತೀಚಿಗೆ ಜಾರಿಯಲ್ಲಿದೆ.

೨. ಪವಾರ್ ಗಂಡಿಗೂ ಕಾಳಿವಾಳೋ ಹೆಣ್ಣಿಗೂ ಮದುವೆ ಮಾಡಬಹುದಾಗಿದೆ.

೩. ಗುಜರಾತೋ ಗಂಡಿಗೂ ಮೇವಾಡೋ ಹೆಣ್ಣಿಗೂ ಮದುವೆ ಮಾಡಬಹುದಾಗಿದೆ.

೪. ಪವಾರ್, ಮೇವಾಡೋ ಮತ್ತು ಗುಜರಾತ್ಯೋ ಗಂಡುಗಳಿಗೆ ಕಾಳಿವಾಳೋ ಹೆಣ್ಣಿಗೂ ಮದುವೆ ಮಾಡಬಹುದಾಗಿದೆ.

೫. ಕಾಳಿವಾಳೋ ಗಂಡಿಗೂ ಗುಜರಾತ್ಯೋ ಹೆಣ್ಣಿಗೂ ಮದುವೆ ಮಾಡಬಹುದಾಗಿದೆ.

೬. ಗುಜರಾತ್ಯೋ ಗಂಡಿಗೆ ಕಾಳಿವಾಳೋ ಹೆಣ್ಣು ಮದುವೆ ಮಾಡಿಕೊಳ್ಳುವದಾದರೆ ಆ ಅತ್ತೆ ಮೇವಾಡಗೂ ಹಾಗೂ ಪವಾರ್‌ನಿಗೂ ಅತ್ತೆಯಾಗುತ್ತಾಳೆ.

೭. ಗುಜರಾತಿಗಳು ತಮ್ಮ ಒಳಪಂಗಡದಲ್ಲಿ ಮದುವೆಯಾಗುವಂತಿಲ್ಲ. ಆದರೆ ಅವರು ಕಾಳಿವಾಳೋ ಮತ್ತು ಮೇವಾಡೋಗಳ ಬೆಡಗುಗಳೊಂದಿಗೆ ಮದುವೆಯಾಗಬಹುದು. ಆದರೆ ಪವಾರ್‌ಗಳಲ್ಲಿ ಮದುವೆಯಾಗುವಂತಿಲ್ಲ. ಏಕೆಂದರೆ ಹಬ್ಬಗಳು ಒಂದೇ ಆಗುವ್ವದೇ ಕಾರಣ. ಗುಜರಾತ್ಯೋಗಳು ಇನ್ನುಳಿದ ಎರಡು ಗುಂಪುಗಳಲ್ಲಿ ಮದುವೆಯಾಗುತ್ತಾರೆ. ಆದರೆ ಇತ್ತೀಚಿನವರು ಸಂಬಂಧ ಬೆಳೆಸಲು ಮುಂದಾಗುತ್ತಿದ್ದಾರೆ. ಕಾಳಿವಾಳೋಗಳು ಉಳಿದ ಮೂರು ಪಂಗಡಗಳಲ್ಲಿ ಯಾರೊಂದಿಗಾದರೂ ಮದುವೆಯಾಗಬಹುದಾಗಿದೆ.

೮. ಒಂದೇ ಬಳಿ (Clan) ಗಳಲ್ಲಿ ರಕ್ತ ಸಂಬಂಧವಿರುವದರಿಂದ ಮದುವೆಯಾಗಲು ಬರುವದಿಲ್ಲ.

೯. ಹೆಣ್ಣು ಅನ್ಯ ಜಾತಿಯವನಿಗೆ ಮದುವೆ ಆಗುವಂತಿಲ್ಲ. ಆದರೆ ಕುಲದಲ್ಲಿ ಸೇರಿಸಿಕೊಳ್ಳುವುದಿಲ್ಲ.

೧೦. ಗಂಡು ಅನ್ಯ ಜಾತಿಯವಳಿಗೆ ಆಗಬಹುದು. ಏಕೆಂದರೆ ಹುಟ್ಟಿದ ಮಗು ತಂದೆಯ ರಕ್ತ ಹಂಚಿಕೊಂಡಿರುತ್ತದೆ.

ಇಲ್ಲಿ ಗಮನಿಸಬೇಕಾದ ಮುಖ್ಯ ವಿಷಯವೆಂದರೆ, ತಮ್ಮ ಬೆಡಗಿಗಿಂತ ಭಿನ್ನವಾದ ಬೆಡಗಿನ ಹೆಣ್ಣುಗಳನ್ನು ಮಾತ್ರ ಮದುವೆಯ ಹೆಣ್ಣುಗಳನ್ನಾಗಿ ಆರಿಸಿಕೊಳ್ಳುತ್ತಾರೆ. ಕಡ್ಡಾಯ ವಾಗಿ ಸ್ವ-ಗೋತ್ ವಿವಾಹಗಳು ಇವರಲ್ಲಿ ನಿಷಿದ್ಧ. ಅನ್ಯ ಬೆಡಗುಗಳೊಗಿನ ವಿವಾಹಗಳನ್ನು ಇವರು ಸ್ವಾಗತಿಸುತ್ತಾರೆ. ವಿವಾಹವಾಗುವುದು ಇಂತಹ ಒಂದು ಘಟಕಗಳಲ್ಲಿ ಮಾತ್ರ. ತನ್ನ ದಲ್ಲದ ಮಹಿಳೆಯೊಬ್ಬಳು ತನ್ನ ಸಮೂಹಕ್ಕೆ ಪ್ರವೇಶ ಪಡೆಯುತ್ತಾಳಲ್ಲ ಎಂಬ ಆತಂಕದಿಂದ ಇವರು ಅಂತರ್‌ಜಾತಿಯ ವಿವಾಹಗಳನ್ನು ವಿರೋಧಿಸುತ್ತಾರೆ. ಹೀಗಾಗಿ ಯಾವ್ವದೇ ಒಂದು ಬುಡಕಟ್ಟು ಸಮುದಾಯದಲ್ಲಿ ಮೊದಲಿಗೆ ಜಾತಿ ನಂತರ ಅವರ ಬೆಡಗು.

**ಶವಸಂಸ್ಕಾರ**

ಹಕ್ಕಿಪಿಕ್ಕಿಯವರಲ್ಲಿ ಶವಸಂಸ್ಕಾರವು ಅವರದೇ ಆದ ರೀತಿಯಲ್ಲಿ ಆಚರಿಸಲ್ಪಡುತ್ತದೆ. ಕೂಳು ಹಾಕುವಲ್ಲಿ ಯಾವುದೇ ಬದಲಾವಣೆ ಮಾಡುವುದಿಲ್ಲ. ಪಂಗಡದಲ್ಲಿ ಯಾವುದೇ ವ್ಯಕ್ತಿಗೆ ಸಾವು ಸಮೀಪಿಸಿದೆ ಎಂದು ಗೊತ್ತಾದಾಗ, ಆತನನ್ನು ಬಿಡಾರದಿಂದ ಹೊರತಂದು ತಲೆಯ ಬಳಿ ಶಿರಾಣೆ ತಂದೆಯಿಂದ ಬಂದ ತ್ರಾಂಗಡೂ ಅಥವಾ ಆತನೇ ಅಣ್ಣನಿಂದ ಪಡೆದ ತ್ರಾಂಗೊಡವನ್ನು ಇಡುತ್ತಾರೆ. ಹೀಗೆ ತ್ರಾಂಗಡೂ ಇಡಬೇಕಾದರೂ ನಿಯಮಗಳಿವೆ. ಸತ್ತ ಪ್ರತಿ ಗಂಡಸಿನ ಶಿರಾಣೆಗೂ ತ್ರಾಂಗಡೂ ಇಡುತ್ತಾರೆ. ಆದರೆ ಹೆಣ್ಣಾದವಳು ಗರತಿಯಾಗಿದ್ದರೆ ಮಾತ್ರ ತ್ರಾಂಗಡವನ್ನು ಶಿರಾಣೆಗೆ ಇಡುತ್ತಾರೆ. ಇಲ್ಲದಿದ್ದರೆ, ಆಕೆಯ ಹೆಣವನ್ನು ಒಂದು ರಾತ್ರಿಯಿಡೆ ಕಾಯುತ್ತಾರೆ. ಆದರೆ ಶಿರಾಣೆಗೆ ತ್ರಾಂಗಡೂ ಇಡುವುದಿಲ್ಲ. ಕೂಳನ್ನು ಹಾಕು ವಾಗಲೂ ತ್ರಾಂಗಡೂ ಒಯ್ಯುವುದಿಲ್ಲ. ಆಕೆಯ ಒಂಭತ್ತು ಕುಡಿಕೆ(ಕುಲ್ಕಿ)ಗಳನ್ನು ತರವಡ್ (ಚಿಕ್ಕ ಚಿಕ್ಕ ಹಳದಿ ಹೂ ಗೊಂಚಲ ಗಿಡ) ಎಂಬ ಗಿಡದ ಬಳಿ ಒಡೆಯುತ್ತಾರೆ. ಗರತಿ ಯಾದವಳು "ಗುರುಗಳ್ಳಿ"ಯಾಗಲು ಭಂಡಾರ್‍ಯ ಎತ್ತಿರಬೇಕಾಗುತ್ತದೆ.

**ಭಂಡಾರ್ಕು ಎತ್ತುವುದು:** ದೇವರಿಗೆ ಕಷ್ಟ ಸುಖಗಳಲ್ಲಿ ಗುಲಗಂಜಿ ಶಾಸ್ತ್ರದ ಮೂಲಕ ಕಣಿಯನ್ನ ಹಿರಿಯರ ಮುಖಾಂತರ, ಎದುರು ಕೇಳುತ್ತಾರೆ. ದೇವರ ಹಬ್ಬ ಮಾಡಬೇಕೆಂದು ಹೇಳಿದರೆ ಹಬ್ಬ ಆಚರಿಸುತ್ತಾರೆ. ಈ ಆಚರಣೆಯ ಕೊನೆಯ ದಿನದಲ್ಲಿ, ಅಳಿದುಳಿದ ಎಲ್ಲ ಅವಶೇಷಗಳನ್ನು ಪತ್ತರ್ (ಹರಿವಾಣ) ದಲ್ಲಿ ತುಂಬಿ, ವೀಳ್ಯದೆಲೆ ಕೂರಿಸಿ, ತೆಂಗಿನಕಾಯಿ ಒಡೆದು, ಲೋಬಾನ, ಕರ್ಪೂರಗಳಿಂದ ಪೂಜಿಸಿ, ಹಬ್ಬ ಆಚರಿಸಿದಂಥವನ ಇಳಿವಯಸ್ಸಿನ ಮಡದಿಗೆ ಕೊಡುತ್ತಾರೆ. ಅಥವಾ ತಂದೆಯ ಕಾಲವಾದ ನಂತರ ಗಂಡು ಮಕ್ಕಳೆಲ್ಲ ಸೇರಿ ಆಚರಿಸಿದಂಥದ್ದಾದರೆ, ತಾಯಿಗೆ ಈ ಭಂಡಾರ್ಕುವನ್ನು ಕೊಡುತ್ತಾರೆ. ಹಬ್ಬದವಶೇಷಗಳನ್ನು ತುಂಬಿದ ಹರಿವಾಣವನ್ನು "ಭಂಡಾರ್ಕು" ಅನ್ನುತ್ತಾರೆ. ಇದಕ್ಕಿಂತ ಮೊದಲು ಆಕೆಯಿಂದ ಐದು ರೂಪಾಯಿಯಂತೆ (ಪಾಂಚ್ ಫದ್ಯಾ) ಹಿರಿಯರು ದಂಡ ಪಡೆಯುತ್ತಾರೆ. ಅಲ್ಲಿಗೆ ಆಕೆಯು ಕೋಪದಿಂದ ಬೇರೆಯವರಿಗೆ ಬಯ್ದಿರಬಹುದಾದಂತಹ ದುರ್ನಡತೆಗಳಿಗೆ ಕ್ಷಮೆ ಯಿತ್ತಂತಾಗುತ್ತದೆ. ಈ ಭಂಡಾರ್ಕು ಎತ್ತಿಕೊಳ್ಳುವವಳ ನಡತೆಯೂ ಕೂಡ ಎಲ್ಲರೂ ಹೊಗಳು ವಂತೆ ಇರಬೇಕು. ಹೀಗೆ ತಲೆತುಂಬ ಸೆರಗು ಹೊದ್ದ ಆಕೆ ಭಂಡಾರ್ಕುವನ್ನು ತಲೆಯ ಮೇಲೆ ಹೊತ್ತುಕೊಂಡು ಒಂದು ನಿರ್ಧರಿತ ಸ್ಥಳದಲ್ಲಿರಿಸಿ ಪೂಜಿಸಿ, ಗುಲಗಂಜಿ ಶಾಸ್ತ್ರ (ವಧಾವ) ನೋಡಿ ಬರುತ್ತಾರೆ. ಹೀಗೆ ಭಂಡಾರ್ಕು ಎತ್ತುವುದರ ಮೂಲಕ 'ಗುರುಗಳ್ಳಿ' ಎನಿಸಿಕೊಂಡವಳು ಸತ್ತಾಗ, ಆಕೆಯ ಶಿರಾಣೆಗೆ ಯಾವ ನಿರ್ಬಂಧವೂ ಇಲ್ಲದೆ ದೇವರಿರುವ ತ್ರಾಂಗಡೂವನ್ನು ಇಡುತ್ತಾರೆ. ಈ ವ್ಯವಸ್ಥೆ ಪಾಟ್‌ಗುರಿಗೆ (ಕೂಡಿಕೊಂಡವಳು, ಸೀರುಡಿಕೆ) ಇರುವುದಿಲ್ಲ. ಮೊದಲ ಗಂಡನ ಮನೆಯಲ್ಲಿದ್ದು, ಚಾರಿತ್ರ್ಯಹೀನಳು ಅಲ್ಲದಿದ್ದರೆ ಲಭಿಸುತ್ತಿತ್ತು. ಅಂಥವಳ ಶಿರಾಣೆಗೆ ತ್ರಾಂಗಡೂ ಬದಲಿಗೆ ಮಗರಿ, ಪಾಶಬಲೆಗಳು ಸಹಾಯಕ ಆಗುವುದರಿಂದ, ಇವುಗಳನ್ನು ದೇವರೆಂದು ಪೂಜಿಸುತ್ತಾರೆ. ಅಲ್ಲದೆ ತ್ರಾಂಗಡೂವನ್ನು ಇವುಗಳ ಮೇಲಿಡುವುದು ಪದ್ಧತಿ.ಮತ್ತು ಸಂಪ್ರದಾಯವಾಗಿದೆ. ಹಿಂದಿನ ಜನರಲ್ಲಿ ಶವಸಂಸ್ಕಾರ ತುಂಬಾ ಸರಳವಾಗಿತ್ತು. ಸತ್ತ ವ್ಯಕ್ತಿಯನ್ನು ಒಂದು ದಪ್ಪನಾದ ಕೋಲು ಅಥವಾ ಬಿದಿರಿನ ಬೊಂಬಿಗೆ ಮೂರ್ನಾಲ್ಕು ಕಡೆ ಚೋಕಾಲಿಯಂತೆ ಹಗ್ಗದಿಂದ ಹೆಣವನ್ನು ಕಟ್ಟಿ, ಇಬ್ಬರೇ ಒಯ್ಯುತ್ತಿದ್ದರು. ಅವರು ಖಾಯಿಲೆಯಿಂದ ನರಳಿ ಸತ್ತರೆ ಮುಟ್ಟಲಿಕ್ಕೂ ಹೆದರುತ್ತಿದ್ದರು. ಕೆಲವರಂತೂ ಚಾಪೆಯಲ್ಲಿ ಸುತ್ತಿ ಹಾಗೇ ಬಿಟ್ಟು ಹೊರಟು ನಡೆದುದಿದೆ. ಅವರ ಭಾಷೆಯಲ್ಲಿ ಹೇಳಬೇಕೆಂದರೆ "ಸಾಮೀ... ಆವಗೆಲ್ಲ ಇಂಪ್ಲೆಂಟ್ ರೋಗ ಬಂದ್ಬಿಟ್ರೆ, ಗುಡ್ಲಲ್ಲಿ ಹ್ಯಾಂಗ್ ಮನೀಕ್ಕೊತ್ತಾರೆ ನೋಡು, ಹಾಂಗೇ... ತೀರೋಯ್ತಿದ್ರು, ಯಾವಾಗ ಖಾಯ್ಲಿ ಬರ್‍ತಾವಂತ ಗೊತ್ತಾಯ್ತಿರ್‍ಲಿಲ್ಲಿ ನಮಗೂ ಆ ಖಾಯಿಲೆ ಬರಬಯ್ದೂಂತೆ" ಮುಟ್ತಾ ಇರ್‍ಲಿಲ್ಲ. ಹಾಂಗೊ ಚಾಪೇಲಿ ಸುತ್ತಿಟ್ಟು, ಗುಡ್ಲೆತ್ತಿಕೊಂಡು ಹೋಯ್ತಿದ್ವಿ" ಅನ್ನುತ್ತಾರೆ. ಇಂಪ್ಲೆಂಟ್ ಖಾಯಿಲೆಗೆ ಈಗಿನವರು ಪಿಳೇಕಮ್ಮನ ರೋಗ, ಪ್ಲೇಗಮ್ಮನ ರೋಗ, ಇಲಿ ಜ್ವರ ಅಂತಲೂ, ಚಾಪೆರುಳಿ ರೋಗ ಅಂತಲೂ ಕರೆಯುತ್ತಾರೆ. ಇತ್ತೀಚಿನವರು ಒಂದು ಕೋಲಿನಲ್ಲೆತ್ತಿಕೊಂಡು ಹೋಗುವುದನ್ನು ಬಿಟ್ಟು, ನಾಲ್ಕು ಜನ ಹೆಣದ ಚಟ್ಟುವನ್ನು ಹೋರಿತ್ತಾರೆ. ಸುಟ್ಟರೆ ದೇವತೆಗಳು ಮುನಿದು, ಆತನಿಗೆ ಮೋಕ್ಷ ದೊರೆಯುವುದಿಲ್ಲವೆಂದು ಹೂಳುವುದನ್ನೇ

ಪದ್ಧತಿಯನ್ನಾಗಿ ಮಾಡಿಕೊಂಡಿದ್ದಾರೆ. ಮಡಿದ ವ್ಯಕ್ತಿಯ ಅಳತೆಯಂತೆ ಗುಂಡಿಯನ್ನು ಮೊದಲೇ ತೋಡುತ್ತಾರೆ. ಅಥವಾ ಶವವನ್ನು ಹೊತ್ತು ತಂದು ನಿರ್ಧರಿತ ಸ್ಥಳದಲ್ಲಿರಿಸಿ ಗುಂಡಿತೋಡುತ್ತಾರೆ. ಮೊದಲು ಚಟ್ಟಕ್ಕೆ ಕೈಯಿಟ್ಟು, ಹೆಗಲು ಕೊಡುವವರಿಗೆ 'ಖಾಂದ್ಯಾ' ಅನ್ನುತ್ತಾರೆ. ಆತ ಹಿರಿಮಗನಾಗಿದ್ದು ಖರ್ಚು ವೆಚ್ಚಗಳನ್ನು ಭರಿಸುವಂತವನಾಗಿರಬೇಕು. ಇಲ್ಲವಾದರೆ ಸಹೋದರರೊಂದಿಗೆ ಸಮಜಾಯಿಸಿ ಖರ್ಚನ್ನು ಹಂಚಿಕೊಳ್ಳುತ್ತಾನೆ. ಆತ ದುರ್ಬಲನಾಗಿ ಖರ್ಚು ಭರಿಸಲಾಗದವನಾದರೆ ಉಳಿದ ಸಹೋದರರಲ್ಲಿ 'ಖಾಂದ್ಯಾ' ಆಗುವವನು ಮುಂದಾಗುತ್ತಾನೆ. ಆಗ ಹಿರಿಮಗನಿಗೆ ಸಮಾಜದಲ್ಲಿ ಸಿಗುತ್ತಿದ್ದ ಬೆಲೆ ಆತನಿಗೆ ಸಿಗುತ್ತದೆ. ಸಮಾಜ ಹಿರಿಮಗನನ್ನು ವ್ಯಂಗ್ಯ ದೃಷ್ಟಿಯಿಂದ ಕಾಣುತ್ತದೆ. ಇದು ಆತನಿಗೆ ಅವಮಾನ ತಂದುಕೊಡುವ ವಿಷಯವೇ ಸರಿ. ಶವಕ್ಕೆ ಸ್ನಾನ ಮಾಡಿಸಿ, ಹೊಸಬಿಳಿಬಟ್ಟೆಯಿಂದ ಹಾಸಿ, ಹೊದಿಸಿ ಮಲಗಿಸುತ್ತಾರೆ. ಮಕ್ಕಳು, ಗೋತ್ರಿಗಳು (ಆಪ್ತ ಬಾಂದವರು ರಕ್ತ ಸಂಬಂಧಿ) ಪೂಜಿಸುತ್ತಾರೆ. ಹಿಂದೆಲ್ಲ ಬರಿಯ ಗಂಡಸರೇ ಹೆಣ ಹೊತ್ತು ಹೂಳಲು ಜೊತೆಗೆ ಹೋಗುತ್ತಿದ್ದರು. ಈಗ ಮಹಿಳೆಯರೂ ಕೂಡ ಜೊತೆಗೆ ಹೋಗುವುದು ವಿಶೇಷ ಅನ್ನಬಹುದು. ಖಾಂದ್ಯಾ ಆದವನು, ಹೆಣ ಎತ್ತುವಾಗ ಮೂರುದಿನ ಅಥವಾ ಐದು ದಿನಕ್ಕೆ ಕೂಳು ಹಾಕುವುದಾಗಿ ಹೇಳುತ್ತಾ ತಲೆಯಬಳಿ, ಕಾಲಿನ ಬಳಿಯಿರುವ ಚಟ್ಟದ ಹೆಗಲು ಕೋಲನ್ನು ಮೂರು ಮೂರು ಸಲ ಇಡುತ್ತಾನೆ. ನಂತರದಲ್ಲಿ ಎಷ್ಟೇ ಜನರು ಹೆಗಲು ಕೊಟ್ಟರೂ ಅವರು ಖಾಂದ್ಯಾ ಆಗಲಾರದು. ಹೀಗೆ ಶವದ ಕಾಲು ಮುಂದೆ ಮಾಡಿ ಸಾಗುತ್ತಾರೆ. ನಿರ್ಧರಿತ ಸ್ಥಳದಲ್ಲಿ ತೋಡಿದ್ದ ಗುಂಡಿಯಲ್ಲಿ ಸರಿಯಾಗಿ ಶವ ಅಂಗಾತವಾಗಿ ಹಿಡಿಸಿದರೆ, ಆತನಿಗೆ ಯಾವ ಆಸೆಗಳು ಬಾರಿಯಾಗಿ ಉಳಿಯದೆ ಪೂರೈಸಿದೆ ಎಂದು ಹರ್ಷಿಸುತ್ತಾರೆ. ಮಕ್ಕಳು ಇತರರು ಹಿಡಿ ಮಣ್ಣು ಹಾಕಿದ ನಂತರ, ಗೋರಿ ಸಿದ್ಧವಾಗಿದೆ. ಹಣ್ಣು ಹುರಿಗಡಲೆ ಮಂಡಕ್ಕಿ ಹಾಗೂ ಕೆಲವು ತಿಂಡಿ ಪದಾರ್ಥಗಳನ್ನು ಗೋರಿಯ ಮೇಲೇರಿಸುತ್ತಾರೆ. ಶವವನ್ನು ಹೊತ್ತು ತಂದ ಚಟ್ಟವನ್ನು ಅಥವಾ ಕೋಲನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಹಾಕುತ್ತಾರೆ. ಇದರಿಂದ ಪ್ರೇತಾತ್ಮಕ್ಕೆ ಕಟ್ಟು ಹಾಕಿದಂತಾಗುತ್ತದೆಂದು ನಂಬುತ್ತಾರೆ. ಖಾಂದ್ಯಾ, ಮಕ್ಕಳು, ರಕ್ತಸಂಬಂಧಿಗಳು ಗೋರಿಯ ಕಾಲಬಳಿ ನೆಟ್ಟ ಕಲ್ಲಿಗೆ ಪೂಜಿಸಿ ನಮಸ್ಕರಿಸಿದ ನಂತರ, ಹೆಂಡತಿಯ ಕಾಲುಂಗರ, ಹೂ, ಕರಿಮಣಿ, ಮೂಗಿನ ನತ್ತುಗಳನ್ನು ಕಿತ್ತು ಗೋರಿಯ ಬಳಿಯಿಡುತ್ತಾ ಕುಂಕುಮವನ್ನು ಸಿಂದೂರ ಅಳಿಸಿ ಹಾಕುತ್ತಾರೆ. ಎಲ್ಲರೂ ಅತ್ತು ಕರೆದು ಮನೆಗೆ ಹಿಂದಿರುಗಿ ಸಾರಾಯಿ ಅಥವಾ ಸೇಂದಿಯಲ್ಲಿ ಕೈ ನೆನೆಸುತ್ತಾರೆ. ಅಥವಾ ತೊಳೆಯುತ್ತಾರೆ. ಹಾಗೂ ಹಲ್ಲಿನಲ್ಲಿ ಒಂದು ಚೂರು ಕಡಿದು ಬಿಸಾಡುತ್ತಾರೆ. ಇದರಿಂದ ಚಿಕ್ಕಮಕ್ಕಳ ಮನೆಗೆ ಸೂತಕದಿಂದಾಗಿ ಮಕ್ಕಳು ಕಿರಿಕಿರಿ ಮಾಡುವುದು ತಪ್ಪುತ್ತದೆಂದು ಭಾವಿಸುತ್ತಾರೆ. ಸ್ವಲ್ಪ ದೂರದಲ್ಲಿ ಹಿರಿಯರಿಗೆಲ್ಲ ಸಾರಾಯಿ, ಹೆಂಡ ಸೇಂದಿ ಕುಡಿಸಿ ತೃಪ್ತಿ ಪಡಿಸಬೇಕು. ಈ ಖರ್ಚು ಸತ್ತವರ ಮನೆಯವರೇ ವಹಿಸಿಕೊಳ್ಳಬೇಕು. ಮಾರನೇ ದಿನ ಪೇಟೆಗೆ ಹೋಗಿ, ಒಂಭತ್ತು ಚಿಕ್ಕ ಚಿಕ್ಕ ನುಗ್ಗಿನ ಕುಡಿಕೆ, ದಾರ, ಹಣ್ಣು, ತರಕಾರಿ, ಸೊಪ್ಪು, ಒಟ್ಟಿನಲ್ಲಿ ಯಾವುದನ್ನು ಬಿಡದೆ ಖರೀದಿಸಬೇಕಾಗುತ್ತದೆ. ಹೆಂಗಸು ಜೊತೆಗೆ ಹೋದರೆ ಮಾಡಿಸುವಂತಿಲ್ಲ. ಅವನ್ನೆಲ್ಲ ತಂದು

ತ್ರಾಂಗಡೊದ ಎದಿರು ಇಟ್ಟು ರಾತ್ರಿಯಿಡಿ ಜಾಗರಣೆ ಮಾಡುತ್ತಾರೆ. ಈ ಕಾರ್ಯಕ್ಕಾಗಿ ಖರೀದಿಸಿದ ಯಾವ ವಸ್ತುವನ್ನು ಮನೆಯೊಳಗೆ ಒಯ್ಯುವುದಿಲ್ಲ. ಹಿರಿಯರು, ಸತ್ತವನ ಕಹಿ ಸಿಹಿ ಘಟನೆಗಳನ್ನು ನೆನೆಸುತ್ತಲೋ, ಕಥೆ ಪುರಾಣಗಳನ್ನು ಹೇಳುತ್ತಲೋ ಬೆಂಕಿಯೊಡ್ಡಿಕೊಂಡು ಸುತ್ತಲೂ ಕುಳಿತು ಕಾಯುತ್ತಾರೆ.ಮರುದಿನ ಬೆಳಿಗ್ಗೆದೂರದಲ್ಲಿ ಪ್ರತ್ಯೇಕ ಡೇರೆ ಹಾಕಿ, ನೀರು ಚಿಮುಕಿಸಿ, ಮೂರು ಕಲ್ಲನ್ನಿಟ್ಟು ತ್ರಾಂಗಡೂವನ್ನಿಡುತ್ತಾರೆ. ತ್ರಾಂಗಡೂದೆದರು ಡೇರೆಯ ಗೂಟಕ್ಕೆ ಸ್ವಲ್ಪ ದೂರದಲ್ಲಿ ಸಣ್ಣಸಣ್ಣ ಗುಂಡಿ ಮಾಡಿ ಚೌಕಾಕಾರದಲ್ಲಿ ನಾಲ್ಕು ಕುಡಿಕೆಗಳಲ್ಲಿ ನೀರು ತುಂಬಿ ಹಸಿ ದಾರದಿಂದ ಒಂಭತ್ತು ಸುತ್ತು ಸುತ್ತುತ್ತಾರೆ. ಉಳಿದ ದಾರವನ್ನು ಕುಡಿಕೆ ಯೊಳಗೇ ಹಾಕುತ್ತಾರೆ. ಅದರ ಮುಂದೆ ಬೆಂಕಿಕೆಂಡದ ಗುಡ್ಡೆಯನ್ನು ಒಲೆಯಿಂದ ತಂದು ಇಡುತ್ತಾರೆ. ಅಥವಾ ಅಲ್ಲೇ ಬೆಂಕಿಯೊಡ್ಡಿರುತ್ತಾರೆ. ಅಕ್ಕಿಹಿಟ್ಟು ಅಥವಾ ಗೋಧಿ ಹಿಟ್ಟಿನಿಂದ ಏಳು ರೊಟ್ಟಿಮಾಡಿ ಪತ್ತರ್‌ನಲ್ಲಿ ಹರಿವಾಣ ನಾಲ್ಕು ಮೂಲೆಗೆ ನಾಲ್ಕು ಮಧ್ಯ ಒಂದು ರೊಟ್ಟಿಯಿಟ್ಟು, ಇನ್ನೊಂದು ರೊಟ್ಟಿಯನ್ನು ಒಂದು ಕುಡಿಕೆ ಮೇಲೆ ಅನತಿ ದೂರದಲ್ಲಿ ಇಡುತ್ತಾರೆ. ಅನ್ನ ತರಕಾರಿಯ ಸಾಂಬಾರು ಬೇಯಿಸಿದ ಮೇಲೆ ಮೇವೊ ಹುರಿಗಡಲೆ, ಬೆಲ್ಲ, ಮಂಡಕ್ಕಿ ಕಲೆಸಿ ಪಾತ್ರೆಯಲ್ಲಿಟ್ಟುಕೊಳ್ಳಬೇಕು. ಕಾರಜ್ ಹಾಕುವುದು ಕೋಳಿ ಅಥವಾ ತಿಥಿಯ ಊಟ ನಂತರದ ತಯಾರಿ. ಮೊದಲು ಖಾಂದ್ಯ ಹೆಗಲಾದವನು ಆದ ಹಿರಿಮಗನು ಎಡಗೈಯನ್ನು ತೊಳೆದು ಸ್ವಲ್ಪ ಅನ್ನ ತೆಗೆದು, ಕಲೆಸಿದ ಮೇವೊ ಎತ್ತಿಕೊಂಡು ಬೆಂಕಿ ಮೇಲೆ, ರೊಟ್ಟಿ ಮೇಲೆ ಹಾಕಿ ಕೈತೊಳೆಯಬೇಕು. ನಂತರ ಬಲಗೈ ತೊಳೆದು ಸ್ವಲ್ಪ ಅನ್ನ ಎತ್ತಿ ಥಾಳ್ ಹರಿವಾಣ ಮೇಲೆ ಹಾಕಿ, ಮೇವೋ ಕೂಡ ಹಾಕಬೇಕು. ನಂತರ ಬೆಂಕಿಯಲ್ಲಿ ಹಾಕಿ ಕೈ ತೊಳೆದು ಎದ್ದು ಹೋಗಬೇಕು. ಪಾಣಿ ಪಿಡಾವಾನು ನೀರು ಕುಡಿಸುವುದು ಬೇವಿನ ಸೊಪ್ಪು, ಮಾವಿನ ಸೊಪ್ಪು, ಕರ್ಕಹುಲ್ಲುಗಳ ನಡುವೆ ತುಂಬಿದ ಕೊಡವಿರಿಸಿರುತ್ತಾರೆ. ಎರಡೂ ಕೈಗಳಲ್ಲಿ ಗರಿಕೆ ಹುಲ್ಲು ಸೊಪ್ಪುಗಳನ್ನು ಹಿಡಿದು, ಕೊಡದ ನೀರನ್ನು ಮೂರು ಸಲ ಹನಿಸಬೇಕು. ಹುಯ್ಯಬೇಕು. ಖಾಂದ್ಯ ಮೊದಲು ಈ ಥರ ಮಾಡಿದ ಮೇಲೆ ಗೋತ್ರಿಗಳು, ನೆಂಟರು ಮಾಡಬೇಕು. ಹೆಂಗಸರು ನೀರು ಕುಡಿಸುವಂತಿಲ್ಲ. ಮದುವೆಯಾಗದ ಹೆಣ್ಣು ನೀರು ಕುಡಿಸಬಹುದು. ಭ್ಯಾರ್‌ನೋ ಬೋರೊಡೊ ತಿಥಿಯ ಕುರಿ ಬಲಿ ಆರ್ಥಿಕವಾಗಿ ಅನುಕೂಲವಿದ್ದವರು ಬಹು ಬೇಗನೇ ಈ ಕಾರ್ಯವನ್ನು ಮುಗಿಸಿಬಿಡುತ್ತಾರೆ. ಅಥವಾ ಬೇರೆ ಊರಿಗೆ ವಲಸೆ ಹೋಗುವವರು ಸಾಲ ಸೂಲ ಮಾಡಿಯೇ ಕಾರ್ಯ ಜರುಗಿಸುತ್ತಾನೆ. ಅಥವಾ ತಾನೇ ದುಡಿದು ಕಾರ್ಯ ಜರುಗಿಸಬೇಕೆಂದುಕೊಂಡವನು ತಿಂಗಳು ಎರಡು ತಿಂಗಳ ನಂತರ ಕುಲಸ್ಥತನ್ನೆಲ್ಲ ಸೇರಿಸಿ ಮರ್ಯ್ಯಾವಾಳಾ ನೋಭಿ ಖಾವಾಳೋದಾದಾಜಿ ಸತ್ತವರದೂ ಕೂಳಿನ ಹವಿಸ್ಸನ್ನು ಖಾವಾಳೋ ತಿನ್ನುವವನು, ಸ್ವೀಕರಿಸುವವನು ದಾದಾಜಿ ಈಶ್ವರ ಅಲ್ಲದೆ ಜೀವ್ತಾನೊಭಿ ಖಾವಾಳೊ ದಾದಾಜಿ ಜೀವಂತವಾಗಿ ಹುಟ್ಟುವವರಿಗಾಗಿ ನಡೆಸೊ ಕಾರ್ಯದ ಹವಿಸ್ಸನ್ನು ಸ್ವೀಕರಿಸುವವನು ದಾದಾಜಿಯೇ ಆಗಿದ್ದಾನೆ. ಈ ಕಾರ್ಯವನ್ನು ಪ್ರತಿಯೊಬ್ಬ ಹಿರಿಯ ಸತ್ತಾಗಲೂ, ಕಿರಿಯ ಸತ್ತಾಗಲೂ ಆಚರಿಸಲೇಬೇಕಾಗುತ್ತದೆ. ಈ ಕಾರ್ಯಕ್ಕೆ ಬೋರಡೊ ಕುರಿಹೋತ ತಂದು,

ಪ್ರತ್ಯೇಕ ಡೇರೆಹಾಕಿ, ಸಗಣಿಯಿಂದ ಸಾರಿಸಿದ ನೆಲದ ಮೇಲೆ ತ್ರಾಂಗಡೂ ಇರಿಸಿ, ಯಾವ ಭವನ್ ದೇವರು ಮೈಮೇಲೆ ಬರುವುದು ಇಲ್ಲದೆ, ನೇರವಾಗಿ ದಾದಾಜಿಯ ಹೆಸರನ್ನು ಹೇಳಿ, ಕುರಿಬಲಿ ನೀಡಿ ಅನ್ನಬೇಯಿಸಿ ಗೋತದವರಿಗೆಲ್ಲ ಹಾಗೂ ಇತರರಿಗೂ ಹಂಚುತ್ತಾರೆ. ಜೊತೆಗೆ ಕುಡಿತ ಇರುತ್ತದೆ. ಅಲ್ಲಿಗೆ ಮರ್‍ಯಾಮುದ್ಯಾನು ಋಣ್ಯಾ ಕಂಟಕಾ ಛಿಟ್ಯು ಸತ್ತವರ ಋಣ ತೀರಿತು ಅನ್ನುತ್ತಾರೆ. ಕಾರಜ್ ಕೂಳು, ತಿಥಿಯೂಟ ಮತ್ತು ಛ್ಯಾರನೋ ಬೋಕಡೊ ಕಾರ್ಯಗಳನ್ನು ವ್ಯಕ್ತಿ ಎಲ್ಲೇ ಸಾಯಲಿ, ಆಪ್ತಬಂಧುಗಳನ್ನು ಗೋತ್ರಿ ಸೇರಿಸಿಯೇ ಜರುಗಿಸ ಬೇಕಾಗುತ್ತದೆ. ಇಲ್ಲವಾದರೆ.ಬೇಮರ್ಷಿ ಹೂಕ್ಕೆ ಬೇಕಾಬಿಟ್ಟಿ ಕೂಳು ಬೇಯಿಸಿ ಹಾಕಿದ ಎಂತಲೋ ಅಥವಾ ಯಾವ ಗೋತ್ರಿಗಳನ್ನು ಕರೆದು, ಅವರೆದುರಿಗೆ ಕೂಳು ಹಾಕಿದೀ ಅಂತ ನ್ಯಾಯ ಪಂಚಾಯ್ತಿ ಮಾಡುವದಿದೆ.ನಂತರ ಎಲ್ಲರೂ ಸಾಂಬಾರನ್ನು ಪತ್ತರ ಮೇಲೆರಿಸುತ್ತಾರೆ. ಖಾಂದ್ಯ ಆದವನು ಒಂದು ಕುಡಿಕೆಯನ್ನೆತ್ತಿಕೊಂಡು, ದೂರದಲ್ಲಿ ಒಂದು ಕಲ್ಲಿನ ಬಳಿ ಅಡ್ಡಲಾಗಿರಿಸಿದ್ದ ಖಾಲಿ ಕುಡಿಕೆಯ ಬಳಿ ನಡೆದು ಎಲ್ಲವನ್ನು ಜೋರಾಗಿ ಒಡೆಯುತ್ತಾನೆ. ನೀರು ತುಂಬಿದ ನಾಲ್ಕು ಕುಡಿಕೆಯನ್ನು ಹಾಗೇ ಇಡುತ್ತಾರೆ. ಅಲ್ಲಿಗೆ ಸತ್ತವರ ಋಣ ತೀರಿತೆಂದು ಭಾವಿಸುತ್ತಾರೆ. ಈ ಪ್ರಕ್ರಿಯೆಗೆ ಕುಲ್ಕಿ ಫೋಡಾನು ಅಂದರೆ ಕುಡಿಕೆ ಒಡೆಯುವುದು ಅನ್ನುತ್ತಾರೆ. ನಂತರ ಎಲ್ಲರಿಗೂ ಪತ್ತರಿನ ಪ್ರಸಾದ ವಿನಿಯೋಗವಾಗುತ್ತದೆ. ಹಾಗೇ ಕೂಳಿನ ಊಟ ಕುಡಿತ ನಡೆ ಯುತ್ತದೆ. ಊಟಕ್ಕೆ ಮೊದಲು ಒಂದು ಬೆಲ್ಲದ ಚೂರನ್ನು ಇಟ್ಟು ಪ್ರತಿಯೊಬ್ಬರೂ ಒಂದೊಂದು ತುತ್ತನ್ನು ಇಡುತ್ತಾರೆ. ಅದು ನೊಣರಾಜನಿಗೆ ಅರ್ಪಿತವಾಗುತ್ತದೆ. ನೊಣಗಳು ಬಂದರೂ ಬೆಲ್ಲದ ಮೇಲೆ ಕೂರುತ್ತವೆಯೇ ವಿನಃ ಕಾರ್ಯದಲ್ಲಿ ಬಾಧೆಯೊಡ್ಡಲಾರವೆಂಬ ಭಾವನೆ. ನಂತರ ಹಿರಿಯನಾದವನು ಎಲ್ಲರಿಗೂ ಉಣ್ಣಲು ಹೇಳುತ್ತಾನೆ. ಗೋತ್ರಿಗಳಿಗೆಲ್ಲ ಊಟಕ್ಕೆ ಮೊದಲು ಹೆಂಡ ಮತ್ತು ಸಾರಾಯಿಯ ಸೇವೆಯಾಗುತ್ತವೆ. ಇದೆಲ್ಲ ಖರ್ಚುಗಳಲ್ಲಿ ಸತ್ತವರ ಮನೆಯ ಮಗನೇ ವಹಿಸಿಕೊಳ್ಳಬೇಕಾಗುತ್ತದೆ. ಆತನ ಬಳಿ ಇಲ್ಲದಿದ್ದರೂ ಸಾಲ ಮಾಡಿ ಯಾದರೂ ಕಾರ್ಯವೆಸಗಬೇಕು. ಯಾರೂ ಆತನ ಮೇಲೆ ಕರುಣೆದೋರಿ ಸಹಾಯದ ಹಸ್ತ ಒಡ್ಡಲಾರರು. ಈ ಕಾರ್ಯ ಮುಗಿಯುವವರೆಗೂ ಗುಂಪಿನವರೊಂದಿಗೆ ಬೆರೆಯುವಂತಿಲ್ಲ. ಆ ಸೂತಕ ತಮಗೂ ಸುತ್ತುವದೆಂಬ ಭಯ. ಛ್ಯಾರ್ ನಿ ಕಢ್ಯೆ ದಾದಾಜಿಗಾಗಿ ತಿಥಿಯ ಕಜ್ಜಾಯ ಸಾವಿನ ನಂತರ ದಾದಾಜಿಯು ಈಶ್ವರ ಮುಕ್ತಿ ಕರುಣಿಸುವಂತೆ ಬೇಡಲು ಏಳು ಸಿಹಿ ಕಜ್ಜಾಯ ಖಿವಾಳಿ ಮಾಡಿ, ಪೂಜಿಸಿ, ಕುಟುಂಬದವರು ಮತ್ತೆ ಕೆಲವರಿಗೆ ಪ್ರಸಾದ ಹಂಚುತ್ತಾರೆ. ಇದು ಮೂರನೇ ದಿನಕ್ಕೆ ನಡೆವಂಥಾದ್ದು. ನಿವಾಲೋ ಪೋಚಾವಾನು ತುತ್ತು ಗೋರಿಗೆ ಏರಿಸುವುದು ಮಣ್ಣು ಮಾಡಿದ ಮರುದಿನ ಬೆಳಿಗ್ಗೆ ಯಾರೂ ಎದ್ದಿರದ ಸಮಯದಲ್ಲಿ ಒಂದು ರೊಟ್ಟಿಯನ್ನು ಹಿಟ್ಟಿನಿಂದ ಮಾಡಿ, ಉಪ್ಪು ಮತ್ತು ಮೆಣಸಿನ ಚಟ್ನಿ ಮಾಡಿ, ಅವೆರಡನ್ನು ಗೋರಿಯ ಎದೆಯ ಮೇಲೆ ಇಡುತ್ತಾರೆ. ಆಸೆಬುರುಕ ಆತ್ಮವಾದರೆ ಯಾವುದಾದರೂ ರೂಪದಲ್ಲಿ ಶಬ್ದ ಮಾಡುತ್ತದೆ. ಇಲ್ಲವೇ ಗಾಳಿಯ ರೂಪದಲ್ಲಿ ಮುಂದೆ ಮುಂದೆ ಹೋಗುತ್ತದೆನ್ನುತ್ತಾರೆ. ಆಸೆಯಿಲ್ಲದಿದ್ದರೆ, ಯಾವೊಂದು ಕುರುಹುಗಳೂ ಕಂಡು ಬರುವುದಿಲ್ಲ. ಅಂತಹವನನ್ನು

ಕೊಂಡಾಡುತ್ತಾರೆ. ಇಲ್ಲದಿದ್ದರೆ ಆತನು ಸೈತಾನನಾಗುವ ಸಂಭವ ಹೆಚ್ಚು ಕನಸಿನಲ್ಲಿ ಬರುವುದು, ಅಪಶಕುನಗಳಾಗಿರುವುದು ಹೆಚ್ಚಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಮಕ್ಕಳೆಲ್ಲ ಸೇರಿ ಪುನಃ ಕೂಳು ಕಾರಚ್ ಹಾಕುವ ಕಾರ್ಯ ಕೈಗೊಳ್ಳುತ್ತಾರೆ. ಖಾಂದ್ಯು ಆದ ನಾನು ತಿನ್ನುವ ಕುಡಿವ ಸಮಯದಲ್ಲಿ ಮೊದಲ ತುತ್ತು ತೆಗೆದಿಡಲೇಬೇಕು. ಸತ್ತವನ ಆತ್ಮ ಯಾವ ಮರುಜನ್ಮ ಪಡೆದಿದೆ ಎಂಬುದನ್ನು ಇವರದೇ ಆದ ರೀತಿಯಲ್ಲಿ ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಇದಕ್ಕಾಗಿ ಒಂದು ಮೊರ ಅಥವಾ ತಟ್ಟೆಯಲ್ಲಿ ಬೂದಿಯನ್ನು ಹರಡಿ ಬಿಡಾರ ಡೇರೆ ಅಥವಾ ಇತ್ತೀಚಿನವರು ಮನೆಯಿಂದ ಹೊರಗೆ ಇಟ್ಟು, ಬುಟ್ಟಿಯನ್ನು ಮುಚ್ಚಿಡುತ್ತಾರೆ. ಅದರ ಕಾವಲಿಗೂ ಒಬ್ಬ ವ್ಯಕ್ತಿಯಿರುತ್ತಾನೆ. ರಾತ್ರಿ ಕಳೆದ ನಂತರ ಬೆಳಗೆದ್ದು ಅದರಲ್ಲಿ ಯಾವುದೇ ಗುರ್ತುಗಳು ಹೆಜ್ಜೆಗಳು ಕಂಡು ಬಂದರೆ ಆಜನ್ಮದಲ್ಲಿ ಆತನ ಆತ್ಮ ವ್ಯಕ್ತಿ ಅಥವಾ ಮಹಿಳೆಯ ಸಾವೇ ಇರಲಿ ಸರಿಯಾದ ಕಾರಚ್ ಕೂಳು ಹಾಕದಿದ್ದಲ್ಲಿ ಆತನಿಗೆ ತೃಪ್ತಿಸಿಗದಂತಾಗುತ್ತದೆ. ಆದ್ದರಿಂದ ಆತ ಇಷ್ಟಪಡುತ್ತಿದ್ದ ಯಾವುದೇ ಪ್ರಿಯ ತಿನಿಸುಗಳನ್ನು ಕಾರಚ್ ದಿನ ಪತ್ತರ್ ಹರಿವಾಣದಲ್ಲಿ ತುಂಬಲು ಮರೆವುದು. ಬೀಡಿ, ಸಿಗರೇಟ್ ಕುಡಿತವಿದ್ದರೆ, ಗೋರಿಯ ತಲೆಯ ಬಡಯಿಟ್ಟು ಸುರಿದು, ನಮಸ್ಕರಿಸುವರು.

### ಧಾರ್ಮಿಕ ವಿಧಿವಿಧಾನಗಳು ದೇವರು, ಧಾರ್ಮಿಕ ಕೇಂದ್ರಗಳು

ಹಕ್ಕಿಪಿಕ್ಕಿಯರು ಒಂದು ವರ್ಷದ ಅವಧಿಯಲ್ಲಿ 'ಭರ್ನು' ಎಂಬ ಹಬ್ಬವನ್ನು ಮಾಡುತ್ತಾರೆ. ಈ ಭರ್ನು(ಹಬ್ಬ)ದಲ್ಲಿಯೂ ಆಡು, ಕುರಿ, ಕೋಳಿ ಮತ್ತು ಕೋಣಗಳನ್ನು ಬಲಿಕೊಡುವ ಸಂಪ್ರದಾಯವಿದೆ. ಪ್ರತಿವರ್ಷ ಎಲ್ಲರೂ ಮಾಡಿದಂತೆಯೇ ಇದೇ ಹಬ್ಬವನ್ನು ಬೇರೆ ಬೇರೆ ಊರುಗಳಲ್ಲಿರುವವರೆಲ್ಲಾ ಸೇರಿ ಹನ್ನೆರಡು ವರ್ಷಗಳಿಗೊಮ್ಮೆ ದೊಡ್ಡ ಹಬ್ಬವನ್ನು ಮಾಡುವ ಸಂಪ್ರದಾಯವೂ ಇವರಲ್ಲಿದೆ.

ಇವೆಲ್ಲವುಗಳ ಜೊತೆಗೆ ಚಾಮುಂಡಿ, ದುರ್ಗಾ, ಎಲ್ಲಮ್ಮ ಇನ್ನೂ ಮುಂತಾದ ಹೆಣ್ಣು ದೇವರುಗಳಿಗೆ ಆಗಾಗ ಚಿಕ್ಕ ಹಬ್ಬಗಳನ್ನು ಮಾಡುತ್ತಿರುತ್ತಾರೆ. ಇದಕ್ಕೆ ಅವಧಿಯ ನಿರ್ಧಿಷ್ಟತೆಯೇನೂ ಇರುವುದಿಲ್ಲ. ಈ ಹಬ್ಬಗಳು ಮುಖ್ಯವಾಗಿ ಜನರ ಕಷ್ಟ ಮತ್ತು ಸುಖ (ಅನುಕೂಲತೆ)ವನ್ನು ಅವಲಂಬಿಸಿರುತ್ತದೆ. ಒಂದು ಮಗುವಿಗೆ 'ಅಮ್ಮ' ಎದ್ದಿದೆ ಎಂಬ ವಿಷಯದಿಂದ ಹಿಡಿದು, ಒಬ್ಬನಿಗೆ ವ್ಯಾಪಾರದಲ್ಲಿ ಅಧಿಕ ಲಾಭ ಬಂದಿದೆ ಎನ್ನುವವರೆಗೆ ಈ ಹಬ್ಬಗಳ ಆಚರಣೆಯ ವ್ಯಾಪ್ತಿ ಹರಡಿದೆ.

ಹಕ್ಕಿಪಿಕ್ಕಿಯರಲ್ಲಿ ದೇವರನ್ನು ಕರೆಯುವುದು ಅಥವಾ ಒಲಿಸಿಕೊಳ್ಳುವುದು ಒಂದು ಕಲೆಯಂತಿದೆ. ಇದನ್ನು ನಿರ್ವಹಿಸಲು ಅವರಲ್ಲೆ ಹಿರಿಯನ ಹಿರಿಮಗನಿರುತ್ತಾನೆ. ದೇವರನ್ನು ಕರೆಯುವ ವ್ಯಕ್ತಿ ಯಾವುದೇ ಮನೆಯ ನಡುಮನೆಯಲ್ಲಿರುವ ದೇವರ ಕಟ್ಟೆಯ ಮುಂದೆ ನಿಂತರೆ ಪಕ್ಕದಲ್ಲಿ ಒಬ್ಬ ಯಜಮಾನ 'ಧಾಕ್' (ಡಮರುಗು ದಂತಿರುವ ಒಂದು ವಾದ್ಯ ಇದಕ್ಕೆ ಒಂದು ಕಡೆ ಅಡ್ಡದಾರವನ್ನು ಸಡಿಲವಾಗಿ ಕಟ್ಟಿರುವುದರಿಂದ ಮತ್ತೊಂದು ಕಡೆ ಬಡಿದಾಗ ಧ್ವನಿ ದ್ವಿಗುಣಿಸಿ ಒಂದು ವಿಶೇಷ ನಾದ(ಗುಂಗು ಗುಯ್ ಗುಟ್ಟುತ್ತಿರುತ್ತದೆ)ವನ್ನು ಬಡಿಯುತ್ತಾ

ಜೋಲೋ... ಜೋಲೋ.. ಐಶ್... ವ್ಯವ್ಸೋ: ಐಶ್ ವ್ಯವ್ಸೋ: ಎನ್ನುತ್ತ ಜೋರಾಗಿ ಬಾರಿಸುತ್ತಾರೆ. (ಇಲ್ಲಿ ಜೋಲೋ: ಅನ್ನುವುದು ಜೈ ಬೋಲೋ: ಆಗಿದೆ) 'ದೇವ ಆಯೋ:' ಎಂದು ಪರಿ ಪರಿಯಾಗಿ ದೇವರನ್ನು ಚಾಮುಂಡಿ, ದುರ್ಗಾ, ಎಲ್ಲಮ್ಮ ಮುಂತಾದ ದೇವರುಗಳನ್ನು ಹೊಗಳುತ್ತಾ ಕರೆಯುತ್ತಾರೆ. ಈ ರೀತಿಯಾಗಿ ಕರೆಯುವ ವ್ಯಕ್ತಿಯು ವಿಶೇಷವಾದ ಘಾಗರಿಯನ್ನು ತೊಟ್ಟಿರುತ್ತಾನೆ. ಈ ಕೆಂಪು ಬಣ್ಣದ ಘಾಗರಿಯು ಹೆಣ್ಣು ಮಕ್ಕಳ ಲಂಗದಂತಿರುತ್ತದೆ. ಈ ದೇವರು ವ್ಯಕ್ತಿಯ ಮೈಮೇಲೆ ಬಂದಾಗ ಆತ ಒಂದು ಕಬ್ಬಿಣದ ಸಲಾಕೆಯಿಂದ ತನ್ನ ಬಲ, ಮತ್ತು ಎಡ ಭುಜಗಳಿಗೆ ಹೊಡೆದು ಕೊಳ್ಳಲು ಆರಂಭಿಸಿದಾಗ ಜನ ಇವನಿಗೆ ದೇವರು ಬಂದಿದೆ ಎಂದು ನಿರ್ಧರಿಸುತ್ತಾರೆ, ಆತನಿಗೆ 'ಓ...ಕೊ' ಓತರಾವಾಳೋ: ಎನ್ನುತ್ತಾರೆ.

ಈ ದೇವರು ಒಂದು ಕಡೆ ಸಣ್ಣ ಹೆಜ್ಜೆ ಹಾಕುತ್ತಾ ಜನರನ್ನು ತನ್ನ ಕಡೆ ಆಕರ್ಷಿಸಿದರೆ, ದೇವರ ಜಗುಲಿಯ ಮುಂಭಾಗದಲ್ಲಿ ಒಂದು ಚೌಕಾಕಾರದ ಬಟ್ಟೆಯೋಪಾದಿಯಲ್ಲಿರುವ ಪವಿತ್ರ ಬಟ್ಟೆಯ ಮೇಲೆ ಪರಡಿದರೆ ಬಟ್ಟೆಯು ಆಗುತ್ತದೆ. ಅದರ ಚೀಲದೊಳಗೆ ನಾಲ್ಕೈದು ಹಿಡಿಯಷ್ಟು ಗುಲಗಂಜಿ ಇರುತ್ತದೆ. ಹಿಡಿಯಲ್ಲೇ ಒಂದಿಷ್ಟು ತೆಗೆದು ನಾಲ್ಕು ನಾಲ್ಕು ಗುಲಗಂಜಿಗಳಿಗೆ ಒಂದೊಂದು ಗುಂಪು ಇಡುತ್ತಾರೆ. ಇದರಲ್ಲಿ ಸರಿ ಬಂದರೆ ಒಳ್ಳೆಯದಲ್ಲ ವೆಂದೂ, ಬೆಸ ಬಂದರೆ ಒಳ್ಳೆಯದೆಂದು ನಿರ್ಧರಿಸುತ್ತಾರೆ. ಆಗ ಅಪ್ಪಣೆಯನ್ನು ಯಜಮಾನ ಕೇಳುತ್ತಾನೆ. ಇದನ್ನು 'ವ....ನು' ವಧಾವ ಮಾಂಡಾನು ಎನ್ನುತ್ತಾರೆ.

ಇವರು ದೇವರುಗಳಿಗೆ ಕೊಡುವ ಬಲಿಯಲ್ಲಿ ಎರಡು ವಿಶೇಷಗಳಿವೆ. ಕೆಲವರು ಬಲಿಯ ಪ್ರಾಣಿಯ ಶಿರವನ್ನು ಆಯುಧಗಳಿಂದ ಎತ್ತಿ ಕಡಿದು ತುಂಡರಿಸಿದರೆ, ಮತ್ತೆ ಕೆಲವರು ಚರಚರನೆ ಕೊಯ್ದು ಬಲಿಕೊಡುತ್ತಾರೆ.

ಚಾಮುಂಡಿ ಮತ್ತು ಎಲ್ಲಮ್ಮ ದೇವತೆಗಳು ಬಲಿಯನ್ನು ಸ್ವೀಕರಿಸುವ ಪ್ರಮುಖ ದೇವಿಗಳಾಗಿವೆ. ಎಲ್ಲವನ್ನು ಸರಳವಾಗಿ ಸ್ವೀಕರಿಸುವ ಈ ಜನರ ಆಚರಣೆಗಳಲ್ಲಿ ಅತಿ ವಿಜೃಂಭಣೆ ಎಂಬುದು ಕಡಿಮೆಯೇ ಸರಿ

'ದೇವ್‌ನೋ ಬುಲಾವ್ನೋ:' ದೇವರನ್ನು ಕರೆಯುವುದು

ಹಕ್ಕಿಪಿಕ್ಕಿಯರಲ್ಲಿ ಇದು ಒಂದು ವಿಶೇಷ ಧಾರ್ಮಿಕ ಆಚರಣೆಯಾಗಿದೆ. ದೇವರ ಕಟ್ಟೆಯ ಎದುರು ಮೂರು ಕಲ್ಲುಗಳನ್ನು ಹೂಡಿ ಖಿವಾಳಿಯನ್ನು ಮಾಡುತ್ತಾರೆ. 'ದೇವಾಯು' ದೇವರು ಮೈಮೇಲೆ ಬಂದವನು ಸುಡುವ ಕಡಾಯಿಯಿಂದ ೯ ಖಿವಾಳಿ(ಸಿಹಿ ಕಜ್ಜಾಯ)ಗಳನ್ನು ಬಲಗೈಯಿಂದಲೇ ತೆಗೆಯುತ್ತಾನೆ. ಇದು ರಾತ್ರಿ ನಡೆಯುವ ಆಚರಣೆ. ದೇವರ ಕಟ್ಟೆ ಅಥವಾ ಗದ್ದಿಗೆಯಿಂದ ಹೊರಕ್ಕೆ ತೆಗೆಯುತ್ತಾರೆ. ಇದು ರಾತ್ರಿ ನಡೆಯುವ ಆಚರಣೆ. ಅಲ್ಲಿ ಅಮ್ಮ ಚಾಮುಂಡಿಯನ್ನು ಪೂಜಿಸಿಟ್ಟಿರುತ್ತಾರೆ. ಒಬ್ಬರು ಹಾಡು ಹೇಳುತ್ತಾ ದೇವರನ್ನು ಕರೆಯುತ್ತಾರೆ. ಗುಲಗಂಜಿಯಿಂದ ಇಡುವ ಶಾಸ್ತ್ರಕ್ಕೆ 'ವಧಾಹೊ ಮಾಂಡವಾನು' ಗುಲಗಂಜಿ ನೋಡುವ ಶಾಸ್ತ್ರ ಎಂದರ್ಥ.

ಇದರ ಲೆಕ್ಕದಂತೆ ಒಂದು ಹಿಡಿಗೆ ೧೫ ವಜೂರ್ ಗುಂಪಿಗೆ ಸರಿಯಾಗಿ ಐದ್ನೆದು ಬರಬೇಕು. ಅಲ್ಲಿಯವರೆಗೂ ಹಿಡಿ ಹಿಡಿದು ಇಡುವ ಕಾರ್ಯಮಾಡುತ್ತಲೇ ಇರುತ್ತಾರೆ.

**ದೇವರ ಕಾರ್ಯಗಳು**

ಹಿಂದೆ ಹೇಳಿದಂತೆ ಹಕ್ಕಿಪಿಕ್ಕಿಯರಲ್ಲಿ ವರ್ಷಕ್ಕೆ ಒಂದು ಬಾರಿ ಆಚರಿಸುವ ಹಬ್ಬವನ್ನು 'ಭರ್ನು' ಎಂದು ಕರೆಯುತ್ತಾರೆ. ಈ ಆಚರಣೆಯಲ್ಲಿ ಕೋಣದ ಬಲಿಯನ್ನು ನೀಡುವುದು ಕಂಡುಬರುತ್ತದೆ. ಹಬ್ಬದ ಲಂಗಾರನ್ನು ಹಂತಹಂತವಾಗಿ ಪ್ರಥಮವಾಗಿ ಗುಜರಾತ್ಯೋ, ಪವಾರ್, ಕಾಳಿವಾಳೋ ನಂತರ ಮೆವಾಡೋ ಎಂಬ ಪಂಗಡವನ್ನು ಲಂಗರಿನಲ್ಲಿ ಅವರದೇ ಆದ ದೇವರಿಗಾಗಿ ತ್ರಾಂಗಡುವನ್ನು ಕೂರಿಸಲು ಬಿಡಾರವನ್ನು ಹೂಡುತ್ತಾರೆ.

**ದೇವರನ್ನು ಕೂರಿಸುವ ವಿಧಾನ**

**೧. ಗುಜರಾತ್ಯೋ :** ದಾದಾಜಿಗೆ (ಶಿವ) ವಿಳ್ಯೆದೆಲೆ ಮೇಲೆ ಕೂರಿಸುತ್ತಾರೆ. ನಂತರ ಅಖ್ಡಪಾಳ್(ನಾಗದೇವರು)ಗೆ ಗುಣೇಖ್(ಗಣೇಶ)ನನ್ನು ವಿಳ್ಯೆದೆಲೆಯನ್ನು ಕೂರಿಸುತ್ತಾರೆ. ನಂತರದಲ್ಲಿ ಖಿಖ್ಡಳೀ(ಚಾಮುಂಡೇಶ್ವರಿ)ಯ ಮೂರ್ತಿಯನ್ನು ಬೆಳ್ಳಿಯಿಂದ ಮಾಡಿಸಿದ ಮೂರ್ತಿಯನ್ನು ಕೂರಿಸುತ್ತಾರೆ. ಅನಂತರ ಕ್ರಮವಾಗಿ ಖ್ವಿಕ್ಕತ್, ಶೇಳ್, ಮಹ್ಮಮಯಿ, ಸಿಕೋತರ(ನಾಯಿಕೆಮ್ಮಿನ ದೇವರು) ಚಾಂದ್‌ಡಿ, ಪಾರ್ಥನ್, ಭೆಖ್ಖಾಖರ್, ಹನುಮಾನ್ ಮತ್ತು ಪಂಗಡದ ಪಿತೃ, 'ಗುರು ಪಾತಿಯೊ' ಇವುಗಳ ಎಲೆ ಅಥವಾ ಮೂರ್ತಿಗಳನ್ನು ಕೂರಿಸುತ್ತಾರೆ.

**೨. ಪವಾರ್ :** ದಾದಾಜಿಗೆ (ಶಿವ) ಮೋಳ್‌ಯು(ಬಟ್ಟೆ ದೇವರು)ನ್ನು ಕೂರಿಸುತ್ತಾರೆ. ನಂತರ ಅಖ್ಡಂಪಾಳ್ ನಾಗದೇವರು ಗುಣೇಖ್ಡ್ (ಗಣೇಶ) ಅನಂತರ ಕ್ರಮವಾಗಿ ಜೋಗಾಯಿ (ಮುಕಾಂಬಿಕೆ) ಮೈಲಿದೇವಿ, ಶೇಳ್, ಮಹಮ್ಮಾಯಿ, ಓಘಂಬರ್ (ಸರಸ್ವತಿ) ಖ್ವಾತ್ ಖ್ಡಂಬ್ರಿ, ರಣಚಂಡಿ, ಮಗ್ರಿ ಖಾದಾರು ಅಗಾಖ್ಖೂಡ, ಬಾವನ್‌ಖ್ಡೂರಿ ಭೆಖ್ಖಾಖ್ಡರ್ ಮತ್ತು ಪಂಗಡದ ಪಿತೃ 'ಉಬಾರಿಯೋ' ಮೂರ್ತಿಗಳನ್ನು ಕೂರಿಸುತ್ತಾರೆ.

**೩. ಕಾಳಿವಾಳೋ :** ತ್ರಿಕೋನಕಾರದಲ್ಲಿ ಸುತ್ತಿರುವ ಬಟ್ಟೆಯ ದೇವರನ್ನು 'ದಾದಾಜಿಯ (ಶಿವ) ಮೊಳಯು' ಎಂದು ಕರೆಯುತ್ತಾರೆ. ಒಮ್ಮೆ ತಯಾರಿಸಿದಂತಹ ಮೊಳಯು ಮುಂದಿನ ಪೀಳಿಗೆಯವರಿಗೆ ಮುಂದುವರೆಯುತ್ತದೆ. ಯಾವ ಕಾರಣಕ್ಕಾಗಿಯೂ ಅದನ್ನು ನಾಶ ಪಡಿಸಲು ಯಾರು ಮುಂದಾಗುವುದಿಲ್ಲ. ನಂತರ ದುಗಾವ್ ಎಂಬ (ಕಾಳಿಕಾ) ದೇವಿಯ ಮೂರ್ತಿ (ಖಪ್ಪರ್)ಯನ್ನು ಕೂರಿಸುತ್ತಾರೆ. ತರುವಾಯ ಕ್ರಮವಾಗಿ ಮಹಮ್ಮಾಯಿ (ಮುಂಬಾದೇವಿ), ಶೇಳ್, ಲೋದವ್ (ಖಾಂದಾರು) ಭಣಾಜಾರಿ (ಮಗರಿ), ಭಿಮ್, ಬೆಖ್ಖಿಖ್ಖಾರ್, ಕೊನೆಯದಾಗಿ ಭರಕ್‌ನ ಭೈ (ಬೀರದೇವರು) ಮತ್ತು ಪಂಗಡದ ಪಿತೃ 'ಗುರು ಥಾಡರ್' ಹೆಸರಿನಲ್ಲಿ ವಿಳ್ಯೆದೆಲೆ ಇಟ್ಟು ಪೂಜಿಸುತ್ತಾರೆ.

**೪. ಮೆವಾಡೊ :** ದಾದಾಜಿಗೆ (ಶಿವ) ವಿಳ್ಯೆದೆಲೆ ಕೂರಿಸುತ್ತಾರೆ. ನಂತರ ನೌಕೋಡ್ (ಎಲ್ಲಮ್ಮ)ನ ಮೂರ್ತಿಯನ್ನು ಕೂರಿಸುತ್ತಾರೆ. ತರುವಾಯ ಕ್ರಮವಾಗಿ ಮಹಮ್ಮಾಯಿ, ಶೇಳ್,

ತೋಲಾವ್ ಖಂಡಾರು ಭಣಾಚಾರಿ ಮಗರಿ ಬಿಮ್, ಬೆಖ್ಯಾಖ್ಬಿರ್, ಭರಕನಾ ಭೈ (ಬೀರದೇವರು) ವಾಘೈ (ಸರಸ್ವತಿ) ಮತ್ತು ಪಂಗಡದ ಪಿತೃ 'ಗುರುಧಾನುವತ್' ಮೂರ್ತಿಗಳನ್ನು ಕೂರಿಸುತ್ತಾರೆ.

**ಹಬ್ಬಗಳು ಮತ್ತು ಪೂಜಾವಿಧಾನ**

೧. ಜಮೀನು ಅಥವಾ ಟಿಪ್ಪೊ: ಉದಾಹರಣೆಗೆ ಇಬ್ಬರು ಅಣ್ಣತಮ್ಮಂದಿರಲ್ಲಿ ಮೊದಲನೆಯವನಿಗೆ ಮಕ್ಕಳಾಗಿ ಕಿರಿಯವನಿಗೆ ಮಕ್ಕಳಾಗದಿದ್ದಲ್ಲಿ, ತಂದೆಯಿಂದ, ಇಬ್ಬರಿಗೂ ಬಂಧಂಥ ದೇವರುಗಳಲ್ಲಿ ಹಿರಿಮಗನಿಗೆ ತಂದೆಯ ಪಟ್ಟದ ದೇವರು ಸಿಗುತ್ತದೆ. ತಮ್ಮನು ಬೇರೆ ಸಮುದಾಯದ ಅಥವಾ ರಕ್ತ ಸಂಬಂಧಿಗಳಲ್ಲಿ ದತ್ತು ತೆಗೆದುಕೊಂಡು ಸಾಕಿದ ಮಗನಿಗೆ ತನ್ನ ತ್ರಾಂಗಡೂ ದೇವಿ ಕೊಡುತ್ತಾನೆ. ಆತನಿಗಿದು ಇಷ್ಟವಾಗದೆ, ಅಣ್ಣನಿಗೆ ಎರಡು ಗಂಡುಮಕ್ಕಳಾದರೆ ಕಿರಿಯವನನ್ನು ತನ್ನ ಮಗನೆಂದು ಆಶೀರ್ವಾದಿಸಿ ಅಣ್ಣನ ಪಟ್ಟದ ದೇವಿ ಮೂರ್ತಿಯನ್ನು ನೋಡಿಸಿ, ಆಚಾರಿಯ ಕೈಯಲ್ಲಿ (ಘಡಾವಾನು) ಮಾಡಿಸಿದ ದೇವಿಯನ್ನು ಕೊಡುತ್ತಾನೆ. ಇಲ್ಲಿ ಅಣ್ಣನ ಕಿರಿಯ ಮಗನೂ ಕೂಡ ತಮ್ಮನಿಗೆ ಹಿರಿ ಮಗನಾಗುತ್ತಾನೆ. ಮಕ್ಕಳಿಲ್ಲದ ತಮ್ಮನ ದೇವಿಗೆ ಪೂಜಾರಿಯಿಲ್ಲದೆ ಇರುವಾಗ ತಕ್ಕವನನ್ನು ಆರಿಸಿ ಕೂರಿಸುವ, ನೇಮಿಸುವ ಸ್ಥಾನಕ್ಕೆ 'ಜಮೀನು' ಅಥವಾ 'ಟಿಪ್ಪೊ' ಎನ್ನುತ್ತಾರೆ.

೨. ಲಂಗರು : ಯಾರು, ಯಾರಿಗೆ, ಯಾವ ಯಾವ ಪಂಗಡಗಳಲ್ಲಿ ಹೇಗೆ ತಮ್ಮ ತಮ್ಮ ದೇವಿಯ ತ್ರಾಂಗಡೂಗಳನ್ನು ಕೂರಿಸಬೇಕೆಂಬುದನ್ನು ಮೊದಲೇ ನಿರ್ಧರಿಸಿಕೊಂಡಿರುತ್ತಾರೆ. ಅದು ಅವರವರ ಜಮೀನಿನ ಮೇಲೆ ಆಧಾರಿತವಾಗುತ್ತದೆ. ಉದಾಹರಣೆಗೆ ಗುಜರಾತ್ಯೋವಾಳರಲ್ಲಿ ರಾಮೇಗೌಡರ, ಹಬ್ಬದ ಲಂಗರಲ್ಲಿ ದೇವಿಯನ್ನು ಕೂರಿಸುವುದನ್ನೇ ಗಮನಿಸೋಣ. ಅವರ ಮೊದಲ ಉಗರು ಪರಶುರಾಂಪ್ರೌತ್ ಆದರೂ ಅವರೆಲ್ಲ ದೇವಿಯೊಂದಿಗೆ ಇದ್ದವರು ಆಗಿದ್ದರಿಂದ ಅವರ ಮುಂದಿನ ವಂಶಾವಳಿಯ ಆರು ತಲೆಮಾರಿನವರೆಗೂ ಹಬ್ಬದಲ್ಲಿ ಹರಕೆಯೊಪ್ಪಿಸುವ ಬಲಿ ನಿಯಮವಿರಲಿಲ್ಲ. ಇದರಿಂದ ಅವರೆಲ್ಲ ಸಸ್ಯಹಾರಿಗಳ ಗುಂಪಿಗೆ ಸೇರಿದ ಬ್ರಾಹ್ಮಣರಂತಿದ್ದರು ಎಂದು ಹೇಳಬಹುದು. ಏಳನೇ ತಲೆಮಾರಿನಲ್ಲಿ ಗುರುಪಾಥ್ಯೋ ಮಕ್ಕಳಾದ ಹಾಚೊ ಮತ್ತು ಬೋರ್ಯೊ ಕಾಲದಲ್ಲಿ ಭೀಕರ ಬರಗಾಲ, ಏಳು ವರ್ಷಗಳ ಕಾಲ ಸತಾಯಿಸಿದ್ದರಿಂದ, ಬದುಕಿಗಾಗಿ ಹೋರಾಟ ಆಹಾರಕ್ಕಾಗಿ ಅಲೆದಾಟದಲ್ಲಿ ಬೆಂದು ತೊಳಲುತ್ತಿದ್ದವರನ್ನು ದೇವಿಯೇ 'ಶಿವಾರ್ಯೋ' ಎಂಬ ಕೊಬ್ಬಿದ ದಹೆತ್- ಕೋಣವನ್ನು ಒಬ್ಬ ಅಹಾಂಕಾರಿ ವ್ಯಾಪಾರಿ ಸಾಕಿದ್ದು, ಅದನ್ನೇ ಖರೀದಿ ಮಾಡುವಂತೆ ಅಜ್ಞಾಪಿಸುತ್ತಾಳೆ. ದೇವಿಯ ಛಾಯೆ ಅವರಿಗೆ ಕಾಣದಿದ್ದರೂ ಗಾಳಿಯಲ್ಲೆಯಲ್ಲಿ ಅವರು ಕರೆದಾಕ್ಷಣ ಬಂದು ಸಂಕಟ ಪರಿಹರಿಸುತ್ತಿದ್ದಳು. ತಮಗಾಗಿ ಅವರು ಏನನ್ನೂ ಕೇಳುತ್ತಿರಲಿಲ್ಲ. ತಾಂಡದಲ್ಲಿ ಒದಗಿದ ಸಂಕಟಗಳಿಗಾಗಿ ಮರುಗುತ್ತಿದ್ದರು. ಇಂಥ ನಿಸ್ವಾರ್ಥ, ಧರ್ಮಪರತೆಗೇ ಆ ತಾಯಿ ಮನಸೋತಿದ್ದಳೇನೊ ಅನ್ನಿಸುತ್ತದೆ.

ದಹೆತನನ್ನು ಖರೀದಿಸಿದವನು ಅದನ್ನು ಎಳೆದೊಯ್ಯಲಾರದೆ, ಇತ್ತ ಹಣ ಅತ್ತ ದಹೆತನನ್ನು

ಒಯ್ಯದೆ ಹ್ಯಾಪೆಯಾಗಿ ಮರಳುತ್ತಿದ್ದ. ಕೊಂಡವನಿಗೆ ಚೆಳ್ಳೆಹಣ್ಣು ತಿನ್ನಿಸಿ ಹಿಂದಿರುಗುವ ದಹೆತನ ಮೇಲೆ ವ್ಯಾಪಾರಿಗೆ ವಿಪರೀತ ಪ್ರೀತಿ, ಆದರಿಂದಲೇ ಸಾಕಷ್ಟು ಹಣ ಮಾಡಿದ್ದ. ಎಲ್ಲರೂ ಆತನನ್ನು ಕಂಡು ಕರುಬುವವರೇ ಆಗಿದ್ದರು. ಕೋಣ ಎಲ್ಲಿ ಹೋಗಿ ಮೇಯ್ದರೂ, ಯಾರೂ ಏನೂ ಹೇಳುವಂತೆ ಇರಲಿಲ್ಲ. ದಷ್ಟಪುಷ್ಟ ಕೋಣವನ್ನು ಯಾರೂ ಬೆದರಿಸಲಿಕ್ಕೂ ಹೋಗುತ್ತಿರಲಿಲ್ಲ. ಅದರಿಂದ ಕೋಣ ಮತ್ತು ಮಾಲೀಕನಿಂದ ಅಪಾಯ ತಪ್ಪುತ್ತಿರಲಿಲ್ಲ.

ಅಂಥ ಶಿವಾರ್ಮೋನನ್ನು ಹಾಚಾ ಮತ್ತು ಭೋರ್ಝುರು ಅದರ ಮಾಲಿಕನೆಷ್ಟು ಹಣ ಕೇಳಿದರೂ ತಮ್ಮ ಜೋಳಿಗೆಯಿಂದ ಸುರಿಸಿದರು. ದೇವಿಯ ಕೃಪೆಯಂತೆ ಅವನು ಕೇಳಿದಷ್ಟು ಅದರಲ್ಲಿತ್ತು. ಎಣಿಸಿಕೊಳ್ಳುವಂತೆ ಹೇಳಿ ಶಿವಾರ್ಮೋನನ್ನೆಳೆಯುಯ್ಯುತ್ತಾರೆ. ಸಾಕಷ್ಟು ಹಣ ಮತ್ತು ಕೋಣ ತನ್ನದಾಗುವುದೆಂದು ಊಹಿಸಿದ್ದ ವ್ಯಾಪಾರಿಗೆ ನಿರಾಸೆ ಕಾದಿತ್ತು. ದೇವಿಯು ಹೇಳಿಕೊಟ್ಟ ಹಾಗೆ ಪೇಟೆಯಿಂದ ಹೊಸದಾಗಿ ಸಾಮಾನು ಸರಂಜಾಮುಗಳನ್ನೆಲ್ಲ ತಂದು ಹಬ್ಬ ಆಚರಿಸ ತೊಡಗುತ್ತಾರೆ. ದಹೆತನನ್ನು ಕಡಿಗೆ ಬಿಗಿದು ರಹಿಮಾನ್ (ಕಾವು= ರಕುತ) ಏರಿಸಬೇಕೆಂದಾಗ ಮಾತ್ರ, ಬಹಳ ಹಿಂಜರಿದ ಅಣ್ಣತಮ್ಮಂದಿರು ಬ್ಲಿವಾಳಿ ಮಾಡುವಾಗ್ಗೆ, ದಹೆತನ ಹಗ್ಗ ಬಿಚ್ಚಿಬಿಡುತ್ತಾರೆ. ಕಾವು ಏರಿಸಲು ಹೆದರಿ ಈ ಕೆಲಸ ಮಾಡಿ, ಶಾಸ್ತ್ರಭಂಗವಾಗುತ್ತಿದ್ದುದನ್ನು ತಪ್ಪಿಸಲು ದೇವಿಯೇ ಅವರ ಮೇಲೆ ದಯೆ ತೋರಿ, ಎಲ್ಲೆಲ್ಲೋ ಇದ್ದ ಸಂಬಂಧಿಗಳೆಲ್ಲ ಬಂದು ಆ ಹಬ್ಬದಲ್ಲಿ ಒಟ್ಟೊಗೂಡಿ (ಕಾಳ್‌ನ ದನ್) ಬರಗಾಲದ ದಿನಗಳಲ್ಲಿ ಬದುಕಲು ಮಾಂಸ ತಿನ್ನುವಂತೆ ಹಬ್ಬ ಮಾಡುವ ನೆವಹೂಡಿದ್ದಳು.

ಬೆಳಗಾಗುವದರೊಳಗೆ ಎಲ್ಲೆಲ್ಲಿದ್ದ ಸಂಬಂಧಿಕರನ್ನೆಲ್ಲ ಆ ದಹೆತ್ ಒಡ್ಡಿಕೊಂಡು ಬಂದು, ಮತ್ತೆ ಕಡಿಯ ಬಳಿ ನಿಂತಿತ್ತು. ಈ ಜಾದೂ ಕಂಡ ಆ ಅಣ್ಣತಮ್ಮಂದಿರಿಗಾದ ಆನಂದ, ಆಶ್ಚರ್ಯ ಅಷ್ಟಿಷ್ಟಲ್ಲ. ತಮ್ಮ ಮನೆ ಪೂಜೆಗಾಗಿ ಒಟ್ಟಾದ ಜನಜಂಗುಳಿಯನ್ನು ಸಂತೃಸಿ ಆಧರಿಸುವುದು ಅವರ ಆದ್ಯ ಕರ್ತವ್ಯವೂ ಆಗಿದ್ದರಿಂದ, ಎಲ್ಲರಿಗೂ ಊಟ ಮಧ್ಯಪಾನದ ವ್ಯವಸ್ಥೆ ಮಾಡಿದರು. ದೇವಿಗೆ ಎಡೆಯನ್ನು ಅರ್ಪಿಸಿದ್ದಾಯಿತು. ಆದರೆ ಅವರಿಗೆ ಅದನ್ನು ಸ್ವೀಕರಿಸುವಂತೆ ಮನಸ್ಸು ಒಪ್ಪಲಿಲ್ಲ. ಕೊನೆಗೆ ದೇವಿಯೇ "(ಬ್ಲಿವಾಳಿ, ಖೋಪ್ರು, ಖೊಳೊ) ಕಚ್ಛಾಯ, ತೆಂಗಿನಕಾಯಿ ಚೂರು, ಸುಟ್ಟ ಕಲೀಜ ತಿಂದು ನೋಡಿ, ಇಷ್ಟವಾದರೆ ತಿನ್ನಿ, ಇಲ್ಲವಾದರೆ ಬಿಟ್ಟು ಬಿಡಿ" ಎಂದು ಸಮಾಧಾನ ತಾಳುತ್ತಾಳೆ. ದೇವಿ ಹೇಳಿದ್ದರಲ್ಲಿ ಈ ಮಾತನ್ನಾದರೂ ನಡೆಸೋಣವೆಂದು ಕೊಂಡು, ತಿಂದು ನೋಡಿದರೆ ತುಂಬಾ ಚೆನ್ನಾಗಿರುತ್ತದೆ. ಮತ್ತೆ ಮತ್ತೆ ತಿನ್ನಬೇಕೆನಿಸುತ್ತದೆ. ಹೀಗೆ ಶಪುರುವಾಯಿತು. ಗುಜರಾತ್‌ವಾಳರಲ್ಲಿ ಮಾಂಸದೂಟದ ರುಚಿ. ಬುದ್ಧಿವಂತರಾದ ಹಾಚೊ ಮತ್ತು ಭೋರ್ಝೂ ತಮ್ಮ ತಂದೆ ಪಾಥ್ಯೋನ ಮೂರ್ತಿಯನ್ನು ಬೆಳ್ಳಿಯ ತಗಡಿನಲ್ಲಿ ಬರೆಸಿ, ಪೂಜಿಸತೊಡಗಿದರು. ಅಂದಿನಿಂದ ದೇವಿಯ ಜೊತೆ ಗುರು ಪಾಥ್ಯೋನ ಮೂರ್ತಿ ಕೂಡ ಈಗಲೂ ಅವರ ವಂಶಾವಳಿಯ ಹಬ್ಬಗಳಲ್ಲಿ ಮಾತ್ರ ತ್ರಾಂಗಡೂದಿಂದ ಹೊರಬರುವುದನ್ನು ಕಾಣಬಹುದು.

ಹೀಗೆ ಹಾಜೋ ಮತ್ತು ಭೋರ್ಝೂ ವಿರಚಿತ ಗುರುಪಾಥ್ಯೋ ಮತ್ತು ದೇವಿಯ

ಮೂರ್ತಿಗಳು ಪಿಟಾರಿಯಲ್ಲಿ ಸೇರಿ 'ತ್ರಾಂಗಡೊ' ಆಯಿತು. ಜಮೀನು ಸಿಕ್ಕಿತ್ತು. ನಂತದಲ್ಲಿ ತಮ್ಮ ಭೋರ್ಯೋನಿಗೆ ಹೊಸ ದೇವಿಯನ್ನು ಮಾಡಿಸಿ ಕೊಟ್ಟ, ಆದರೆ ಗುರುಪಾದ ಪಾಥ್ಯೋ ಸಿಗದ ಕಾರಣಕ್ಕಾಗಿಯೇ ಏನೋ ದೇಶಾಂತರ ಹೋಗಿಬಿಟ್ಟ. ಈಗಲೂ ಆತನ ವಂಶಾವಳಿ ಇದೆ ಎನ್ನುತ್ತಾರೆ. ಆದರೆ ಭೇಟಿಯಾಗಿ ನಾವು ಇಂತವರ ಖಾಂದನೆಂದು ಹೇಳಿಕೊಳ್ಳುವವರು ಸಿಕ್ಕಿಲ್ಲ. ಒಟ್ಟಿನಲ್ಲಿ ಆತ ಉತ್ತರ ಭಾರತದಲ್ಲೇ ಉಳಿದುಕೊಂಡ. ಬಹುಶಃ ಈತನ ಲಂಗರನ್ನು ಹಬ್ಬದಲ್ಲಿ ಹಾಕುವಾಗ ಮೊದಲು ಗಲ್ಡೀದೇವಿ ನಂತರದಲ್ಲಿ ಅವರ ಖಾಂದಾನಿಗೆ ಸಂಬಂಧಪಟ್ಟಂತೆ ಮಾಡಿಸಿಕೊಂಡ ದೇವರುಗಳನ್ನು ಇಳಿಕೆ ಕ್ರಮದಲ್ಲಿ ಲಂಗರು ಹಾಕುತ್ತಾರೆ.

**ಲಂಗರಿನ ರಚನೆ :** ಹಿಂದೆಲ್ಲ ಸೊಪ್ಪು ಸದೆಗಳಿಂದ ಹೊಸ ಜೋಪಡಿಯಂತೆ (ಗುಡ್ಲ) ದೂರದಲ್ಲಿ ಹಾಕುತ್ತಿದದರು. ಇತ್ತೀಚಿನವರು ಪ್ಲಾಸ್ಟಿಕ್ ಚೀಲದಿಂದ ತಯಾರಿಸಿದ ಟೆಂಟುಗಳನ್ನೇ ಹಾಕುತ್ತಾರೆ. ಇದು ಕುಟುಂಬದಲ್ಲಿ ಒಂದೇ ಯಾಗಿರುತ್ತದೆ. ಗಲ್ಡೀದೇವಿಯ ಜೊತೆ ಉಳಿದವರು ಇಡುತ್ತಾರೆ. ಪೂಜೆ ಒಟ್ಟಿಗೆ ನಡೆಯುತ್ತದೆ. ಕುಟುಂಬದಲ್ಲಿ ದೇವಿಯು ವಧಾವದಲ್ಲಿ ಹರಕೆಯೊಪ್ಪಿಸುವಂತೆ ಬಂದರೆ, ಬೇರೆಯವರ ಕುಟುಂಬದಲ್ಲಿ ಆಚರಿಸುವ ಪ್ರಸಾದ ಪೂಜಾರಿಯಾದವನು (ಹಿರಿಯ) ಸ್ವೀಕರಿಸುವಂತಿಲ್ಲ. ಏಕೆಂದರೆ ದೇವಿಯೇ ಆತನ ಮೈಮೇಲೆ ಬರುವುದರಿಂದ, ಬೇರೆಯವರು ತಮ್ಮ ದೇವಿಗೆ ಆಚರಿಸಿ ತೃಪ್ತಿಪಡಿಸಿದ ಪ್ರಸಾದವನ್ನು ಇನ್ನೂ ತೃಪ್ತಳಾಗದ ಈ ಕುಟುಂಬದ ದೇವಿಯ ಪೂಜಾರಿ ಹೇಗೆ ಸ್ವೀಕರಿಸಿಯಾನು? ಹಾಗಾಗಿ ಇದು ಸಂಪ್ರದಾಯದಂತೆ ನಡೆದು ಬಂತು.

ಈಗಲೂ ಹಾಜೋ ವಿರಚಿತ ದೇವಿ ಆತನ ವಂಶಾವಳಿಯಲ್ಲಿ ದಾವಣಗೆರೆ ಜಿಲ್ಲೆ ಅಸ್ತಾಪನಹಳ್ಳಿ ವಾಸಿ ಚೈಶೀಲಪ್ಪ ಎಂಬುವನ ಬಳಿಯಿದೆ. ಶಕ್ಯನವರ ಪಿರ್ತಿಸಿಂಗ್ ಎಂಬುವನು ತಮಗೆ ಸುದ್ದಿಯೋ ಮುಟ್ಟಿಸದೆ ಕಳ್ಳತನದಿಂದ ಹಬ್ಬ ಆಚರಿಸಿಕೊಳ್ಳುತ್ತಿರೆಂದು ಗುರುಪಾಥ್ಯೋನ ಮೂರ್ತಿ (ಖಿಪ್ಪರ್) ಕದ್ದೊಯ್ದಿದ್ದನಂತೆ. ನಂತರವಲ್ಲಿ ಶಕ್ಯನವರ ಹಬ್ಬಗಳಲ್ಲಿ ಗುರುಪಾಥ್ಯೋನನ್ನು ಕಂಡಾಗಲೆಲ್ಲ ೭೦ ರೂ. ಕೊಟ್ಟು ಒಯ್ಯಿರಿ ಅನ್ನುತ್ತಿದ್ದರಂತೆ ನಿಮ್ಮ ಗುರು ನಮಗೆ ಯಾಕೆಂತ? ಆದರೆ ಆರ್ಥಿಕ ಪರಿಸ್ಥಿತಿ ಆಗ ಚೆನ್ನಾಗಿರಲಿಲ್ಲದ ಕಾರಣ ಆಗಿರಲಿಲ್ಲ. ಅಸ್ತಾಪನಹಳ್ಳಿಯ ಪಂಚಾಯಿತಿದಾರರು ಚೈಶೀಲಪ್ಪನ ಗಲ್ಡೀ ಇಲೇ ಇರುವಾಗ ಗುರುವನ್ನು ಬೇರೊಬ್ಬರ ಪಾಲು ಮಾಡಬಾರದೆಂದು ಒಂದು ತ್ರಾಂಗಡೂಗೆ ೩೦೦ ರೂ. ನಂತೆ ಒಟ್ಟು ಮಾಡಿದ್ರು ಅದೂ ಸಾಲದಾದಾಗ ತುಕಡಿ ಜಮೀನನ್ನು ಶಿವನವರ ಬೆಲ್ಲಪ್ಪನಿಗೆ ದೀಡು ಮಾಡಿ ಪಂಚಾಯ್ತಿದಾರರೆಲ್ಲ ಹೋಗಿ ಪಂಚಾಯಿತಿ ಮಾಡಿ ವಾಪಾಸ್ ತಂದರು. ಅಲ್ಲಿಂದ ಆ ಗುರುಪಾಥ್ಯೋನ ಮೂರ್ತಿಯೂ ದೇವಿಯ ಜೊತೆ ಸೇರಿದಂತಾಯಿತು. ಎಷ್ಟೋ ವರ್ಷಗಳ ನಂತರದಲ್ಲಿ, ಗುಜರಾತ್ಯೋವಾಳದಲ್ಲಿ ಶಿವನವರ ಇಂತಹ ಐತಿಹ್ಯವಿರುವ ದೇವಿಯೇ ಗಲ್ಡೀಯಾಗಿದ್ದಾಳೆ. ಲಂಗರಲ್ಲಿ ಚೈಶೀಲಪ್ಪನ ದೇವಿಯೇ ಮೊದಲು ಕೂರುತ್ತಾಳೆ. ಈ ಯುವಕ ಈಗ ಜೀವಿತದಲ್ಲಿದ್ದಾನೆ.

೩. ಹಿರಿಯನಿಂದ ಆಶೀರ್ವಾದ : (ಬೇಂಡಿಕಿ ಧರಾವಾನು = ಆಶೀರ್ವಾದ ಹಿಡಿಸುವುದು)

ದೇವಿಯನ್ನು ಆಹ್ವಾನಿಸಿ ಮೈಗೂಡಿಸಿ ಕೊಳ್ಳಬೇಕಾದರೆ ಆ ಕುಟುಂಬದ ಹಿರಿಯನ ಮರಣಾನಂತರ ಅಥವಾ ಅಧೀರನಾದಾಗ ಆತನ ಬದಲಿಗೆ ಹಿರಿಮಗನಿಗೇ ತನ್ನ ಮೈಮೇಲೆ ಬರುವ ದೇವಿ, ಆತನ ಮೈಮೇಲೆ ಬರಬೇಕೆಂದು ಹಬ್ಬದಲ್ಲಿ ತಲೆಯ ಮೆಲೆ ಕೈಯಿಡುತ್ತಾನೆ. ಇದು ಹಿರಿಯನಿಂದ ಪಡೆವಂಥ ಆಶೀರ್ವಾದ ಆಗುತ್ತದೆ. ದೇವಿಯ ದಯೆಯಿದ್ದರೆ, ನಂಬಿಕೆಯಿಲ್ಲದವನ ಮೈ ಕೂಡ ನಲುಗಿ, ದೇವಿಯ ಆಹ್ವಾನೆಯಾಗುತ್ತದೆ. ಗಾಢ ಕಷ್ಟಗಳು ಪರಿಹಾರವಾಗುವಂತೆ ಹರಸುತ್ತಾಳೆಂಬ ದೃಢ ನಂಬಿಕೆ ಈಗಲೂ ಬೆಳೆದುಬಂದಿದೆ. ಇದಕ್ಕೆ ಸಾಕ್ಷಿಯಾಗಿ ಅಸ್ತಾಪನಹಳ್ಳಿಯಲ್ಲಿ ಶ್ರೀ ಮುಕುಂದಪ್ಪ ಕೃಷ್ಣಪ್ಪ ಎಂಬುವರಿಗೆ ವರ ತಂದೆಯ ಆಸೆ, ಆಶೀರ್ವಾದದೊಂದಿಗೆ ಓತರಬೇಕೆಂದಿದ್ದರೂ ನಂಬಿಕೆಯಿಲ್ಲದೆ ಎಷ್ಟೋ ವರ್ಷ ಬಿಟ್ಟು ಬಿಟ್ಟಿರು. ಮೊಮ್ಮಗ ಓತರಿದರೂ ಅಪ್ಪ ಜಗ್ಗಿರಲಿಲ್ಲ. ಈಗ ೨೦೦೨ ರ ೧೬ನೇ ಡಿಸೆಂಬರ್ ತಿಂಗಳಲ್ಲಿ ಹಬ್ಬ ಆಚರಿಸುತ್ತಿದ್ದಾಗ ದೇವಿ ಮೈಮೇಲೆ ಬಂದೇ ಬಿಟ್ಟಳು. ನಂತರದಲ್ಲಿ ಹಬ್ಬ ಆಚರಿಸಿದ್ದು ನನಗೊಂದು ರೋಮಾಂಚನದ ಅನುಭವ ಎನ್ನುತ್ತಾರೆ. ಈಗ ಮಂಡಲ ಪಂಚಾಯಿತಿ ಅಧ್ಯಕ್ಷರು ಕೂಡ.

ಇನ್ನೊಂದು ಉದಾಹರಣೆಯಾಗಿ ಹೇಳಬೇಕೆಂದರೆ ಕಾಳಿವಾಳೂ ಪಂಗಡದ ದಿವಂಗತ ಧರಂಸಿಂಗ್ ಎಂಬುವರ ಐವರು ಪುತ್ರರಲ್ಲಿ ಇಬ್ಬರಿಗೆ ದೇವಿ ಬರುವಂತೆ ಆಶೀರ್ವಾದವಾಗಿತ್ತು. ಆದರೆ ಅವರಲ್ಲಿ ಕಿರಿಯರಿಬ್ಬರೂ ಕ್ರೈಸ್ತ ಧರ್ಮದ ಪಾಸ್ಟರ್‌ಗಳ ಮರುಳು ಮಾತಿಗೆ ಬಲಿಯಾಗಿ ತಮ್ಮ ಧರ್ಮ ತೊರೆದು ಅವರದೇ ದಾರಿಯಲ್ಲಿ ನಡೆಯತೊಡಗಿದ್ದರು. ತಂದೆ ತೀರಿಹೋದ ನಂತರ ದೇವರನ್ನು ಪೂಜಿಸಿ ಹಬ್ಬಗಳನ್ನು ಆಚರಿಸುವುದನ್ನೇ ಮರೆತು ಬಿಟ್ಟರು. ಅನೇಕ ಕಷ್ಟ ಕಾರ್ಪಣ್ಯಗಳು ಒಂದರ ಮೇಲೊಂದು ಒದಗಿಬರಲು ಬಂಧುಗಳೆಲ್ಲ ಇದು ಮನೆ ದೇವರ ಕಾಟ, ಪೂಜೆ ಪುರಸ್ಕಾರದಿಂದ ಶಾಂತಿ ಮಾಡಿರೆಂದರು. ಆದರೆ ಇವುಗಳೆಲ್ಲ ಮೂಢನಂಬಿಕೆಯೆಂದು ಮನದಟ್ಟು ಮಾಡಿದ್ದರಿಂದ ಅವರ ತಾಯಿ ಕೂಡ ಒಪ್ಪಲಿಲ್ಲ. ಹೀಗೆ ಕೆಲವು ವರ್ಷಗಳೇ ನಡೆದವು. ಒಂದು ದಿನ ಆಶೀರ್ವಾದಿತ ನಾಲ್ಕನೇ ಮಗ ನಟರಾಜ್ ಧರಂಸಿಂಗ್ ಎಂಬ ಯುವಕನಿಗೆ ಇದ್ದಕ್ಕಿದ್ದಂತೆ ೧೯೯೯ರಲ್ಲಿ ಆರಂಭದಿಂದಲೇ ದೇವಿ ಕನಸಲ್ಲಿ ಬರುವುದು, ಎದುರಿಗೆ ಕಾಣಿಸಿಕೊಂಡಂತಾಗುವುದು, ಮೈ ಅದುರಿ ಓತರುವುದು ಶುರುವಾಯಿತು. ಆದರೂ ನಂಬಲಿಲ್ಲ. ನಂತರದಲ್ಲಿ ಆತನ ಮಾವ ಶ್ರೀ ಸುಶೀಲಪ್ಪ ಲೇಖಕಿ ಕುಮುದರ ಪತಿ ರ ಮನೆಗೆ ಬಂದಾಗ ಮೈಕುಣಿಸುತ್ತಲೇ ಒಳ ಬಂದು ನಾನು ಕೇಡು ಬಯಸಲು ಬಂದಿಲ್ಲ. ಮೂವತ್ತು ವರ್ಷದಿಂದ ನನ್ನನ್ನು ಗಮನಿಸುತ್ತಿಲ್ಲ. ಬಾಯಲ್ಲಿ ಬಲೆಯಾಗಿ ಬಿಟ್ಟಿದೆ. ನನ್ನ ಹಬ್ಬ ಆಚರಿಸುತ್ತಿಲ್ಲ. ಕಣ್ಣೆತ್ತಿಯೂ ನೋಡುತ್ತಿಲ್ಲ. ಇನ್ನಾದರೂ ನೋಡಿದರೆ ಮತ್ತು ಸತಾಯಿಸುತ್ತನೆಂದು ಮೈಯಿಳಿತು. ನಾಲಗೆ ಹೊರ ಚಾಚಿ ಇದೇ ಮಾತನ್ನು ಮನೆಯಲ್ಲೂ ಹೇಳಿರುವುದನ್ನು ಆತನ ತಾಯಿ ಮತ್ತು ಊರ ಜನರು ನೋಡಿರುವುದನ್ನು ತಿಳಿಸಿದನು. ಹಬ್ಬ ಆಚರಿಸಿ ಶಾಂತಿ ಮಾಡಲು ಸಹಾಯ ಯಾಚಿಸಿದಾಗ ಸುಶೀಲಪ್ಪನವರು ಅಲ್ಲಗಳೆಯಲಿಲ್ಲ. ಹಬ್ಬ ಆಚರಿಸಿದ ನಂತರ ದೇವಿ ಮತ್ತೆ ಬರಲಿಲ್ಲ. ಈಗ ಮದುವೆಯಾಗಿ ಚೆನ್ನಾಗಿದ್ದಾನೆ.

ಹೀಗೆ ಆಶೀರ್ವಾದವನು ಎಂದಾದರೂ ಒಮ್ಮೆ ಆ ದೇವಿಯ ಕೃಪೆಗೆ ಪಾತ್ರನಾಗುತ್ತಾನೆಂಬುದು ಶತಸಿದ್ಧವಾಗಿದೆ.

೪. **ಪಟ್ಟದ ದೇವಿ ಪಡೆಯುವುದು :** ಇದನ್ನು ಇನ್ನೊಂದು ಅರ್ಥದಲ್ಲಿ 'ಕುಲದೇವತಾ ಪದ್ಧತಿ' ಎನ್ನಬಹುದು. ಇದನ್ನು ಇಂಗ್ಲಿಷ್‌ನ 'Totem' ಮತ್ತು 'Totemison' ಶಬ್ದಗಳಿಗೆ ಸಂವಾದಿಯಾಗಿ 'ಕುಲಚಿಹ್ನೆ' ಮತ್ತು 'ಕುಲದೇವತಾ ವಾದ' ಅಥವಾ 'ಕುಲದೇವತಾ ಪದ್ಧತಿ' ಎಂದಿದ್ದಾರೆ. ಹಕ್ಕಿಪಿಕ್ಕಿಯರಲ್ಲಿ ಇದು ಕುಲದೇವತೆಯ ಚಿಹ್ನೆಯಾದ ದೇವಿಯ ಮೂರ್ತಿ ಮತ್ತು ಮೋಳ್ಳು ಇರುವ 'ತ್ರಾಂಗಡೂ'ವನ್ನು ಪಡೆವ ಪದ್ಧತಿಯಾಗಿದೆ.

೫. **ಹತ್ಯಾರು :** ಹಕ್ಕಿಪಿಕ್ಕಿಯರ ಹಬ್ಬಗಳಲ್ಲಿ 'ಹತ್ಯಾರು' ಬಹಳ ಗೌರವ ತರುವ ಕೆಲಸವಾಗಿದೆ. ಲಂಗರುಗಳಲ್ಲಿ ಆಯಾ ಪಂಗಡಗಳಿಗೆ ತಕ್ಕ ಜಮೀನಿನಲ್ಲಿ ದೇವಿಯನ್ನು ಇಳಿಕೆ ಕ್ರಮದಲ್ಲಿ ಕೂಡಿಸಿದರಾಗದು. ಓತರುವ ಪೂಜಾರಿಗಾಗಿ ಹರಕೆಯನ್ನು ವಧಿಸಿ ಆಪೋಷನಕ್ಕೆ ಅಣಿಮಾಡುವ ಮೊದಲ ಕೆಲಸ ಈ ಹತ್ಯಾರನದಾಗಿರುತ್ತದೆ. ಈ ನಡವಳಿಕೆಗೆ 'ಹತ್ಯಾರು' ಎನ್ನುತ್ತಾರೆ.

**ಹತ್ಯಾರು ಪಡೆದವನಿಗೆ ಇರುವ ನಿಯಮಗಳು**

೧. ಟೀಕಂಧಾರಿಣಿಯ ಮಗನಾಗಿರಬೇಕು.
೨. ಪಟ್ಟದ ದೇವಿ ಪಡೆಯುವ ಅರ್ಹತೆಯುಳ್ಳವನಾಗಬೇಕು.
೩. ಆತನಿಗೆ ಮತ್ತು ಆತನ ಕುಟುಂಬದ ಗೌರವಕ್ಕೆ ಧಕ್ಕೆ ಬಂದಿರಬಾರದು. ಕೆಟ್ಟ ಬೈಗುಳು, ಜಗಳದಲ್ಲಿ ಚಪ್ಪಲಿ, ಲಂಗದ ಪಟು ತಿಂದಿರಬಾರದು. ಹೆಣ್ಣಿನ ಅಕ್ರಮ ಸಂಪರ್ಕ, ಶೀಲಗೆಟ್ಟ ಹೆಣ್ಣು ಇರುವುದಾಗಲೀ, ಕುಟುಂಬಕ್ಕೆ ಸೇರಿಕೊಳ್ಳುವುದಾಗಲೀ ಮಾಡಿರಬಾರದು (ಆಕಸ್ಮಾತ್ ಆದರೆ ಇತ್ತೀಚಿನವರು ತಕ್ಕ ದಂಡ ವಿಧಿಸಿಯೇ, ಶಿಕ್ಷೆ ವಿಧಿಸಿಯೋ, ಪರಿಹಾರ ಮಾಡಿ ಪವಿತ್ರ (ಶುದ್ಧಿ) ಮಾಡಿರಬೇಕು. ಇದಕ್ಕೆ 'ಅಕಲಾವ್'= ಶುದ್ಧೀಕರಣ ಅನ್ನುತ್ತಾರೆ).
೪. ಹಿರಿಯನಿಂದ ಆಶೀರ್ವಾಧಿತನಾಗಿ ಓತರುವ ಅರ್ಹತೆಯಿರಬೇಕು.
೫. ಹಬ್ಬ ಆಚರಿಸುವ ಪೂಜಾರಿಗೆ ಹತ್ಯಾರು ಗೋತ್ರಿ ರಕ್ತ ಸಂಬಂಧಿಯಾಗಿರಬೇಕೆಂಬುದು ಬಹಳ ಮುಖ್ಯ.
೬. ಬುದ್ಧಿಭ್ರಮಣೆಯಾಗಿರಬಾರದು, ನಡೆ ನುಡಿಯಲ್ಲಿ ನೀತಿವಂತನಾಗಿರಬೇಕು.

**ಹತ್ಯಾರು ಪಡೆದ ಮೇಲೆ ಆಚರಿಸುವ ನಿಯಮಗಳು**

೧. ಸದಾ ಒಳ್ಳೆಯದನ್ನೇ ಬಯಸುವುದು, ಕೆಲಸ ಮಾಡುವುದು.
೨. ಸಿಕ್ಕ ಸಿಕ್ಕವರ ಮನೆಯಲ್ಲಿ ಊಟ ಮಾಡುವಂತಿಲ್ಲ. ಉಪವಾಸವಿದ್ದರೂ ಚಿಂತೆಯಿಲ್ಲ, ಮನೆಯೂಟವನ್ನೇ ಮಾಡಬೇಕು. ಇಲ್ಲವಾದರೆ ಗಂಡಸರು ಮಾಡಿದ ಅಡುಗೆಯನ್ನು ಅಥವಾ ಹೋಟೆಲ ಊಟ ಮಾಡಬಹುದು. ಇಲ್ಲಿ ಗಂಡಸರೆಂದರೆ ಬೇರೆ ಸಮುದಾಯದ ಗಂಡಸರು, ಸ್ವಜಾತಿ ಗಂಡಸರಾದರೆ ಅವರು ಪವಿತ್ರರಾಗಿರಬೇಕು. ಯಾವ ನಿಂದನೆಗೂ ಒಳಪಟ್ಟಿರಬಾರದು. ಪರಸ್ತ್ರೀ ವ್ಯಾಮೋಹ ಇದ್ದವನನ್ನು ಪಾಪೇಲೋ ಅನ್ನುತ್ತಾರೆ.

ಅಂಥವನಿಂದ ಹಿರೆಯರೆ ದೂರವಿರುವಾಗ ಇನ್ನು ಹತ್ಯಾರು ಪಡೆದವರು ಹತ್ತಿರ ಸುಳಿಯುವುದಿಲ್ಲ. ತಕ್ಕ ದಂಡ ವಿಧಿಸಿದರೂ, ಆತನ ಸ್ಥಾನ ಅಷ್ಟಕಷ್ಟೆ. ಇದು ಹೆಣ್ಣಿಗೂ ಸಂಬಂಧಿಸುತ್ತದೆ. ಪರ ಪುರುಷ ವ್ಯಾಮೋಹ, ಅಕ್ರಮ ಸಂಬಂಧಗಳಿದ್ದುದು ಗೋತ್ತಾದಂದಿನಿಂದ ಆಕೆಯನ್ನು ಪಾಪೇಲಿ ಪಟ್ಟಿನಿರಿಸಿ, ದೂರವಿಡಲು ಇಷ್ಟಪಡುತ್ತಾರೆ. ಆದ್ದರಿಂದ ಹೆಣ್ಣು ಹೆಚ್ಚಾಗಿ ತಪ್ಪು ಮಾಡುವ ಗೋಜಿಗೆ ಹೋಗುವುದಿಲ್ಲ.

**೬. ಓತರುವುದು :** (ದೇವಿ ಮೈಗೂಡುವುದು) ಯಾವುದೇ ಹಬ್ಬಗಳನ್ನು ಆಚರಿಸಬೇಕಾದರೆ ಪೂಜಾರಿಯ ಅಗತ್ಯವಿದ್ದೇ ಇರುತ್ತದೆ. ಅದು ಪರಂಪರಾಗತವಾಗಿರಬಹುದು. ನಿಯಮಿತನಾಗಿರಲೂಬಹುದು. ಒಟ್ಟಿನಲ್ಲಿ ಪೂಜಾರಿಯಾಗುವವನಿಗೆ ಜಮೀನು, ಲಂಗರು ಪಟ್ಟದ ದೇವಿಯೆಲ್ಲ ಸಿಕ್ಕುವುದು ಹಿರಿಯನಿಂದ ಆಶೀರ್ವಾದಿತನಾಗುವುದರಿಂದ ಹೀಗೆ ಆಶೀರ್ವಾದಿಸಲ್ಪಟ್ಟವನು. ಮುಂದಿನ ಹಬ್ಬಗಳಲ್ಲಿ ಓತರ ಬಹುದು. ದೇವಿ ಮೈಗೂಡುವುದು, ದೇವಿ ಪೂಜಾರಿಯಾದವನ ಮೈಮೇಲೆ ಆಹ್ವಾನಿತಳಾಗಿರುವುದನ್ನು 'ಓತರುವುದು' ಎನ್ನುತ್ತಾರೆ. ಹೀಗೆ ಓತರಿದವನನ್ನು 'ಭವನ್ಯೋ' ಎಂದು ಕರೆಯುತ್ತಾರೆ. ಈ ಭವನ್ಯೊಗೆ ಮೊದಲು ಹತ್ಯಾರ ಪಡೆದವನಿಗಿರುವ ಅರ್ಹತೆಗಳಿರಬೇಕಾಗುತ್ತದೆ. ಮುಂದೆ ಈತ 'ಗಲ್ಡೀದೇವಿ' (ಪಟ್ಟದ ದೇವಿ)ಗೆ ಓತರಿರುವುದರಿಂದ 'ಗಲ್ಡೀ ದೇವಿನೋ ಭವನ್ಯೋ' ಆಗುತ್ತಾನೆ. ಈತನಿಗೆ ಎಲ್ಲರೂ ಗೌರವ ಆದರಗಳಿಂದ ಕಾಣುತ್ತಾರೆ. ಆತನೂ ಅದರಂತೆ ನಡೆದುಕೊಳ್ಳಬೇಕಾಗುತ್ತದೆ.

ಓತರುವವನೂ ಕೂಡ 'ಹತ್ಯಾರು' ಪಡೆಯುವ ಮೊದಲು, ನಂತರದ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕಾಗುತ್ತದೆ. ಮೊದಲೇ ಹೇಳಿದಂತೆ ಈ ಸಮುದಾಯದಲ್ಲಿ ಗಂಡಸರೆಲ್ಲ ಕೂದಲು ಬಿಡುವುದು ಅನಿವಾರ್ಯ ಹಾಗೇ ಬೆಳೆದು ಬಂದ ಸಂಪ್ರದಾಯ ಕೂಡ. ಕೂದಲಿದ್ದವನನ್ನು, ಓತರಿದವನು. ಮುಂದೆ ಓತರುವವನು, ವಾಗ್ರಿಗಳ ಕಟ್ಟಸಂಪ್ರಾದಯ ಉಪಾಸಕನೆಂದು ಹೇಳುತ್ತಾರೆ.

**೭. ಪಾರ್ನೆ :** (ಉಪವಾಸ ಇರುವುದು) ಕುಟುಂಬದಲ್ಲಿ ಕಷ್ಟಕಾರ್ಪಣ್ಯಗಳೊದಗಿದರೆ ಒಳ್ಳೆಯ ದುಡಿಮೆ ಆದರೆ ಮನೆ ದೇವಿಯ ತ್ರಾಂಗಡೂ ಬಳಿಗೆ ಬಂದು ವಧಾವ (ಗುಲಗಂಜಿ ಶಾಸ್ತ್ರ) ನೋಡುತ್ತಾರೆ. ಜಬಾಬಿನಲ್ಲಿ ದೇವಿ ಕಡ್ವೆ (ಕಜ್ಜಾಯದ ಹರಕೆ) ಭರ್ಗು (ಬಲಿಹಕ್ಕಿ) ಕೇಳಿದರೆ ಒಪ್ಪಿಸಲೇಬೇಕಾಗುತ್ತದೆ. ಇಲ್ಲಿ ದೊಡ್ಡ ಹರಕೆ (ಬಲಿ ಹರಕೆ) ಮಾಡುವಾಗ ದೇವಿಯ ಆಚರಣೆಗಾಗಿ ಎಲ್ಲ ಹೊಸದಾಗಿ ಸಾಮಾಗ್ರಿಗಳನ್ನು ತರಲು ಅಂಗಡಿಗೆ ಹೋಗುವಾಗಿಂದಲೇ ಆ ಕುಟುಂಬದ ಹಿರಿಯವನೂ, ಓತರುವವನೂ, ಆಗಿದ್ದರಿಂದ ಆತ 'ಪಾರ್ನೆ' (ಉಪವಾಸ) ಇರುವುದು ಬದ್ಧನಿಯಮ. ಹಬ್ಬ ಸಾಂಗವಾಗಿ ನಡೆಯುವವರೆಗೂ, ಅಂದರೆ ಬಲಿ ಬೀಳುವವರೆಗೂ ಆತ ಎಳನೀರನ್ನು ಕೂಡ ಸೇವಿಸುವುದಿಲ್ಲ. ಆತನಿಗೆ ಹಸಿವು ಬಾಯಾರಿಕೆ ಆಗದಂತೆ ದೇವಿಯೇ ಕಾಯ್ದುಕೊಳ್ಳುವಳೆಂದು ನಂಬುತ್ತಾರೆ. ಹಾಗಾಗಲಿಕ್ಕೆ ಆತ ಯಾವುದೇ ಕೆಟ್ಟ ಯೋಚನೆಗಳಿಂದ ಮುಕ್ತನಾಗಿ ನಿಷ್ಕಲ್ಮಶ ಮನಸ್ಸಿನವರಾಗಿರಬೇಕು. ಇಲ್ಲವಾದರೆ ಆತನಿಗೆ ಹಸಿವು ಬಾಯಾರಿಕೆಗಳು ಮೇಲಿಂದ ಮೇಲೆ ಉಂಟಾಗಿ ಹಬ್ಬಕ್ಕೆ 'ಪಾರ್ನೆ' ಇರದಂತೆ ದೇವಿ

ಮಾಡುತ್ತಾಳೆನ್ನುತ್ತಾರೆ. ಅದು ಅವರು ನಂಬಿರುವ ದೇವರ ಮಹಿಮೆ. ಹೀಗೆ ದೇವರಲ್ಲೇ ಅಪಾರ ಭಯ ಭಕ್ತಿಗಳಿಂದ ತುಂಬಿದವರಾದ ಈ ಅಲೆಮಾರಿ ಬುಡಕಟ್ಟು ಸಮುದಾಯ ತಮ್ಮ ಸಮಾಜದಲ್ಲಿ ನಡೆಯುವಂಥ ಯಾವುದೇ ಅಹಿತಕರ ಘಟನೆಗಳಿಗೆ ಎಡೆ ಮಾಡುವುದಿಲ್ಲ.

ಗುಜರಾತ್‌ವಾಳೊ ಪಂಗಡದಲ್ಲಿ ಆಚರಿಸುವ ಹಬ್ಬಗಳು ಮುಖ್ಯವಾಗಿ ಎರಡು ೧. ಕಢೈ ೨. ಭರ್ಸ್ನು ಎಲ್ಲ ಪಂಗಡಗಳಲ್ಲೂ ಆಚರಿಸುತ್ತಾರೆ. ಹೆಸರು ಒಂದೇ ಆದರೂ ಭರ್ಸ್ನುಗಳು ಕೆಲವು ಪಂಗಡಗಳಲ್ಲಿ ಬೇರೆಯದಾಗಿರುತ್ತದೆ. ಉದಾಹರಣೆಯಾಗಿ ಗುಜರಾತ್ಯೋ, ಪವಾರ್‌ಗಳಲ್ಲಿ ಕಢೈ ಮತ್ತು ಕೋಣದ ಬಲಿಯಿರುತ್ತದೆ. ಹಾಗೇ ಮೇವಾಡೋ, ಪವಾರ್, ಕಾಳಿವಾಳೋರಲ್ಲಿ ಕಢೈ ಮತ್ತು ಕುರಿಬಲಿ ಕೊಡುತ್ತಾರೆ. ಇಲ್ಲಿ ಪವಾರ್ ಪಂಗಡದವರು ಎರಡೂ ಹಬ್ಬಗಳನ್ನು ಆಚರಿಸುತ್ತಾರೆ. ಆದ್ದರಿಂದ ಈ ಪಂಗಡದವರು ಉಳಿದ ಮೂರೂ ಪಂಗಡಗಳಲ್ಲಿಯೂ, ಸಂಬಂಧಗಳನ್ನು ಬೆಳೆಸಬಹುದಾಗಿದೆ. ಬೆಂಗಳೂರು ಕಡೆಯಿರುವ ಪವಾರ್ ಪಂಗಡದವರ ಆಚರಣೆಗಳು ಬಹುತೇಕ ಗುಜರಾತ್ಯೋವಾಳೋರ ಆಚರಣೆಗೆ ಹತ್ತಿರಾಗುತ್ತದೆ. ಆದ್ದರಿಂದ ಪರಸ್ಪರ ಸಂಬಂಧ ಬೆಳೆಸಲು ಹಿಂಜರಿಯುವುದನ್ನು ಕಾಣಬಹುದ.

ಗುಜರಾತ್ಯೋಗಳ ಪಂಗಡದಲ್ಲಿ ಪೂಜಿಸುವ ದೇವರುಗಳು ಕ್ರಮವಾಗಿ ಹೀಗಿವೆ. ಮಾಹಿತಿ ಡಿ. ರಾಮೇಗೌಡ ೯೦ ಶಣ್ಮಾರಿ ೧೯ ಮೊಂಬಾರು ೬೫ ಅಸ್ತಾಪನಹಳ್ಳಿ, ವಾಸಿ ದಾವಣಗೆರೆ ಜಿಲ್ಲೆ

ದಾದಾಜಿ (ಈಶ್ವರ)
ಪೀಖ್ಳೈಳಿ (ಚಾಮುಂಡೇಶ್ವರಿ)
ವೈರಾಗನ್
ಆಖ್‌ಪಾಳ್ (ಸರ್ಪರಾಜ)
ಗುಣೇಶ್ (ಗಣಪತಿ)
ರೂಪಾವಡಿ (ಬಲಿಕೋಣದ ಕೊಳ ಕಡಿಯನ್ನು ಬಿಗಿದಿರುವವಳು)
ಘನ್ನತಣಿ (ಸೌಟಿನ ದೇವತೆ) [ದಹೆತನನ್ನು ಬಿಗಿದಂಥ ಕಡಿಯನ್ನು ನೆಲದಲ್ಲಿ ಬಿಗಿಹಿಡಿದ ದೇವತೆ]

ಚಾಂದಡಿ : (ಚಾಂದ್‌ಬೀಬಿ)
ಶೇಳ್ : (ಸೇಡಿನ ದೇವತೆ)
ಮಹಮ್ಮಾಯಿ : (ಮಾರಿಯಮ್ಮ)
ಶಿಕೋತರ್ : (ಕೆಮ್ಮು, ನೆಗಡಿ, ವಾತಿ ದೇವತೆ)
ಖ್ಬೀರ್‌ಮಯ್ : (ಮೌನದೇವತೆ, ಶಾಂತಿದೇವತೆ)
ಮೆಲಡಿ : (ಭೂಲಮ್ ಮೆಲಡಿ, ಜಬರದಸ್ತ್ ಕೆಡುಕು ಮಾಡುವ ದೇವತೆ)
ಹನುಮಾನ್ : (ಶಕ್ತಿ ದೇವತೆ)

| | | |
|---|---|---|
| ಗುರುಪಾಥ್ಯೋ | : | (ಈತನ ಮಕ್ಕಳಾದ ಹಾಜೋ ಭೋಜೊ ದೇವಿಯ ಖಿಪ್ಪರ್‌ನೊಂದಿಗೆ ತಂದೆಯ ಮೂರ್ತಿಯನ್ನು ಮಾಡಿಸಿ ತ್ರಾಂಗಡೊದಲ್ಲಿರಿಸಿ ಪೂಜಿಸಲು ಆರಂಭಿಸಿದರು) ನಂತರ ವಂಶಜರು ಹಬ್ಬ ಆಚರಿಸುವಾಗ ಈ ಗುರುವನ್ನು ಪೂಜಿಸುತ್ತಾರೆ. |
| ಭೆಂಖ್ಯಾಖಿರ್ | : | ಶಿಕಾರಿಗೆ ಸಹಾಯ ಮಾಡುವ ದೇವತೆ ಎದೆಯಲ್ಲಿ ಕಣ್ಣು ಇರುವ ದೇವರು. |

ಹಬ್ಬದ ಲಂಗರ್‌ಗಳನ್ನು ಹಾಕಿದಾಗ, ತ್ರಾಂಗಡೂದಲ್ಲಿರುವ ಈ ದೇವತೆಗಳನ್ನು ಒಂದು ಕ್ರಮನುಗಾತ ಕೂರಿಸಬೇಕಾಗುತ್ತದೆ. ಇಲ್ಲದಿದ್ದರೆ ಹಿರಿದೇವತೆಗಳು ಮುನಿದು ನಾನಾ ಕಷ್ಟ ಕೋಟಲೆಗಳನ್ನು ಇಳಿಕೆ ಕ್ರಮದಲ್ಲಿರಬೇಕು. ಅದು ಆಯಾ ದೇವತೆಗಳ ಯೋಗ್ಯತೆಗನು ಗುಣವಾಗಿ ಕೂರಿಸಬೇಕೆನ್ನುತ್ತಾರೆ. ಈ ವಿಚಾರದಲ್ಲಿ ಹಕ್ಕಿಪಿಕ್ಕಿಗರು ತಮ್ಮದೇ ಆದ ಕ್ರಮವನ್ನು ಅನುಸರಿಸುತ್ತಾರೆ. ಗುಜರಾತ್ಕ ಪಂಗಡದಲ್ಲಿ ಕ್ರಮವಾಗಿ ಕೂರಿಸುವ ದೇವತೆಗಳನ್ನು ಇಲ್ಲಿ ವಿವೇಚಿಸಲಾಗಿದೆ.

| ದೇವರುಗಳು | ಗುರುತಿಗಾಗಿ ಕೂರಿಸುವುದು | ಸಲ್ಲಿಸುವ ಪೂಜೆ |
|---|---|---|
| ದಾದಾಜಿ | ವೀಳ್ಯದೆಲೆ | ಬೋಕ್ಡೊ (ಕುರಿಬಲಿ) |
| ಆಖ್ಡಪಾಳ್ | ಖಿಪ್ಪರ ಮೂರ್ತಿ ಇಲ್ಲದಿದ್ರೆ ವೀಳ್ಯದೆಲೆ | ಆಖ್ಡಪಾಳ್ ಹಂಡೊ (ಸಿಹಿ ಅಡುಗೆ) ದೂದ್‌ನಿ ಕಟೋರಿ (ಹಾಲಿನ ಗಿಂಡಿ) |
| ಗುಣೇಖ್ಡ | ವೀಳ್ಯದೆಲೆ | ದೀಪ, ಹೂ ಊದ್ (ಧೂಪ) ಕರ್ಪೂರ |
| ವೀಖ್ಡಳಿ | ಖಿಪ್ಪರ್ ಮೂರ್ತಿ | ಕೋಣಬಲಿ (ದಹೆತ್, ಭೆಖ್ಯೋ) |
| ಖ್ಡಕ್ಕತ್ | ಖಿಪ್ಪರ್ ಮೂರ್ತಿ | ಕುರಿಬಲಿ |
| ಶೇಳ್ | ವೀಳ್ಯದೆಲೆ | ದೀಪ, ಧೂಪ, ಜೋಡಿ ತೆಂಗಿನಕಾಯಿ |
| ಮಹಮ್ಮಾಯಿ | ವೀಳ್ಯದೆಲೆ | |
| ಶಿಕೋತರ್ | ವೀಳ್ಯದೆಲೆ | |
| ಖ್ಡರ್‌ಮಯ್ | ವೀಳ್ಯದೆಲೆ | |
| ಮೆಲಡಿ | ವೀಳ್ಯದೆಲೆ | |
| ಪಾರ್ಧನ್ ಪವತಣಿ | ವೀಳ್ಯದೆಲೆ | |
| ಚಾಂದಡಿ | ಮೇಳ್ಯು ತ್ರಿಕೋನ ಬಟ್ಟೆದೇವರು | ಕುರಿಬಲಿ ಚಾಂದಡಿನೊ ಬೋಕ್ಡೊ |
| ರಹಾವಡಿ | ವೀಳ್ಯದೆಲೆ | ಹಲ್ವನ್ ಪುರಿ ಪೂಜೆಯಲ್ಲಿ (ಸಿಹಿ ಅಡುಗೆ) |

| | | |
|---|---|---|
| ಹನುಮಾನ್ | ಮೂರ್ತಿ | ಬೇಯಿಸಿದ ವಸ್ತುಗಳು ಹಣ್ಣು ಉತ್ತತ್ತಿ ದ್ರಾಕ್ಷಿ ತೆಂಗಿನಕಾಯಿ ಇತ್ಯಾದಿ |
| ಖಾಳವಿ ಬಂಜಾರಿ | ಖಂಡಾರು ಮಗರಿ | ರುಮಾಲ್ ಹೊದಿಸಿ ವೀಳ್ಯೆದೆಲೆ ಮೇಲೆ ಕೂರಿಸಿ,ದೀಪ, ಧೂಪ, ಇತ್ಯಾದಿ |
| ಗುರುಪಾಥ್ಯೋ | ಮೂರ್ತಿ ವೀಳ್ಯೆದೆಲೆ | ದೀಪ, ಧೂಪದಾರತಿ |

ಅನುಕ್ರಮವಾಗಿ ಕೂರಿಸಿದಂಥ ದೇವರುಗಳಿಗೆ ಅನುಕ್ರಮವಾಗಿ ಪೂಜೆಗಳನ್ನು ಸಲ್ಲಿಸುತ್ತಾರೆ.

ಪೂಜಾವಿಧಾನ

೧. ದಾದಾಜಿ (ಈಶ್ವರ) : ಭರ್ಡುಗಳನ್ನು ಆಚರಿಸುವಾಗ ಲಂಗರುಗಳಲ್ಲಿ ಆಯಾ ಪಂಗಡಕ್ಕೆ ಸಂಬಂಧಪಟ್ಟವರೆಲ್ಲ ಮೊದಲಿಗೆ ದಾದಾಜಿಯನ್ನೇ ಪೂಜಿಸುತ್ತಾರೆ. ಏಕೆಂದರೆ ಈ ಸಮುದಾಯದವರಲ್ಲಿ ದಾದಾಜಿಯು ಸೃಷ್ಟಿಯಿಂದ ಲಯದವರೆಗೂ ಆತನೊಬ್ಬನೆ ಕಾರ್ಯಕರ್ತನಾಗಿದ್ದಾನೆಂದು ನಂಬುತ್ತಾರೆ. ಹಾಗಾಗಿ ಅವರಾಡುವ ಭಾಷೆಯ ಗಾದೆಯಲ್ಲಿ ರೂಢಿಯಲ್ಲಿರುವಂತೆ "ಫೈದಾ ಕರಾವಾಳೋಭಿ ದಾದಾಜೀಸ್; ಮಾರಾವಳೋಭಿ ದಾದಾಜಿಸ್" ಎಂದು ಬಿಡುತ್ತಾರೆ. ಅಂದರೆ "ಹುಟ್ಟಿಸುವವನೂ ಈಶ್ವರನ್ನೇ; ಸಾಯಿಸುವವನೂ ಈಶ್ವರನ್ನೆ" ಆಗಿದೆ. ಹುಟ್ಟು-ಸಾವುಗಳಿಗೆ ಸಂಬಂಧಿಸಿದಂತೆ ಬೇರೆ ಸಮುದಾಯಗಳಲ್ಲಿರುವಂತೆ ಒಂದೊಂದು ದೇವರುಗಳಿಲ್ಲ. ಹಾಗಾಗಿ ವಂಶೋದ್ಧಾರಕನಾಗಿ ಮನೆತನದಲ್ಲಿ ಹಿರಿಯ ಗಂಡುಮಗುವಾದರೆ 'ನವಿಮುಂಡಿನೋ ಬೋಕ್ಡೊ'(ಹೊಸ ತಲೆಮಾರಿ ಕುರಿಯನ್ನು) ದಾದಾಜಿಗೆ ಒಪ್ಪಿಸಿ, ಹಿರಿಯರೆಲ್ಲರಿಗೂ ತೃಪ್ತಿಪಡಿಸಿ ಆದರಿಸಬೇಕಾದದ್ದು ಮಗುವಿನ ತಂದೆಯ ಮತ್ತು ಹಿರಿಯನ ಕರ್ತವ್ಯವಾಗಿರುತ್ತದೆ. ಅಂತೆಯೇ ಕುಟುಂಬದ ಯಾವುದೇ ಸದಸ್ಯ ತೀರಿಕೊಂಡರೂ ಸಹ 'ಭ್ಯಾರ್‌ನೋ ಬೋಕ್ಡೊ' (ಶವಸಂಸ್ಕಾರದ ಕುರಿಯನ್ನು) ಕೊಡಬೇಕಾಗುತ್ತದೆ. ಇಲ್ಲವಾದರೆ ಆತನ ಆತ್ಮಕ್ಕೆ ಶಾಂತಿಯಿಲ್ಲವೆಂದು ನಂಬುತ್ತಾರೆ.

ಈ ಹುಟ್ಟು ಸಾವಿಗೆ ಕೊಡುವ ಬಲಿ ಕುರಿಯ ಆಚರಣೆ ಆಯಾ ಸಂದರ್ಭಕ್ಕನುಗುಣ ವಾಗಿರುತ್ತದೆ. ಆದರೆ ಇಲ್ಲಿ, ಹಬ್ಬಗಳನ್ನು ಆಚರಿಸುವಾಗಲೂ ಮೊದಲಿಗೆ ದಾದಾಜಿನೋ ಬೋಕ್ಡೊ ಆಚರಣೆಯಾದ ಮೆಲೆಯೇ ದೇವಿಯ ಹರಕೆಯ ಬಲಿಯಿರುತ್ತದೆ. ಇಲ್ಲವಾದರೆ ಆ ತಾಯಿ ಕೂಡ ಹಬ್ಬವನ್ನು ಒಪ್ಪುವುದಿಲ್ಲ. ಇದನ್ನು 'ವಧಾವ' (ಗುಲಗಂಜಿಶಾಸ್ತ್ರ) ನೋಡುವಾಗ ಸ್ಪಷ್ಟವಾಗಿ ಜಬಾವಿನಲ್ಲಿ ಎಲ್ಲರೂ ಆಶ್ಚರಿ ಪಡುವಂತೆ ಬಂದುಬಿಡುತ್ತದೆ. "ಮೊದಲು ದಾದಾಜಿಗೆ ಪೂಜಿಸಿ, ಇಲ್ಲವಾದರೆ ನನಗೂ ಬೇಡ" ಎಂದು.

ಆಚರಣೆ : ತಾವು ವಾಸಿಸುವ ಬಿಡಾರಗಳಿಂದ ಅನತಿ ದೂರ ಶುಭ್ರವಾದ ಜಾಗವನ್ನು ಆಯ್ಕೆ ಮಾಡಿಕೊಂಡು ಹೊಸ ಬಿಡಾರ ಹೂಡುತ್ತಾರೆ. ಹಿಂದೆ ಸೊಪ್ಪುಗಳಿಂದ ಚಿಕ್ಕ ಜೋಪಡಿಯನ್ನು ಕಟ್ಟುತ್ತಿದ್ದರು. ಈಗಿನವರು ಪ್ಲಾಸ್ಟಿಕ್‌ನ ಟೆಂಟುಗಳನ್ನು ಬಳಸುತ್ತಾರೆ. ಜೋಪಡಿಯೊಳಗಿನ ಜಾಗವನ್ನು ಹೆಣ್ಣುಮಕ್ಕಳು, ಟೀಕಂಧಾರಿಣಿ, ಅಶಲ್‌ವಂತಿ (ಶುಭ್ರ ಗೊಂಡವಳು) ಬಳಿಯಬೇಕು.

ಹೆಣ್ಣುಮಕ್ಕಳು ಮೈನೆರೆದವರು, ನೆರೆಯಲಿಲ್ಲದವರೂ ಬಳಿಯಬಹುದು. ಮೈನೆದವಳ ಚಾರಿತ್ರ್ಯಕ್ಕೆ ಯಾವ ಕಳಂಕವಿರಬಾರದು. ಅಂಥವಳು ಅಲ್ಲಿಗೆ ಹೋಗಿ ಬಳಿಯುವುದಿಲ್ಲ.

ಟೀಕಂಧಾರಿಣಿ ಗಂಡಿಗೆ ಮೊದಲ ಸಲ ಮದುವೆಯಾದವಳು. ತ್ರಾಂಗಡೂ ಎದುರು ಗಂಡಿ ನೊಡನೆ ಕುಳಿತು, ಗಂಡಿನ ಹಿರಿಯನಿಂದ ಪವಿತ್ರ ಕುಂಕುಮದ ಹಣೆಬೊಟ್ಟು ಇರಿಸಿಕೊಂಡವಳು ಟೀಕಂಧಾರಿಣಿ (ತಿಲಕಧಾರಿಣಿ) ಯಾಗುತ್ತಾಳೆ. ಆಕೆಯೂ ಚಾರಿತ್ರ್ಯ ಕಾಪಾಡಿಕೊಂಡಿರಬೇಕು. ಇಲ್ಲವಾದರೆ ಟೀಕ(ತಿಲಕ)ವಿಡುವುದಿಲ್ಲ. ಆಶಲ್‌ವಂತಿ ತಾನೂ ಪವಿತ್ರಳಾಗಿ ದೇವರಿಗೆ ಸೇವೆ ಮಾಡಬೇಕೆಂಬಾಸೆಯಿದ್ದರೆ ಪಂಚಾಯಿತಿಯಲ್ಲಿ ಹಿರಿಯರು ವಿಧಿಸುವ ದಂಡತೆತ್ತು ನಂತರ ಹಬ್ಬಗಳಲ್ಲಿ ದೇವರ ತ್ರಾಂಗಡೂ ಇಡುವ ಸ್ಥಳವನ್ನು ಬಳಿದು ಹಿರಿಯರ ತಲೆಗೆ ಎಣ್ಣೆ ಹಾಕಿದರೆ ಆಕೆ ಪವಿತ್ರಳಾಗುತ್ತಾಳೆ. ಹೀಗೆ ಆಕೆ ಅಶಲಾವ್ (ಪವಿತ್ರಳಾಗುವುದು) ಆಗಿದ್ದರಿಂದ ಆಕೆಯನ್ನು ಅಶಲ್‌ವಂತಿ ಎನ್ನುತ್ತಾರೆ. ಇಲ್ಲವಾದರೆ ಪಾಪೇಲಿ (ಚಾರಿತ್ರ್ಯಗೆಟ್ಟವಳು) ಅನ್ನಿಸಿಕೊಂಡು ಸಮಾಜದಲ್ಲಿ ಗೌರವ ಕಳೆದುಕೊಳ್ಳುತ್ತಾಳೆ.

ಹಬ್ಬಗಳು ಸಂಜೆಯಾಗುತ್ತಲೂ ಆರಂಭಗೊಳ್ಳುತ್ತದೆ. ಹಬ್ಬದ ಬಿಡಾರದ ಮುಂದೆ ಒಂದು ಚಿಕ್ಕ (ಚರೋಯ್) ಗುಂಡಿಯನ್ನು ಮಾಡುತ್ತಾರೆ. ಬಲಿಯ (ಕಾವು) ರಕುತ ದೇವಿಗೆ ಎರಿಸುವಾಗ (ಖಪ್ಪರ್) ಮೂರ್ತಿಯನ್ನು ಅಲ್ಲಿಟ್ಟಿರುತ್ತಾರೆ. ನಂತರದಲ್ಲಿ ದೇವಿಯ ಆವಾಹನೆಯಾಗಿರುವ ಪೂಜಾರಿ (ಭವನ್ಯೋ) ಆಪೋಷಿಸುತ್ತಾನೆ. ಎಡಭಾಗದಲ್ಲಿ ಮೂರು ದೊಡ್ಡ ಕಲ್ಲುಗಳನ್ನಿಟ್ಟು ಪೂಜೆಗೆ ಬೇಕಾದುದನ್ನು ಬೇಯಿಸಲು ಅಣಿಮಾಡುತ್ತಾರೆ. ಇದ್ರಲ್ಲಿ ಕಷ್ಟೆಗೆ ಬೇಕಾಗುವ ಕಜ್ಜಾಯ ದಾದಾಜಿನೋ ಬೋಕ್ಯೊ ಬೇಯಿಸಲು ಹಬ್ಬದ ನಂತರದಲ್ಲಿ ಉಳಿದ ತಲೆಯ ಭಾಗ 'ಶೀಶ್' ಅನ್ನು ಪೂಜಾರಿಗಳು ಬೇಯಿಸಿ ತಿನ್ನಲು ಉಪಯೋಗಿಸುತ್ತಾರೆ. ಸ್ವಲ್ಪ ದೂರದಲ್ಲಿ ಇನ್ನೊಂದು ದೊಡ್ಡ ಉದ್ದನೆಯ ಒಲೆ ರಚಿಸುತ್ತಾರೆ. ಇಲ್ಲೂ ಕೂಡ ಮಾಂಸವನ್ನು ಬೇಯಿಸಬಹುದು. ಮತ್ತು ಖ್ಯಾಳೋ (ಕಲೀಜ) ಸುಡಲು ಉಪಯೋಗಿಸುತ್ತಾರೆ. ಇದಕ್ಕೆ 'ಚರಯ್' ಎನ್ನುತ್ತಾರೆ. ದಾದಾಜಿಗೆ ಬೋಕ್ಯೊ ಕೊಡುವಾಗ ಇದರ ಉಪಯೋಗವಿದೆ. ಆ ಕುರಿಯ ಜಠರದ ಚರ್ಮವನ್ನು ಒಂದೊಂದು ಹಿಡಿಯಷ್ಟು ಕತ್ತರಿಸಿಕೊಂಡು ಢಾಕ್‌ಗೆ ವಾದ್ಯದ ವಸ್ತು ಏರಿಸುತ್ತಾರೆ. ಮಾರನೇ ದಿನದ ದೇವಿಯ ಹಬ್ಬಕ್ಕೆ ಢೆಬ್ಯು, ಢಾಕ್‌ನ್ನು ಬಾರಿಸುತ್ತಾ ಆಕೆಯ ಪುರಾಣದ ಮಹಿಮೆಯನ್ನು ಕೊಂಡಾಡುತ್ತಾರೆ.

ಬಿಡಾರದ ಸುತ್ತ ಖಾಕರಾನು ಫೂಲ್ ಮುದುಕನ ಎಲೆಯ ಹೂವುಗಳ ಡಾಳಿ ಕೊಂಬೆಗಳನ್ನು ನೆಡುತ್ತಾರೆ. ಅದರ ನಂತರದಲ್ಲಿ ಹೆಂಗಸರು ಮಕ್ಕಳು ಕುಳುತು ಆಚರಿಸುವ ಹಬ್ಬಗಳನ್ನು ವೀಕ್ಷಿಸುತಾರೆ. ಪದಗಳನ್ನು ಹಾಡುತ್ತಾರೆ. ಆಯಾ ಸಂದರ್ಭಕ್ಕನುಸಾರವಾಗಿ ಭಾಗಿಯಾಗುವಂತಿಲ್ಲ. ಹಬ್ಬಗಳಿಗೆ ಬೇಕಾಗುವ ಸಾಮಾನುಗಳನ್ನೆಲ್ಲ ಅಂದಂದೇ ಖರೀದಿಸಿ ಸಿದಾ ಬಿಡಾರಕ್ಕೆ ಒಯ್ಯಬೇಕಾಗುತ್ತದೆ. ಮನೆಯಲ್ಲಿಟ್ಟುಕೊಳ್ಳುವಂತಿಲ್ಲ ಮತ್ತು ಹೆಂಗಸರು ಮುಟ್ಟುವಂತಿಲ್ಲ.

ಥಡಿ : ಭರ್ನುದಲ್ಲಿ ಮೊದಲು ಪೂಜೆಗೊಳ್ಳುವ ದಾದಾಜಿಯನ್ನು ಗುಜರಾತ್‌ವಾಳೋರಲ್ಲಿ ಅಕ್ಕಿಯಿಂದ ಚಿತ್ರ ಬರೆದು ಆಕಾರ ಕೊಡುತ್ತಾರೆ. ಇದಕ್ಕೆ 'ಥಡಿ' ಎನ್ನುತ್ತಾರೆ. ಐದು ತರಹದ

ಸೊಪ್ಪಿನಿಂದ ಅಲಂಕರಿಸುತ್ತಾರೆ. ಹೊಕ್ಕಳದ ಬಳಿ, ಹಣೆಮೇಲೆ, ಎರಡು ಕೈಗಳಿಗೆ ಮತ್ತು ಎದೆಯ ಭಾಗದಲ್ಲಿ ಸೊಪ್ಪಿಡುತ್ತಾರೆ. ತಂದ ಅಕ್ಕಿಯಿಂದ ಸ್ವಲ್ಪದರಲ್ಲಿ ಎಲ್ಲರಿಗೂ ಅಕ್ಷತೆ ನೀಡುತ್ತಾರೆ. ದಾದಾಜಿಗೆ ತಂದ ಕುರಿಯನ್ನು ನಿಲ್ಲಿಸಿ, ನೀರು ಚಿಮುಕಿಸುತ್ತಾ ಹಿರಿಯರು ಜಬಾಬು (ಜವಾಬು) ಹೇಳುತ್ತಾರೆ. ಆಯರ ಜಬಾಬಿನಲ್ಲಿ ಮೈದಡವುತ್ತದೊ ಅದನ್ನೇ ದಾದಾಜಿಯ ಅಪ್ಪಣೆ ಎಂದು ನಂಬುತ್ತಾರೆ. ದಾದಾಜಿಯ ಕುರಿಬಲಿಯಲ್ಲಿ ಪೂಜಾರಿಗೆ ಭವನ್ (ದೇವಿಯ ಆವಾಹನೆ) ಬರುವುದಿಲ್ಲ. ಜಬಾಬು ಅಷ್ಟೇ. ಪೂಜಾರಿಯಾದವನು ಯಾರೊಂದಿಗೂ ಮಾತಾಡುವಂತಿಲ್ಲ. ಕಡಿದ ಕುರಿ ತಲೆಯನ್ನು ಥಡಿ ಮೇಲಿಡುತ್ತಾರೆ. ತಲೆ ಮೂರು ಸಲ ಬಾಯ್ತೆರೆದರೆ ದಾದಾಜಿಯು ಕಷ್ಟ ನಿವಾರಣೆಗೆ ಅಪ್ಪಣೆ ಕೊಟ್ಟಂತೆ ಎಂದು ನಂಬುತ್ತಾರೆ. ಅನುಕ್ರಮದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಕ್ರಮವಾಗಿ ಕೂರಿಸುವಾಗ ಮೊದಲು ದಾದಾಜಿಯ ಪಾನ್ ಇರುತ್ತದೆ.

ಗುಜರಾತ್ಯರಲ್ಲಿ ಮೊದಲು ಥಡಿಯ ಅಕ್ಕಿಯನ್ನು ಸ್ವಲ್ಪ ತೆಗೆದು ಎಲ್ಲರಿಗೂ ಅಕ್ಷತೆಯಾಗಿ ಹಂಚುತ್ತಾರೆ. ಕುರಿಬಲಿಯಾದ ಮೇಲೆ ಅಕ್ಷತೆ ಹಾಕಿ ನಮಸ್ಕರಿಸಿ ಕೈಯಲ್ಲಿ ತಮ್ಮ ಕಷ್ಟ ಸುಖ ಕೇಳಲೋಸುಗ ಉಳಿಸಿಕೊಂಡು ಕೆಲವೊಂದು ಅಕ್ಕಿಕಾಳುಗಳಲ್ಲಿ ಸರಿ ಮತ್ತು ಬೆಸದಂತೆ ಕಣಿ ಕೇಳಿದಂತೆ ಎಣಿಸಿ ಸಮಾಧಾನ ಕಂಡುಕೊಳ್ಳುತ್ತಾರೆ. ಉಳಿದ ಅಕ್ಕಿಯನ್ನು ಬೇಯಿಸಿ ಮಾಡಿದಂಥ ಅನ್ನವನ್ನು ಹರಿವಾಣ(ಥಾಳ್ ಭರಾನು)ದಲ್ಲಿ ತುಂಬುತ್ತಾರೆ.

ನಿಯಮಗಳು ದಾದಾಜಿಗೆ ಕುರಿಕಡಿವಾಗ ಗುಜರಾತ್ಯೋ ಪಾಲಿಸುವುದು

೧. ವೋಳ್ಯ ಇಲ್ಲ. ವೀಳ್ಯದೆಲೆಯನ್ನೆ ದಾದಾಜಿಯ ಹೆಸರಿನಲ್ಲಿ ಕೂರಿಸುವುದು

೨. ದಾದಾಜಿಯ ಆಕಾರವಾಗಿ ಹೊಸದಾಗಿ ತಂದ ಅಕ್ಕಿಯಿಂದ ಆಕಾರ ಹಾಕುವುದು ಥಡಿ ಹಾಕುವುದು.

೩. ಕುರಿಬಲಿಯಾದ ಮೇಲೆ ಅಕ್ಕಿ ಬೇಯಿಸಿ ಥಾಳ್ ತುಂಬೋದು ಮತ್ತು ಕೋಳಿ ನೀಡುವ ಶಾಸ್ತ್ರದೊಂದಿಗೆ ಎಲ್ಲ ಮೊದಲ ನಾಲ್ಕು ಶ್ಲೋಕ ಕೊನೆಯ ಒಂದು ಶ್ಲೋಕಗಳ ಪಠಣ ಮಾಡುವುದು.

ಕೋಳಿ ನೀಡುವ ಶಾಸ್ತ್ರ ಮಾಡುವಾಗ ಪೂಜಾರಿಯಾದವನು ತನ್ನ ಕೈಯಲ್ಲಿ ಕರೋಯ್ ಬಗಲಿ ಮಾಂಸ ಪಕ್ಕೆಯ ಮುಂದಿರುವ ಮಾಂಸ ಕಾಳ್ಜ ಕಲೀಜ ಚಾರ್‌ಗೂಡ್ ನಾಲ್ಕು ಕಾಲಿನ ತೊಡೆಯ ತಿರುಪು ಹಿಡಿದು ಕೂತುಕೊಂಡೇ ದಕ್ಷಿಣಾಭಿಮುಖವಾಗಿ ಎಲ್ಲ ಶ್ಲೋಕ ಹೇಳುತ್ತಾರೆ.

ಮೊದಲ ನಾಲ್ಕು ಶ್ಲೋಕಗಳು

೧. ಯಲಲ... ಅಬ್ ಥಾಮ್ ಮೈರುಮಂಡಾಣ್, ಚಾರ್‌ಕೂಟ್ ಚೌದಾಭವನ್ನೊ ಪೂಜ್ಯೊ

೨. ಯಲಲ... ಅಕ್ಬರ್, ಬಾಬರ್, ಅಮಾಶಬಾಷ, ತಮಾಶಬಾಷ, ನವರಂಗ್ಯೋ ಮಹಾಬಲಿನೋ ಪೂಜ್ಯೋ

೩. ಯಲಲ... ಚ್ಛಪ್ಪನ್‌ನಾಕ್ ಧ್ಯೆರು ಚಾಂಭರ್ತ ಝೂಲ್ನ ಧ್ಯೆರು ದೇವಿ ವೈರಾಗನ್ ವೀಖ್ಯಿಳೀನೋ ಪೂಜ್ಯೊ

೪. ಯಲಲ... ಹರಣ್‌ಚಾರಿ, ಗಾಯ್ ಗವತ್ರಿ ಶೇಕಡೈಬೋತಿ ವಾಗ್ರಿವೊಲ್‌ನೋ ಪೂಜ್ಯೊ

**ಕೊನೆಯ ಒಂದು ಶ್ಲೋಕ**

೫. ಮುಂಜಾನು ಧ್ಯೆರು ಖ್ಯೋನ್ನಾನಿವರಿ ರೂಪಾನಿಧಾರಿ ಖ್ವಾಳ್‌ದಾಳ್ ಊದ್ ಕಪೂರ್‌ನೊ ಪೂಜ್ಯೊ ಮೂರು ಸಲ ಪಠಿಸಬೇಕು.

ನಂತರ ಧೀಭಾ ತೀರ್ಥ ಪ್ರೋಕ್ಷಿಸಿ ವಧಾವ ನೋಡಿ ಪ್ರಸಾದ ವಿನಿಯೋಗಿಸುತ್ತಾರೆ.

**ಶ್ಲೋಕಗಳ ಕನ್ನಡರ್ಥ**

ಲಂಗರಿನಲ್ಲಿ ಮೊದಲು ಪೂಜಾರ್ಹನಾದ ದಾದಾಜಿಯನ್ನು ಪೂಜಿಸುವಾಗ ಕೋಳಿಶಾಸ್ತ್ರವನ್ನು ದಾದಾಜಿಯ ಆಚರಣೆಯ ಕೊನೆಯ ಹಂತದಲ್ಲಿ ಕೈಯಲ್ಲಿ ಹಿಡಿದು ದಕ್ಷಿಣಾಭಿಮುಖಿ ಕುಳಿತು ಹೇಳುತ್ತಾರೆ.

೧. ಯಲಲ... ಆಬ್ ಥಾಮ್
ಮೈರುಮಂಡಾಣ್, ಚಾರ್‌ಕೂಟ್
ಚೌದಾಭವನ್ನೊ ಪೂಜ್ಯೊ

ಆಬ್ ಥಾಮ್- ಆಗಸ ನಿಲ್ಲಿಸಿದವನು; ಮೈರು ಮಂಡಾಣ್ - ಪ್ರಪಂಚವೆಂಬ ಮನೆಗೆ (ಕುಟುಂಬ) ಕಾರಣನಾದವನು; ಚಾರ್‌ಕಟ್ - ನಾಲ್ಕು ದಿಕ್ಕು; ಚೌದಾ - ಹದಿನಾಲ್ಕು, ಚೌದಾ ಭವನ್ನೊ - ಹದಿನಾಲ್ಕು ಲೋಕಗಳ ಪೂಜಾರಿಗಳಿಂದಲೂ; ಪೂಜ್ಯೋ - ಪೂಜಿಸಲ್ಪಡು ವವನು.

ಮನುಷ್ಯ ಜೀವಿಗಳನ್ನು ನಿರ್ಮಿಸಿ ರಕ್ಷಣೆಗಾಗಿ ಆಗಸವನ್ನು ಮೇಲಕ್ಕೆ ನಿಲ್ಲಿ, ಪ್ರಪಂಚವೆಂಬ ಮನೆಯಲ್ಲಿ ಆ ಜೀವಿಗಾಗಿ ಉಳಿಯಲು ಜಾಗವನ್ನು ಗೊತ್ತುಪಡಿಸಿದ, ಪ್ರತಿಫಲವಾಗಿ ನಾಲ್ಕು ದಿಕ್ಕುಗಳಿಂದಲೂ ಹದಿನಾಲ್ಕು ಲೋಕಗಳಲ್ಲೂ ಇರಬಹುದಾದಂತಹ ಜೀವಿಗಳಿಂದ ಹವಿಸ್ಸನ್ನೂ ಶಾಂತಿಯನ್ನು ಬಯಸಿ ಅವರಿಂದ ಪೂಜಿಸಲ್ಪಟ್ಟ ದಾದಾಜಿಗೆ (*ದಾಃ = ಕೊಡುವವನು ದಾಃ + ಆಬ್ = ಅಂದಂದಿಗೆ ದಾದಾಜ್ - ದಾದಾಜಿ)

ಯಲಲ... 'ಓ ದೇವರೆ ಅರ್ಪಿಸಿಕೊ' ಎಂಬುದಾಗಿ ಮೊದಲ ಶ್ಲೋಕದ ಮೊದಲ ಪಾದದ ಅರ್ಥಬರುತ್ತದೆ.

೨. ಯಲಲ... ಅಕ್ಬರ್, ಬಾಬರ್,
ಆಮಾಶಬಾಷ, ತಮಾಶಬಾಷ, ನವರಂಗ್ಯೋ
ಮಹಾಬಲಿನೋ ಪೂಜ್ಯೋ

---

**ದಾಃ ಕೊಡುವವನು ಭಗವಾತ್‌ಗೀತಾ ಯಥಾರೂಪ ಸ್ವಾಮಿ ಪ್ರಭುಪಾದರು ಭಕ್ತಿವೇದಾಂತ*

ಮೊಗಲರ ಅಕ್ಬರ್, ಬಾಬರ್, ಅಮಾರಬಾಷ್, ತಮಾಶಬಾಷ, ಮೊದಲಾದವರಿಂದಲೂ ಯಲಲ > ಯಲ್ಲ > ಯ ಅಲ್ಲಾ = 'ಯ ಇಲ್ಲಾಹ ಇಲ್ಲಲ್ಲ' ಎಂದು ಪೂಜಿಸಲ್ಪಟ್ಟ ದಾದಾಜಿಯೇ ತುಳಜಾಗಡದ ನವರಂಗ್ಲೋ (ಪುರಾಣದಲ್ಲಿ ಬರುತ್ತದೆ). ಮತ್ತು ಮಹಾಬಲಿಗಳಿಂದಲೂ ಪೂಜಿಸಲ್ಪಟ್ಟವನಾದ (ದಾದಾಜಿಯೆ) ಯಲಲ... ಓ ದೇವರೆ ಅರ್ಪಿಸಿಕೊ. ಈ ಎರಡನೆ ಶ್ಲೋಕದಲ್ಲಿ ಗಮನಿಸಬಹುದಾದ ಅಂಶವೆಂದರೆ ಅಕ್ಬರ್ ಎಂಬ ಮೊಗಲರ ರಾಜ ಬಾದಷಹ ಬಾಬರನ ಮಗನಾಗಿದ್ದ. ಆತನಿಗೆ ಮೆವಾಡದ ರಾಣಾಪ್ರತಾಪ ನೊಂದಿಗಾದ ಭೀಕರ ಕಾಳಗದಲ್ಲಿ ರಾಣಾನು ಪೂಜಿಸುತ್ತಿದ್ದ ದೇವಿ ಜಮಖಂಡಿ ಈಗಿನ ಹಕ್ಕಿಪಿಕ್ಕಿಗರ ನಾಕೋಡ್ (ಏಳು ಕೊಳಗ ಎಲ್ಲಮ್ಮ) ಅವರ ಮಾತಿನಲ್ಲಿ 'ನಾಕೋಡ್' ಎಂದರೆ ಒಂಬತ್ತು ಕೊಳಗ ಎಲ್ಲಮ್ಮ ವೆಂದಾಗುತ್ತದೆ. ಗಂಡನ ಶಾಪದಿಂದ 'ಖಿರಫಕೋಡ್' (ಕುಷ್ಟರೋಗದ) ನಿವಾರಣೆಗಾಗಿ ಒಂಬತ್ತು ಕೊಳಗಳ ಸ್ನಾನ ಮಾಡಿದಾಗ ರೋಗ ನಿವಾರಣೆಯಾಗಿ ಶಾಪ ವಿಮೋಚನೆಯಾಗುತ್ತದೆ. ಹೀಗೆ ಒಂಭತ್ತು ಕೊಳಗಳ ಸಂಕೇತವಾಗಿ 'ನಾಕೋಡ್' ಎಂಬ ಹೆಸರಾಗಿರಬಹುದು). ಗದ್ದುಗೆಯನ್ನು ಬಿಡಿಸಿ ಆ ಪ್ರದೇಶವನ್ನು ಮುಸ್ಲಿಂ ರಾಜ್ಯವನ್ನಾಗಿ ಮಾಡಲು ಪ ತೊಡುತ್ತಾನೆ. ಆದರೆ ಅಕ್ಬರನ ಎಲ್ಲ ಪ್ರಯತ್ನಗಳೂ ದೇವಿ ಜಮಖಂಡಿ (ಎಲ್ಲಮ್ಮ)ಯೆದುರು ನಿಷ್ಫಲವಾಗುತ್ತದೆ. ಇದನ್ನರಿತ ದಾದಾಜಿಯು ತನ್ನ ಪರಮಭಕ್ತ ಅಕ್ಬರನ ಸೋಲಾಗುತ್ತಿರುವುದನ್ನು ಸಹಿಸದೆ, ಉಪಾಯ ಹೇಳಿಕೊಡುತ್ತಾನೆ. ಗದ್ದುಗೆಯ ಎದುರಿದ್ದ ಎರಡು ಕೊಂಡ(ಕೊಳ)ಗಳಾದ ದೇವ್ ಕುಂಡ್ ಸುರಜ್ ಕುಂಡ್‌ಗಳು ಮಲಿನವಾಗುವಂತೆ ನಪಾಶ್ (ಮರ್ಮಾಂಗ) ದೇವಕುಂಡದಲ್ಲಿ ತೊಳೆದು ಸುರಜ್ ಕುಂಡದಲ್ಲಿ ಉಗುಳಬೇಕೆಂದು ಪ್ರೇರಿಪಿಸುತ್ತಾನೆ. ಅಪವಿತ್ರವಾದ ಕೊಳಗಳಲ್ಲಿ ಕೆಟ್ಟ ಹುಳಗಳು ಹುಟ್ಟಿ ದುರ್ನಾತವನ್ನು ಸಹಿಸಲಾರದೆ ದೇವಿ ಆ ಗದ್ದುಗೆ (ಗಡ್) ಬಿಡಬೇಕಾಯಿತು. ಹೀಗಾಗಿ ದೇವಿಯ ಬಲವಿಲ್ಲದೆ ರಾಣಾ ಸೋಲನ್ನನುಭವಿಸುತ್ತಾನೆ. ಅವನ ಜೊತೆಯಲ್ಲಿ ಕದನದಲ್ಲಿ ರಣವೀರರಾದ ಜಂಗಿಗಳಲ್ಲಿ ಜಮಲ್ ಫತ್ತೊ(ಫತ್ತ-ಜಮಲ್)ನ ದುರ್ಮರಣವೂ ಸಂಭವಿಸುತ್ತದೆ. ಉಳಿದವರು ಮುಸ್ಲಿಮರ ಕೈಗೆ ಸಿಗದೆ ಕಾಡುಪಾಲಾಗುತ್ತಾರೆ. ಈತನೇ ಮೇವಾಡೊದವರ ಮುಂದಿನ ಸಂತತಿಗೆ ಕಾರಣನಾದವನು. ದಟ್ಟದರಿದ್ರರಾಗಿ ಕಾಡುಪಾಲಾಗಿ ಕೊನೆಗೆ ಹಕ್ಕಿಪಿಕ್ಕಿಗರೆಂದು ಕರೆಯಿಸಿಕೊಂಡಿರುವ ಈಗಿನ 'ಹಕ್ಕಿ ಶಿಕಾರಿ'ಗರು 'ಮೆಲು ಶಿಕಾರಿ'ಗರು ಆಗಿದ್ದಾರೆ. ಮೇವಾಡೊದವರಗುರು ಭೈರುನಾಥನ ನಂತರದವನೇ ಗುರು ಭತ್ತ ಜಮಲ್ ಅಥವಾ ಜಮಲ್‌ಫತ್ತೊ.

೩. ಯಲಲ... ಚ್ಚಪ್ಪನ್ ನಾಶ್ ಧ್ಯೆರು,
ಜಾಂಭಕ್ತ ಝೂಲ್ಲಧ್ಯೆರು
ದೇವಿ ವ್ಯೆರಾಗನ್ ಮೀಖ್ಬಲೀನೋ ಪೂಜ್ಯೊ

ಯಲಲ... ಅರ್ಪಿಸಿಕೊ ಸಮರ್ಪಿಸಿಕೊ; ಚಪ್ಪನ್- ಐವತ್ತಾರು; ಧ್ಯೆರು - ದೇವತೆ; ಜಾಂಭರ್ತ ಝೂಲ್ಲ - ಗಿಡಗಂಟಿ, ಮರಬಳ್ಳಿ ಹೂಗಳೊಂದಿಗೆ ತೂಗಾಡುವಂತವನು; ವ್ಯೆರಾಗನ್ -

ವೈರಿಗಳನ್ನು ಸಂಹರಿಸುವ ಶಕ್ತಿ ಕುಂದಿಸುವ; ವಿಖ್ಖಳೀ ನೋ - ಇಪ್ಪತ್ತು ಕೈಗಳುಳ್ಳ ದೇವಿಯ; ಪೂಜ್ಯೋ- ಪೂಜಿಸಲ್ಪಡುವವನು.

ಐವತ್ತಾರು ದೇವತೆಗಳಿಂದಲೂ ಪೂಜಿಸಲ್ಪಡುವವನೂ, ಗಿಡ ಮರ ಬಳ್ಳಿಗಳಲ್ಲಿ ಅರಳಿ ನಗುವ ಹೂವುಗಳೊಂದಿಗೆ ತೂಗಾಡುವ ದೇವನೂ, ವೈರಿಗಳನ್ನು ಸಂಹರಿಸಿ ತನ್ನ ಭಕ್ತರನ್ನು ಸದಾ ಸಲಹುವ ದೇವಿ ವೈರಾಗನ್ ವೀಖ್ಖಳಿಯಿಂದಲೂ ಪೂಜಿಸಲ್ಪಡುವ ದಾದಾಜಿಯೇ ಅರ್ಪಿಸಿಕೊ...

ಇಲ್ಲಿ ಆಯಾ ಪಂಗಡಗಳಲ್ಲಿ ಆಯಾ ಕುಲದೇವಿಯ ಹೆಸರು 'ದೇವಿ ವೈರಾಗನ್ ವೀಖ್ಖಳಿ' ಎಂಬಲ್ಲಿ ಬರುತ್ತದೆ. ಇದು ಆಯಾ ಪಂಗಡದವರು ಲಂಗರಲ್ಲಿ ದಾದಾಜಿಗೆ ಕೋಳಿಹಿಡಿವ ಶಾಸ್ತ್ರ ಮಾಡುವಾಗ ಸೇರಿಸಿ ಹೇಳುವುದು ಸಂಪ್ರದಾಯವಾಗಿದೆ.

೪. ಯಲಲ... ಹರೆಣ್ ಚಾರಿ
ಗಾಯ್-ಗವತ್ರಿ ಖೇಕಡಾಭೋತಿ
ವಾಗ್ರಿವೇಲ್‌ನೊ ಪೂಜ್ಯೋ

ಕೊನೆಯ ಒಂದು ಶ್ಲೋಕ

ಮುಂಜಾನು ಧೈರು ಖ್ಯೋಣ್ಣಾನಿವರಿ ರೂಪಾಸಧಾರಿ
ಖ್ಹಾಳ್‌ದಾಳಂ ಊದ್ - ಕಪೂರ್‌ನೊ ಪೂಜ್ಯೋ ||| (ಮೂರು ಸಾರಿ ಪಠಣ)

ಮುಂಜಾನು- ನಾಲ್ಕನೆ ಜಾವ (ಬೆಳಗು ಹರಿವುದಕ್ಕೆ ಮುನ್ನ ಮುಂಜಾವು, ರಾತ್ರಿಯ ನಾಲ್ಕು ಪಹರ್(ಜಾವ)ಗಳಲ್ಲಿ ನಾಲ್ಕನೆ ಜಾವ) ಧೈರು - ದೇವತೆ; ಖ್ಯೋಣ್ಣಾನಿವರಿ - ಬಂಗಾರದ ತುಣುಕು, ರೂಪಾನಿಧಾರಿ - ಬೆಳ್ಳಿಯ ಧಾರೆ; ಖ್ಹಾಳ್ - ಭತ್ತ; ದಾಳ್ - ಬೇಳೆ; ಊದ್- ಧೂಪ; ಕಪೂರ್ - ಕರ್ಪೂರ; ಪೂಜ್ಯೋ - ಪೂಜಿಸಲ್ಪಡುವವ.

ಬೆಳಗಿನ ಚುಮುಚುಮು ಬೆಳಕು ಚೆಲ್ಲುವ ಮೊದಲು ನಾಲ್ಕನೆ ಜಾವಕ್ಕೆ ಸಮೀಪದ್ದು ಮುಂಜಾನು ಆ ಸಮಯಕ್ಕೆ ಕಾರಣನಾದ ದೇವಾ! ನಿನಗೆ ಬೆಳಗಿನ ಉಷೆಯು ಬಂಗಾರದ ತುಣುಕುಗಳಿಂದಲೂ ಚಿನ್ನದ ಧಾರೆಗಳಂಥ ಬೆಳಕುಗಳಿಂದಲೂ ಶೋಭಾಯಮಾನಳಾಗಿ ನಸುನಾಚಿ ಪೂಜಿಸುವಂತೆ ಇಹದಲ್ಲಿ ಬದ್ಧಿರುವ ನಮ್ಮ ಜೀವಿತಕ್ಕೆ ಭತ್ತ ಬೇಳೆ-ಕಾಳುಗಳ ಸಮೃದ್ಧಿಗೆ ಕಾರಣನಾದ ದೈವ ದಾದಾಜಿ, ಹಾಲುಮಡ್ಡಿ ಕರ್ಪೂರಗಳಿಂದ ಪೂಜಾ ವಿಧಿಗಳನ್ನು ಅರ್ಪಿಸಿಕೊಳ್ಳುವವನು.

ವಾಚ್ಯ (ಮಾತು) : ಮಾರ್‍ಯಾನುಭಿ ಖಾವಾಳೋಲಾ ದಾದಾಜಿ, ಜೇಲ್ಯಾನುಭಿ ಖಾವಾಳೋ ದಾದಾಜಿ, ಜಿನು ಖ್ಯೆ ಶೀನ ಹಕ್ಲಾಲ್ ಕರ್‍ಯೋಲಾ ದಾದಾಜೀ...

ಅರ್ಥ : ಮಾರ್‍ಯಾನುಭಿ - ಸತ್ತವರದೂ; ಖಾವಾಳೋಲಾ - ತಿನ್ನುವವನು; ಜಿವ್ಯಾನುಭಿ - ಜೀವವಿರುವವರದೂ; ಖಾವಾಳೋಲಾ - ತಿನ್ನುವವನು; ಜಿನು - ತಮ್ಮದು, ಅವರದು; ಖ್ಯೆ - ತಿಂದು; ಶೀನ - ಅವರ; ಹಕ್ಲಾಲ್ - ತೃಪ್ತಿ; ಕರ್‍ಯೋಲಾ - ಮಾಡುವಂತವನಾಗು.

ಭೀಬಾ ಕೋಳಿಶಾಸ್ತ್ರ ಆದ ಮೇಲೆ ವಧಾನ ನೋಡಿ ತೀರ್ಥ ಪ್ರೋಕ್ಷಣೆ ಮಾಡುತ್ತಾರೆ.

ಇದಕ್ಕೆ 'ಛೀಚಾ' ಎನ್ನುತ್ತಾರೆ. ಹಬ್ಬಗಳಲ್ಲಿ ಕಥ್ಯೆಗಳಲ್ಲಿ ಛೀಚಾಶಾಸ್ತ್ರಕ ಆದ ಮೇಲೆಯೇ ಪ್ರಸಾದ ಸ್ವೀಕಾರಕ್ಕೆ ವಿನಿಯೋಗ ವಾಗುತ್ತದೆ. ಅಲ್ಲಿಯವರೆಗೂ ಯಾರೂ ಏನೂ ತಿನ್ನುವಂತಿಲ್ಲ. ಅದು 'ವಿಠ್ಕು' (ಎಂಜಲು) ಆಗಿ ಹಬ್ಬದ ನಿಯಮ ಮುರಿದು ಬೀಳುತ್ತದೆ ಎನ್ನುತ್ತಾರೆ.

ಇದಾದ ನಂತರ ಮಾಂಸ ತುಂಡರಿಸಿ ಬೇಯಿಸುತ್ತಾರೆ. ಗುಜರಾತ್‌ವಾಳರಲ್ಲಿ ತುಪ್ಪ ಮೆಣಸಿನಕಾಯಿ ಮಸಾಲೆ ಹಾಕಿ ಮಾಡಿದ್ರೆ ಮೇವಾಡೊ ಕಾಳಿವಾಳರಲ್ಲಿ ಬರಿಯ ತುಪ್ಪ, ಉಪ್ಪು ಹಾಕಿ ಬೇಯಿಸುತ್ತಾರೆ. ಇದೆಲ್ಲ ಕಾರ್ಯ ಮುಗಿಯುವ ಹೊತ್ತಿಗೆ ಮಧ್ಯರಾತ್ರಿಯೆ ಆಗಿರುತ್ತದೆ. ಹಕ್ಕಿಪಿಕ್ಕಿಗಳ ಹಬ್ಬಗಳು ಬಹುತೇಕ ರಾತ್ರಿಯೇ ನಡೆಯುವುದು ವಿಶೇಷ. ಕಾರಣವೆಂದರೆ ರಾತ್ರಿಯ ಮೇಲೆ ದೇವರಿಗಿಟ್ಟ ಎಡೆಗಳ ಮೇಲೆ ನೊಣಗಳು ಕೂತು ವಿಠ್ಕು ಎಂಜಲು ಮಾಡುವುದಿಲ್ಲವೆಂದು. ಹಾಗಂತ ಎಲ್ಲರಿಗೂ ಪ್ರಸಾದ ಹಂಚುವಲ್ಲಿ ನೊಣಗಳಿಗಾಗಿಯೇ ಪ್ರತ್ಯೇಕವಾಗಿ ಬೆಂದ ಕಾಳ್ಜ (ಕಲೀಜ) ಬುಕ್ಕು (ಹೃದಯ) ತಿಲ್ಲಿ (ಮೇದೋಜಿರಕ) ಅನ್ನದೊಂದಿಗೆ ಕಿವುಚಿ ಒಂದೆಡೆ ಇರಿಸುತ್ತಾರೆ. ವಧಾವ ನೋಡುವುದಿಲ್ಲ. ಎಲ್ಲರಿಗೂ ಅನ್ನ ಮಾಂಸದ ಪ್ರಸಾದ ವಿನಿಯೋಗಿಸುತ್ತಾರೆ. ಇದು ರಾತ್ರಿಯೇ ಮುಗಿಯುತ್ತದೆ. ಹೀಗೆ ಹಂಚುವುದಕ್ಕೂ ಒಂದು ನಿಯಮವಿದೆ.

೧. ಹಿರಿಯ ರಕ್ತ ಸಂಬಂಧಿ(ಗೋತ್ರಿ)ಗಳಿಗೆ ಗೂಡ್(ನಾಲ್ಕು ತೊಡೆಯ ಸಾಂದು ಮಾಂಸ ಖಂಡ)ಗಳನ್ನು ಅನ್ನದ ಜೊತೆ ಕೊಡಲೇಬೇಕಾಗುತ್ತದೆ. ಕೊಡದಿದ್ದರೆ ಹಬ್ಬ ಪರಿಪೂರ್ಣವಾಗವುದಿಲ್ಲ. ಹೆಚ್ಚು ಗೋತ್ರಿಗಳಿದ್ದರೆ ಅದರಲ್ಲೇ ಹೆಚ್ಚು ತುಂಡು ಮಾಡಬೇಕಾಗುತ್ತದೆ. ಬೇರೆ ಮಾಂಸದ ತುಂಡನ್ನು ಗೂಡಂ ಎಂದು ಕೊಡುವಂತಿಲ್ಲ. ತಿರುಪಿನ ಮೂಳೆಯನ್ನು ಗುರುತಿಸುತ್ತಾರೆ. ಅದಿಲ್ಲದಿದ್ರೆ ಹಬ್ಬದ ಪ್ರಸಾದವನ್ನು ತಿರಸ್ಕರಿಸುತ್ತಾರೆ. ಕೆಲವರಂತೂ ಜಗಳವನ್ನೇ ಪ್ರಾರಂಭಿಸಿ ಪರಸ್ಪರ ಸಂಬಂಧ ಕಡಿದುಕೊಳ್ಳುವವರೆಗೂ ಮುಂದುವರಿದಿದೆ.

೨. ಹೆಣ್ಣು ಕೊಟ್ಟಿರ ಸಂಬಂಧಿಕರಿಗೆ 'ಖ್ಹಿಗ್ಗೊಡ್' ಎನ್ನುತ್ತಾರೆ. ಈ ಖ್ಹಿಗೋಗಳಿಗೆ ಧೊಂಡಿ (ಕುರಿಯ ಹಿಂದಿನ ಜಾಲದ ಭಾಗ)ಯನ್ನು ಕಡಿದು ಹೇಳಿ ಕೊಡಬೇಕಾಗುತ್ತದೆ. ಇಲ್ಲವಾದರೆ ಜಗಳಗಳಾಗಿ, ತಮ್ಮನ್ನು ಆದರಿಸಲಿಲ್ಲವೆಂದು ಪರಸ್ಪರ ಸಂಬಂಧ ಕಡಿದುಕೊಳ್ಳುವವರೆಗೂ ಇಳಿಯುತ್ತಾರೆ. ಅಲ್ಲದೆ ತಮ್ಮ ಮಗಳನ್ನು ಕರೆದೊಯ್ಯುವವರೂ ಇದ್ದಾರೆ. ಹಾಗಾಗಿ ಧೊಂಡಿ ಪ್ರಮುಖ ಪಾತ್ರವಹಿಸುತ್ತದೆ.

೩. ಅಪ್ಪನೆಂಟರಿಗೆ ಉಳಿದ ರಕ್ತಸಂಬಂಧಿಕರಿಗೆ ಖಾಂದಾನು ಬಗರಿ ಹೆಗಲು ಮತ್ತು ಎದೆಯ ಬಾಗದ ಮೂಳೆ, ಮಾಂಸದ ಪಾಲನ್ನು ಹಂಚುತ್ತಾರೆ.

೪. ಶೀಶ್ ಶಿರದ ಚರ್ಮ ತೆಗೆದು ಅದನ್ನು ಕತ್ತರಿಸಿ ಥಡಿಯ ಅಕ್ಕಿಯ ಜೊತೆ ಬೇಯಿಸಿ, ಆ ಸಮಯದಲ್ಲಿ ಅಲ್ಲಿ ಯಾವ ಯಾವ ಹಿರಿಯರು ಇರುತ್ತಾರೊ ಅವರು ಊಟವನ್ನು ಮಾಡುತ್ತಾರೆ. ಹೆಂಗಸರಿಗೆ ಯಾವುದೇ ಪ್ರಸಾದ ಕೊಡುವುದಿಲ್ಲ.

ತಲೆಗೆ ನೀರುಹಾಕುವ ಶಾಸ್ತ್ರ

೨. ಆಬ್‌ಪಾಳ್ ಸರ್ಪರಾಜ ಗುರುತಿಗಾಗಿ ಕೂರಿಸುವುದು ಖಪ್ಪರ್ ಮೂರ್ತಿ ಇದ್ದರೆ ಖಪ್ಪರ್ ಕೂರಿಸುತ್ತಾರೆ. ಇಲ್ಲದಿದ್ದಲ್ಲದೆ ವೀಳ್ಯದೆಲೆಯನ್ನು ಉತ್ತರದಿಂದ ದಕ್ಷಿಣಕ್ಕೆ ದಾದಾಜಿಯ ಪಕ್ಕ ಕೂರಿಸುತ್ತಾರೆ. ಬೇಟೆಯಾಡುವಾಗ ತಿಳಿದೋ, ತಿಳಿಯದೆಯೋ ಹಾವಿನ ದೇಹದ ಸ್ಪರ್ಶವಾಗಿ ಬಿಟ್ಟರೂ ಅದು ಎದುರು ಕಚ್ಚಬಾರದೆಂದೂ ಬೇಡಿಕೊಳ್ಳುತ್ತಾರೆ. ತೆವಳಿಕೊಂಡು ಓಡಾಡುವ ಹಾವುಗಳಿಗೆ ಪೇಟ್ ಘೇಟ್ಣ ಎನ್ನುತ್ತಾರೆ.

ಆಚರಣೆ ಸಿಹಿ ಅಡುಗೆ ಮತ್ತು ದೂದ್‌ನಿ ಕಟೋರಿ ಹಾಲಿನ ಗಿಂಡಿ ಹೊಸಮಡಿಕೆ, ಬೆಲ್ಲ, ಸೋಂಥಾ ಕಾಳು ಅಕ್ಕಿ, ತೆಂಗಿನಕಾಯಿ, ಹೊಸದಾಗಿ ಖರೀದಿಸಿ ತರಬೇಕು. ಸಿಹಿಅಡುಗೆಯ ತಯಾರಿಸಿದ ಹೊಸ ಮಡಿಕೆಯನ್ನು ಒಲೆಯ ಮೇಲಿಂದ ಕೆಳಗಿಳಿಸದೆಯೇ ಭವನ್ ಸರ್ಪರಾಜನ ಆವಾಹನೆ ಕರೆಯಬೇಕು. ಭವನ್ ಬಂದ ಪೂಜಾರಿ (ಭವನ್ಯೋ) ಬೆಣ್ಣೆ ಹಾಕಿ ಘುಮ್ ಘುಮಿಸುವ ಮಡಕೆಯ ಬಾಪ್(ಹೊಗೆ)ನ್ನು ಮೂಸಿದಾಕ್ಷಣ ಕುಣಿದಾಡುತ್ತ ಬಾರುಕೋಲಿ (ಕೊಲ್ಡೊ)ನಿಂದ ಮೈಗೆ ಹೊಡೆದುಕೊಳ್ಳುತ್ತ ಸೀವೆಲ್ಲಿಗೆ ಹೋದ್ರು ನಾನು ಕಾಪಾಡುತ್ತೇನೆ ಎನ್ನುವ ಜಬಾಬು ಹೇಳಿದ ನಂತರ ಮೈಯಿಳಿಯುತ್ತದೆ. ಹರಿವಾಣದಲ್ಲಿ ಸಿಹಿಅಡುಗೆ "ಥಾಳ್‌ಭರಾನು" ಹರಡಿ, ವಧಾವ(ಗುಲಗಂಜಿಶಾಸ್ತ್ರ) ನೋಡುತ್ತಾರೆ. ಹಿರಿಯರಿಗೆ ಥಾಳಿನ ಪ್ರಸಾದ, ನಂತರದಲ್ಲಿ ಉಳಿದ ಮಡಕೆಯ ಪ್ರಸಾದವನ್ನು ಎಲ್ಲರಿಗೂ ಹಂಚುತ್ತಾರೆ. ಬೆಳಿಗ್ಗೆ ದೂರಕ್ಕೆ ಆ ಹಂಡೆಯನ್ನು ಒಯ್ದು ಒಡೆದು ಬರುತ್ತಾರೆ. ಒಡೆದ ಹಂಡೆಯ ಚೂರನ್ನು ಹೆಣ್ಣು ದಾಟಬಾರದು. ಆದ್ದರಿಂದ ಹಿಂದಿನವರು ಅಲ್ಲಿಂದ ಬೇರೆಡೆಗೆ ಹೋಗಿ ಬಿಡಾರ ಹೂಡುತ್ತಿದ್ದರು. ಈ ಪೂಜೆಗೆ "ಆಬ್‌ಪಾಳ್‌ನೊ ಹಂಡೊ"(ಸರ್ಪರಾಜನಿಗೆ ಹಂಡೆ)ಯ ಹರಕೆ ಒಪ್ಪಿಸುವುದೆಂದೇ ಹೆಸರಿದೆ.

ಮುಡ್ಕ್ಯಾಮ ಪಾಣಿ ಘಾಲಾನು (ತಲೆಗೆ ನೀರು ಹಾಕುವಶಾಸ್ತ್ರ) : ಹಂಡೆಯೊಡೆದ ಬಂದ ನಂತರ ತಲೆಯನ್ನು ತಣ್ಣೀರಿನಿಂದ ತೊಳೆಯುತ್ತಾರೆ. ಹೀಗೆ ಮೂರು ದಿನವೂ ತಣ್ಣೀರಿನಿಂದ ತಲೆಯನ್ನು ತೊಳೆದು ಸ್ನಾನಮಾಡುತ್ತಾರೆ. ನಾಲ್ಕನೆದಿನ ಸೀಗೇಕಾಯಿಯಿಂದ ತೊಳೆದರೆ ಶಾಸ್ತ್ರ ಮುಗಿದಂತೆಯೇ. ಈ ನಾಲ್ಕು ದಿನಗಳವರೆಗೂ ಹೆಂಗಸರು ಮಾಡಿದ ಅಡುಗೆಯನ್ನಾಗಲಿ, ಚಾಪೆಯನ್ನಾಗಲಿ ಉಪಯೋಗಿಸುವಂತಿಲ್ಲ. ಮದುವೆಯಾಗದ ಹೆಣ್ಣು ಮಕ್ಕಳು ಮಾಡಿದ ಅಡುಗೆಯನ್ನು ಊಟಮಾಡಬಹುದು. ಈ ಪೂಜೆಯನ್ನು ಎಲ್ಲಿ ಬೇಕಾದರೂ ಪ್ರತ್ಯೇಕವಾಗಿ ಮಾಡಬಹುದು.

೧. ಕನಸಲ್ಲಿ ಹಾವು ಕಂಡುಬಂದರೆ

೨. ಮನೆಯಲ್ಲಿ ಹಾದಿಯಲ್ಲಿ ಪದೇ ಪದೇ ಕಂಡುಬಂದರೆ

೩. ಬೇಟೆಗೆ ಹೋದಾಗ ತಿಳಿದೊ ತಿಳಿಯದೆಯೋ ತುಳಿದರೂ ಅದು ಯಾವ ಹಾನಿಯನ್ನು ಮಾಡದಿದ್ದರೆ

೪. ಹುಟ್ಟಿದ ಮಗುವಿಗೆ ಹಾಲಿನ ಕೊರತೆಯಾದರೆ ಅಥವಾ ಬೇಗ ಹಾಲು ಇಳಿಯದಿದ್ದರೆ,

ಹರಕೆ ಕೊಳ್ಳುತ್ತಾರೆ. ರಾತ್ರಿಯೇ ಹಾಲು ಮಗುವಿಗೆ ಆಗಬೇಕು. ಬೆಳಿಗ್ಗೆಯೇ (ಆಖ್‌ಪಾಳ್‌ನೊ ಹಂಡೊ ಚಢಾವಾನು) ಸರ್ಪರಾಜನಿಗೆ ಹಂಡೆ ಹರಕೆ ಒಪ್ಪಿಸುತ್ತೇನೆ ಎಂದು ಹಿರಿಯರಲ್ಲಿ ಹೇಳಿಕೊಂಡು ನಮಸ್ಕರಿಸುತ್ತಾರೆ. ಅವರು ಅಂದುಕೊಂಡಂತೆಯಾಗುತ್ತದೆ. ಆಗ ಪೂಜೆ ನೆರವೇರಿಸುತ್ತಾರೆ. ಆಯಾ ಕುಟುಂಬದ ಗಂಡಿನ ಹಿರಿಯನ 'ರುಂಬಾಲು' ಇದ್ದರೆ ಸಾಕು. ಅದನ್ನು ತ್ರಾಂಗಡೂ (ದೇವಿಯ ಮೂರ್ತಿಯಿರುವ ಪಟಾರಿ) ರೂಪದಲ್ಲಿ ಅಗ್ರಸ್ಥಾನದ ಸ್ಥಳದಲಲಿ ಕೂರಿಸಿ ಆಚರಿಸುತ್ತಾರೆ.

**ರುಂಬಾಲಿನ ಸ್ಥಾನ ತ್ರಾಂಗಡೂಗೆ ಸಮ :** ಇಲ್ಲಿ ಭವನ್ಯೋ ಅಥವಾ ಓತರಾವಳೊ (ದೇವಿಯ ಆವಾಹನೆಯಾದನು) ಪೂಜಾರಿ, ಕುಟುಂಬದಲ್ಲಿ ಹಿರಿಯನಾಗಿ, ದೇವಿಗಾಗಿ ತನ್ನ ತಲೆ ಕೂದಲನ್ನು ದೇವಿಗಾಗಿ ಮುಡಿಪಾಗಿಟ್ಟಿರುತ್ತಾನೆ. ಅದರ ಸುತ್ತ ರುಂಬಾಲನ್ನು ಯಾವಾಗಲೂ ಕಟ್ಟಿರುತ್ತಾನೆ. ಅದನ್ನು ಹೆಂಗಸರು ತೊಳೆವಂತಿಲ್ಲ, ಮುಟ್ಟುವಂತಿಲ್ಲ, ಬರಿಯ ನೆಲದ ಮೇಲೆ ಇಡುವಂತೆಯೇ ಇಲ್ಲ. ಇಡುವಂತಿದ್ದರೆ ತ್ರಾಂಗಡೂ (ದೇವಿಯ ಮೂರ್ತಿಯಿರುವ ಪಿಟಾರಿ) ಮೇಲೆಯೇ ಇಡಬೇಕಾಗುತ್ತದೆ. ಆದ್ದರಿಂದ ಇದಕ್ಕೆ ತ್ರಾಂಗಡೂಗೆ ಇರುವ ಸ್ಥಾನವೇ ಇರುತ್ತದೆಂದು ನಂಬುತ್ತಾರೆ. ಈ ಎಲ್ಲಾ ವಿಶೇಷತೆಗಳಿಂದಲೇ ರುಂಬಾಲು ವಿಶಿಷ್ಟಸ್ಥಾನ ಪಡೆದಿದೆ. ೧. ಮಗುವಿನ ಜನನವಾದ ನಂತರ ಛಟ್ಟಿಶಾಸ್ತ್ರದಲ್ಲಿ ೨. ಮದುವೆಗಳಲ್ಲಿ ೩. ಕೆಲವು ಚಿಕ್ಕಪುಟ್ಟ ಹಬ್ಬಗಳಲ್ಲಿ ಮತ್ತು ೪. ಸಾವುಗಳಲ್ಲಿ ತ್ರಾಂಗಡೂಗಳು ಲಭ್ಯವಿಲ್ಲದಿರುವ ಸಂದರ್ಭಗಳಲ್ಲಿ ಈ ರುಂಬಾಲನ್ನೇ ತ್ರಾಂಗಡೂ ಸ್ಥಳದಲ್ಲಿರಿಸಿ ಕಾರ್ಯ ಜರುಗಿಸುತ್ತಾರೆ. ಹಿಂದಿನವರು ತಾವು ಒಂದೆಡೆ ನೆಲೆಯೂರದ ಅಲೆಮಾರಿಗಳಾದ್ದರಿಂದ ತಮ್ಮ ತಮ್ಮ ತ್ರಾಂಗಡೂಗಳನ್ನು ತಮ್ಮೊಂದಿಗೇ ಇಟ್ಟುಕೊಳ್ಳುತ್ತಿದ್ದರು. ಆದರೆ ಇತ್ತೀಚಿನವರು ಒಂದೆಡೆ ನೆಲೆಯೂರು ವಯಸ್ಸಾದವರು, ಅವರೊಂದಿಗೆ ಮಕ್ಕಳು ಇರುವಷ್ಟು ವಯಸ್ಸಿನವರಾದರೆ ತ್ರಾಂಗಡೂವನ್ನು ಅವರ ಬಳಿಯೇ ಬಿಟ್ಟು ಗಂಡ ಹೆಂಡತಿ ಚಿಕ್ಕಮಕ್ಕಳೊಂದಿಗೆ ದುಡಿಮೆಗೆ ಹೋಗುತ್ತಾರೆ. ಇತ್ತ ಅವರ ಖರ್ಚುವೆಚ್ಚಗಳಿಗೆ ಧನವನು ಇಟ್ಟು ಹೋಗುದಿದ್ದರೆ ಮುದಕಿಯೇ ಭಿಕ್ಷೆ ಬೇಡಿ, ಮೊಮ್ಮಕ್ಕಳನ್ನು ಸಾಕುವ ಹೊಣೆ ಹೊರುತ್ತಾಳೆ. ಮುದುಕು ಮೊಮ್ಮಕ್ಕಳನ್ನು ನೋಡಿಕೊಳ್ಳುತ್ತಾನೆ.

**೩. ಗುಣೇಖ್ (ಗಣೇಶ-ಗಣಪತಿ) :** ಲಂಗರಿನ ಬಿಡಾರದಲ್ಲಿ ದಾದಾಜಿ, ಆಖ್‌ಪಾಳ್ ನಂತರ ಗುಣೇಖ್‌ನನ್ನು ಕೂರಿಸುತ್ತಾರೆ. ಈ ದೇವತೆಯ ಗುರುತಿಗಾಗಿ ವೀಳ್ಯದೆಲೆ ಕೂರಿಸುತ್ತಾರೆ. ದೀಪ, ಹೂವು, ಊದುಬತ್ತಿ, ಕರ್ಪೂರಗಳಿಂದ ಪೂಜಿಸುತ್ತಾರೆ.

೪ ವೀಖ್ಡಿಳಿ : ಲಂಗರಲ್ಲಿ ದಾದಾಜಿ, ಆಖ್‌ಪಾಳ್, ಗುಣೇಖ್‌ನ ನಂತರ 'ವೀಖ್ಡಿಳಿ'ಯ ಸರದಿ. ಹುಟ್ಟು-ಸಾವಿಗೆ ಹೊಣೆ ದಾದಾಜಿಯು ಕಾರಣಕರ್ತವೆಂದು ನಂಬಿ ಕುರಿಬಲಿಯ ಮೂಲಕ ಹೇಗೆ ಪೂಜಿಸಿ, ಆರಾಧಿಸುತ್ತಾರೋ ಹಾಗೇ ಪಾಲನಕರ್ತಳಾದ ಆಯಾ ಪಂಗಡದ ದೇವಿಯರಿಗೆ ಹಕ್ಕಿಪಿಕ್ಕಿಗರು ಸಂಪ್ರದಾಯಸ್ಥರಾಗಿ ಪೂಜೆಸಲ್ಲಿಸುತ್ತಾರೆ. 'ಭರ್ನು' ಎಂದರೆ ದೇವಿಯ ಹಬ್ಬವೆಂದೇ ಅರ್ಥೈಸಿಕೊಳ್ಳಬೇಕು. ಭರ್ನು ಎಂದರೆ ಹಬ್ಬವನ್ನು 'ತುಂಬುವುದು' ಎಂದೇ ಅರ್ಥಬರುತ್ತದೆ.

ಇದನ್ನೇ ಹಿಂದುಸ್ಥಾನಿಯಲ್ಲಿ ಭರ್‌ನ = ತುಂಬುವುದು, ಅರ್ಥವನ್ನೆ ನೀಡುವುದನ್ನು ಗಮನಿಸಬಹುದು. ಹಕ್ಕಿಪಿಕ್ಕಿಯರ ಭಾಷೆಯಲ್ಲಿ ಭರ್ನು ಒಂದು ವಿಧದಲ್ಲಿ ಏಕವಚನವಾಗಿ 'ಲಂಗರು' ಎಲ್ಲ ಪಂಗಡಗಳು ಸೇರಿ ಆಚರಿಸುತ್ತದೆ. ಇದು ಬಹುವಚನದಲ್ಲಿ 'ಭರ್ನು'ಗಳ ಸಮ್ಮಿಳನವಾಗಿದೆ. ತುಮ ಹಮಾರಾ ಭರ್‌ನನು ಆವ್ಹೊ ಅಂದರೆ 'ನೀವು ನಮ್ಮ ಭರ್‌ನದಲ್ಲಿ ಬನ್ನಿ' ಎಂದಾಗುತ್ತದೆ.

೫. ಖಿಕ್ಕತ್ ದೇವತೆ : ಗುರುತಿಗಾಗಿ ಬೆಳ್ಳಿಯ ಮೂರ್ತಿಯಿರುತ್ತದೆ. ಇಲ್ಲವಾದರೆ ವೀಳ್ಯದೆಲೆಯನ್ನೆ ಆ ದೇವತೆಯ ಹೆಸರಿಟ್ಟು, ಕುಂಕುಮ ಹೂವು, ದೂಪ ದೀಪಗಳಿಂದ ಪೂಜಿಸಿಡುತ್ತಾರೆ. ಲಂಗರಿನಲ್ಲಿ ಶೇಳ್ ಮಹಮ್ಮಾಯಿಗಿಂತ ಮುಂಚೆ, ವೀಖಳಿಯ ನಂತರ ಕೂರಿಸಲ್ಪಡುವ ದೇವತೆ.

ಕೃಪೆ: ವೆಲ್‌ವಾಳಿ (ವಂಶ ಬೆಳೆಸಲು ಕಾರಣವಾದವಳು) ವೇಲ್‌ವಾಳಿ = ವಂಶ ಬೆಳೆಯಲು ಸಹಾಯಕಳಾದವಳು, ಅಂದರೆ ಮಕ್ಕಳು ಬೇಕೆಂದವರಿಗೆ ಮಕ್ಕಳ ಭಾಗ್ಯ ನೀಡಿ, 'ಸಂತಾನಲಕ್ಷ್ಮಿ' (ಖಿಕ್ಕತ್) ಅನ್ನಿಸಿಕೊಂಡವಳು ಹುಟ್ಟಿದ ಮಗುವಿಗೆ ಹಾಲಿಲ್ಲವಾದಾಗ, ಹಾಲುಂಟಾಗುವಂತೆ ಮಾಡುವ ದೇವತೆ.

ಭರ್ನುದಲ್ಲಿ ಮಾತ್ರ ವೀಖ್ಖಳಿಯ ಪಕ್ಕದಲ್ಲಿ ಕೂರುವ ದೇವತೆ. ವೀಖ್ಖಳಿಗೆ ಪೂಜೆ ಸಲ್ಲಿಸಿದ ಮೇಲೆ ದೊಡ್ಡ ಚಾಚರ್ ಪಕ್ಕದಲ್ಲಿರುವ ಚಿಕ್ಕ ಚಾಚ್‌ರವಲ್ಲಿ ಕುರಿಬಲಿಯಾಗುತ್ತದೆ. ಆಗ ಖ್ಖಿಕ್ಕತ್ ದೇವತೆಯನ್ನು ಪೂಜಾರಿ ಮೈಮೇಲೆ "ಜೋಲೋ... ಜೋಲೋ..." ಅನ್ನುವುದರ ಮೂಲಕ ಆವಾಹನೆ(ಭವನ್‌ಬರಿಸಿ)ಯಾಗಿ ಕಾವ್ತ (ರಕ್ತ) ಸ್ವೀಕರಿಸುತ್ತಾಳೆ. ಇದೇ ಸಂದರ್ಭದಲ್ಲಿ ಚಾಂದಡಿದೇವತೆಯ ಭವನ್(ಆವಾಹನೆ)ಅನ್ನು ಪೂಜಾರಿಯ ಮೈಮೇಲೆ ಬರಿಸುತ್ತಾರೆ.

೬. ಶೇಳ್ ಸೇಡಿನ ದೇವತೆ : ಈ ದೇವತೆ ಖಿರಚ್ ಕಜ್ಜಿ, ತುರಿಕೆ, ಫೋಡಾ ಗಾಯಗಳಿಗೆ ಕಾರಣಳಾದ ದೆವತೆ. ಈ ದೇವತೆಯನ್ನು ಲಂಗರಿನ ಹಬ್ಬಗಳಲ್ಲಿ ಗಮನಹರಿಸಿದಿದ್ದರೆ ಮುನಿದು ಚಿಕ್ಕಪುಟ್ಟ ಖಾಯಿಲೆಗಳಿಗೆ ಎಡೆಮಾಡಿ ಸೇಡು ತೀರಿಸಿಕೊಳ್ಳುವಳೆಂದು ನಂಬುತ್ತಾರೆ.

ಈ ದೇವತೆಯ ಗುರುತಿಗಾಗಿ ವೀಳ್ಯದೆಲೆ ನೀಖ್ಖಳಿಯ ಪಕ್ಕ ಇಟ್ಟು ಅರಿಷಿಣ ಕುಂಕುಮ ಚೆಲ್ಲುತ್ತಾರೆ. ಜೋಡಿ ತೆಂಗಿನಕಾಯಿ, ಹೂವು, ಊದುಬತ್ತಿ, ದೀಪ, ಕರ್ಪೂರದಿಂದ ಪೂಜಿಸುತ್ತಾರೆ. ಜೋಲೋ ಜೋಲೋ ಎನ್ನುತ್ತಾ ಪೂಜಾರಿಯ ಮೈಮೇಲೆ ಭವನ್ ಬರಿಸುತ್ತಾರೆ. ಪೂಜಾರಿಯು ತೆಂಗಿನಕಾಯಿ ಎರಡು ಕೈಗಳಲ್ಲಿ ಹಿಡಿದು ಒಂದಕ್ಕೊಂದು ಅಪ್ಪಳಿಸಿ ಒಡೆದು, ಮೈಮೇಲೆ ತೆಂಗಿನಕಾಯಿ ನೀರನ್ನು ಹಾಕಿಕೊಳ್ಳುತ್ತಾನೆ. ಫೋಡಾ ಫೂಗಣೇತಿ ಲಡ್ಕ ಬಾಳಾನ ಬಚಾಡುಸ್ ಜಬಾಬು ಹೇಳಿದಾಕ್ಷಣ ಮೈಯಿಳಿಯುತ್ತದೆ. ಕಜ್ಜಿ ಗಾಯಗಳಿಂದ ನಿಮ್ಮ ಮಕ್ಕಳು ಮರಿಗಳನ್ನು ರಕ್ಷಿಸುತ್ತೇನೆ. ವಧಾವ ಗುಲಗಂಜಿಶಾಸ್ತ್ರ ನೋಡಿದ ನಂತರ ಕಾಯಿಚೂರುಗಳನ್ನು ಎಲ್ಲರಿಗೂ ಹಂಚುತ್ತಾರೆ.

೭. ಶಿಕೋತರ್ ದೇವತೆ (ನಾಯಿಕೆಮ್ಮಿನ ದೇವತೆ) : ಕೃಪೆ: ಕೆಮ್ಮು, ನೆಗಡಿ, ವಾಂತಿ, ನಾಯಿಕೆಮ್ಮುಗಳು ಇತ್ಯಾದಿ ಬಾಧ್ಯಗಳನ್ನು ಹೋಗಲಾಡಿಸುವವಳು. ಭರ್ನುಗಳಲ್ಲಿ ಮಾತ್ರ ಗುರುತಿಗಾಗಿ ವೀಳ್ಯದೆಲೆ ಕೂರಿಸಿ, ಕುಂಕುಮ, ದೀಪ, ಧೂಪ ಹೂಗಳಿಂದ ಪೂಜಿಸುತ್ತಾರೆ.

ಮಹಮ್ಮಾಯಿ ಹಬ್ಬದ ಲಂಗರಿನಲ್ಲಿ ವೀಬ್ಬಳಿ, ಶೇಳ್ ದೇವತೆಗಳಾದ ನಂತರ ಮಹಮ್ಮಾಯಿ ಸರದಿ, ಕಷ್ಟಕಾರ್ಪಣ್ಯಗಳು ಎದುರಾದರೆ, ಶಕುನಗಳಾದರೆ, ನಿವಾರಣೆಗಾಗಿ ಈ ದೇವತೆಗೆ ಹರಕೆ ಹೇಳಿಕೊಳ್ಳುತ್ತಾರೆ.

೧. ವ್ಯಾಪಾರದಲ್ಲಿ ಲಾಭವಾಗುವಂತೆ ಮಾಡಬೇಕೆಂದು ಹರಕೆಗೊಳ್ಳುತ್ತಾರೆ.

೨. ಬೇರೆ ಜನಾಂಗದಿಂದ ಹಕ್ಕಿಪಿಕ್ಕಿ ತಾಂಡಗಳಿಗೆ ಆಕಸ್ಮಾತ್ ಒದಗಿಬರುವ ಅನಾಹುತಗಳಿಂದ ಪಾರುಮಾಡಿದರೆ ಹರಕೆಯೊಪ್ಪಿಸುವಂತೆ ಈ ದೇವತೆಗೆ ಹೇಳಿಕೊಳ್ಳುತ್ತಾರೆ.

೩. ಆಗದ ಕೆಲಸಗಳು ಬಿಗಿಯಾಗದೆ ಕಠಿಣವಾಗದೆ ಹಜರಾಗಬೇಕೆಂದು ದೇವತೆಗೆ ಹರಕೆ.

೪. ಬೇಟೆಗೆ ಹೋಗುವಾಗ ಆಕಸ್ಮಾತ್ ನಡೆಯಬಹುದಾಂಥ ಅವಘಡಗಳಿಂದ ಪಾರುಮಾಡಿದರೆ ಹರಕೆಗೊಳ್ಳುತ್ತಾರೆ.

೫. ಚನ್ನಾದ ಬೇಟೆ ಸಿಕ್ಕು ಮಕ್ಕಳು ಮರಿ ಖುಷಿಯಿಂದರುವಂತೆ ಮಾಡಿದರೆ ಹರಕೆಗೊಳ್ಳುತ್ತಾರೆ.

೬. ಒಳ್ಳೆಯ ಕೆಲಸ ಕಾರ್ಯಗಳನ್ನು ಕೈಗೊಳ್ಳುವಾಗ ಯಾವುದೇ ಅನಿಷ್ಟಗಳು ಒದಗದಂತೆ ರಕ್ಷಿಸಬೇಕೆಂದು ಆ ದೇವತೆಗೆ ಹರಕೆಗೊಳ್ಳುತ್ತಾರೆ.

ಕೆಲವು ಶಕುನಗಳು ಎದಿರಾದರೂ, ಕೆಲವೊಮ್ಮೆ ಅವುಗಳನ್ನು ಮೀರಿ ನಡೆಸುವ ಅನಿವಾರ್ಯತೆಗಳಿದ್ದರೆ ಅಥವಾ ಒಂದೆಡೆಯಿಂದ ಇನ್ನೊಂದೆಡೆಗೆ ಬಿಡಾರ ಹೂಡುವಾಗ ಎದಿರಾದ ಸಮಸ್ಯೆಗಳನ್ನು ನಿವಾರಿಸುವಂತೆ ಈ ದೇವತೆಗೆ ಹರಕೆ ಹೊರುತ್ತಾರೆ.

ಉದಾಹರಣೆಗೆ ಒಂಟಿ ಸೀನುವುದು, ಗೂಬೆ ಎದುರಾಗಿ ಕೂಗುವುದು, ಹೆಣ್ಣು ನರಿಯು ಊಳಿಡುವುದು, ಕತ್ತೆ ಅಡ್ಡಲಾಗಿ ಬಂದು ಕೂಗುವುದು, ಬೆಕ್ಕು ಅಡ್ಡ ಓಡುವುದು, ವಿಧವೆಯರು ಅಡ್ಡಬರುವುದು ಇತ್ಯಾದಿ.

ಮಹಮ್ಮಾಯಿಯ (ಮಾರಮ್ಮ) ಹರಕೆಯಾಗಿ ಕುರಿಬಲಿ(ಕಬೂಲಾನೊ ಬೋಕ್ಡೊ)ಯನ್ನು ಒಪ್ಪಿಸುತ್ತಾರೆ. ಇದನ್ನು ಎಲ್ಲರೂ ಸೇರಿ ಚಂದಾ ಹಾಕಿಯೂ ಆಚರಿಸಬಹುದು. ಇದಕ್ಕೆ 'ವರಗಣೀನೊ ಬೋಕ್ಡೊ' (ಚಂದಾದ ಕುರಿ ಅನ್ನಾತ್ತರೆ). ಇಲ್ಲದಿದ್ದರೆ ಒಬ್ಬನ್ನೇ ಆಚರಿಸಿ ಎಲ್ಲರಿಗೂ ಪ್ರಸಾದ ಕೊಡಬಹುದು.

ಆಚರಣೆ : ಪ್ರತ್ಯೇಕವಾಗಿರುತ್ತದೆ. ಲಂಗರಿನಲ್ಲಿ (ಭರ್ಪು) ಗುರುತಿಗಾಗಿ ವೀಳ್ಯದೆಲೆ ಕೂರಿಸುತ್ತಾರೆ. ಆದರೆ ಆಚರಣೆ ಇಲ್ಲ. ತಾವಂದು ಕೊಂಡಂತೆ, ಕಷ್ಟಕಾರ್ಪಣ್ಯಗಳು ದೂರಾಗಿ, ಲಾಭವುಂಟಾದರೆ ಮಹಮ್ಮಾಯಿನೋ ಬೋಕ್ಡೊ (ಮಾರಮ್ಮನಿಗೆ ಕುರಿ)ವನ್ನು ಪರಸ್ಪರ ಕುಟುಂಬಕಷ್ಟೇ ಎಂದು ಚಂದಾಹಣ ಸಂಗ್ರಹಿಸಿ ಕುರಿಯನ್ನು ಖರೀದಿಸಿ ಮಾರಮ್ಮನಿಗೆ ಬಲಿಕೊಡುತ್ತಾರೆ. ಇದನ್ನು 'ಚಂದಾದಾರರಿಂದ ತಂದ ಕುರಿ' ಎನ್ನುತ್ತಾರೆ.

ಪ್ರತ್ಯೇಕ ಹಬ್ಬವಾದ್ದರಿಂದ ಶುಭ್ರಸ್ಥಳ ಆರಿಸಿ ಬೇವಿನ ಸೊಪ್ಪಿನಿಂದ ಪೂರ್ವಾಭಿಮುಖವಾಗಿ ಮಂಟಪವ ಕಟ್ಟುತ್ತಾರೆ. ಮಂಟಪದ ಜಾಗವನ್ನು ಸ್ವಲ್ಪ ಎತ್ತರ ಪ್ರದೇಶದಲ್ಲಿರುವಂತೆ ಸ್ಥಳ ಆಯ್ಕೆ ಮಾಡುತ್ತಾರೆ. ಬೇಕಾಗುವ ಸಾಮಾನುಗಳನ್ನು ಹಬ್ಬದ ದಿನದಂದೇ, ಹೊಸದಾಗಿ

ಖರೀದಿಸಿ ಮಂಟಪಕ್ಕೆ ಒಯ್ಯಬೇಕು. ಮನೆಯಲ್ಲಿ ತಂದಿಡಬಾರದು. ಹಾಗೆ ತಂದಿಟ್ಟರೆ ಪೂಜೆಗೆ ಬಳಸುವುದಿಲ್ಲ. ಮತ್ತೆ ಹೊಸದಾಗಿ ತರಬೇಕಾಗುತ್ತದೆ.

ಬೆಲ್ಲ, ತೆಂಗಿನಕಾಯಿ, ಹೂವು, ಹಣ್ಣು, ಅಕ್ಕಿ, ಕೋರುಹಂಡಕು (ಹೊಸ ಮಡಕೆ), ತುಪ್ಪ, ಕರ್ಪೂರ ಸಾಮಾಗ್ರಿಗಳು ಸಿಹಿ ಅಡುಗೆ ಮಾಡಿ ಬಾಳೆಎಲೆ ಅಥವಾ ಪತ್ರೋಳಿಯಲ್ಲಿ ಹರಡಿ (ಥಾಳ್‌ಭರ್ನು) ಇಡುತ್ತಾರೆ. ಕುರಿಯನ್ನು ನಿಲ್ಲಿಸಿ (ಛೀಚಾ ದೇವಾನು) ತೀರ್ಥದ ನೀರು ಚಿಮುಕಿಸುತ್ತಾರೆ. ಹಿರಿಯರು ಜಬಾಬು ಹೇಳುತ್ತಾರೆ. ಅದು ಅವರವರ ಅನಿಸಿಕೆಗೆ ತಕ್ಕಂತಿರುತ್ತದೆ. ಯಾವುದೋ ನಿರ್ದಿಷ್ಟ ಸಮಯದಲ್ಲಿ ಕುರಿ ತಲೆ ಮೈದಡುವುತ್ತದೆ. ಇದರಿಂದ ದೇವಿ ಮಹಮ್ಮಾಯಿಯ ಅಪ್ಪಣೆ ದೊರೆಯ್ತೆಂದು ಭಾವಿಸಿ ಆ ಸಮಯದಲ್ಲಿ ಯಾರ ಜಬಾಬಿಗೆ ಮೈದಡವಿದೆ ಎಂಬುದನ್ನು ಗಮನಿಸಿ, ಅದು ಆ ದೇವಿ ಹೇಳಿಸಿದ ಜಾಬಾಬೆಂದು ನಂಬುತ್ತಾರೆ. ಹಾಗೇ ನಡೆದುಕೊಳ್ಳುತ್ತಾರೆ. ಇದು ಎಲ್ಲಾ ಪಂಗಡದ ಹಕ್ಕಿಪಿಕ್ಕಿಗರಲ್ಲಿ ಕಂಡು ಬರುವುದು ಸರ್ವೇಸಾಮಾನ್ಯ. ಪೂಜಾರಿಯಾದವನಿಗೆ ಭವನ್ ಇಲ್ಲ. ಅಂದರೆ ದೇವಿ ಮಹಮ್ಮಾಯಿ ಪೂಜಾರಿಯ ಮೈಮೇಲೆ ಆವಾಹನೆಯಾಗುವುದಿಲ್ಲ. ಕೊಯ್ದ ಕುರಿಯನ್ನು ಕಾವು(ರಕುತ)ವನ್ನು ವೀಳ್ಯದೆಲೆ ಮೇಲೆ ಮೊದಲು ಏರಿಸಿ ಹಾಕಿ ನಂತರದ ಚಪ್ಪರದ ಮೇಲೆ ಚಿಮುಕಿಸುತ್ತಾರೆ. ನೆರೆದ ಗಂಡಸರೆಲ್ಲಾ ಒಬ್ಬೊಬ್ಬರಾಗಿ ಬೇಗ ಬೇಗ ಬಂದು ತಂತಮ್ಮ ಕೋರಿಕೆಗಳನ್ನು ಈಡೇರಿಸುವಂತೆ ಕಾವನ್ನು ವೀಳ್ಯದೆಲೆ ಮೇಲೆ ಏರಿಸುತ್ತಾರೆ. ಗುಜರಾತ್ಯ ಹೆಂಗಸರನ್ನು ಬಿಟ್ಟು, ಮತ್ತೆಲ್ಲಾ ಪಂಗಡದ ಹೆಂಗಸರೂ ಕುರಿ ಮಾಂಸದ ಪ್ರಸಾದ (ಸ್ವೀಕರಿಸು) ತಿನ್ನಬಹುದು.

ಖೂಳಾ ಭೂಂಜಾನು (ಕಲೀಜ ಮಾಂಸದ ತುಂಡು): ಕಾಳ್ಜು (ಕಲೀಜ) ಮತ್ತು ಮಾಂಸದ ತುಂಡುಗಳನ್ನು ಸಪೂರವಾದ ಕೋಲಿನಲ್ಲಿ ಚುಚ್ಚಿ ಬಿಡಾರದ ಮುಂದೆ ಒಡ್ಡುವ ಬೆಂಕಿ ಕೆಂಡದಲ್ಲಿ ಸುಡುತ್ತಾರೆ. ಚೆನ್ನಾಗಿ ಬೇಯಲೆಂದು ಮೇಲೆ ಮೇಲೆ ಎಣ್ಣೆ ಸುರಿಯುತ್ತಾರೆ. ಇದರಿಂದ ಖ್ಹೊಳೋ ಚೆನ್ನಾಗಿ ಬೆಂದ ವಾಸೆ ಬರುತ್ತದೆ. ಇದಕ್ಕೆ 'ಖ್ಹೊಳೋಭೂಂಜಾನು' ಅನ್ನುತ್ತಾರೆ. ಈ ಬೆಂದ ಖ್ಹೊಳೋವನ್ನು, ದೇವಿಗಾಗಿ ಥಾಳ್(ಹರಿವಾಣ)ನಲ್ಲಿ ಹರಡಿದ್ದ ಅನ್ನದ ಮೇಲಿಡುತ್ತಾರೆ. ನಂತರ ವಧಾವ (ಗುಲಗುಂಜಿ) ಶಾಸ್ತ್ರ ನೋಡಿ ಛೀಚಾ(ತೀರ್ಥ) ಪ್ರೋಕ್ಷಿಸಿ ಥಾಳಿನ ಪ್ರಸಾದ ಹಂಚುತ್ತಾರೆ. ಎಷ್ಟು ಕುಟುಂಬಗಳು ಸೇರಿ ಚಂದಾ ಹಾಕಿದ್ದರೊ, ಅವಿಭಕ್ತ ಕುಟುಂಬವಾದರೂ ಮದುವೆಯಾದವನಿಗೆ ಒಂದು ಪಾಲೆಂಬಂತೆ ಹಂಚುತ್ತಾರೆ. ಪ್ರತಿಯೊಬ್ಬರೂ ತಮಗೆ ಬಂದ ಪಾಲನ್ನು ಮನೆಗೊಯ್ದು ಬೇಯಿಸಿ ಅನ್ನ ಅಥವಾ ಮುದ್ದೆಯೊಂದಿಗೆ ಉಪಯೋಗಿಸುತ್ತಾರೆ. ತಮಗೆ ಬಂದ ಪಾಲು ಎಷ್ಟೇ ಚಿಕ್ಕದಿರಲಿ ಅದು ದೇವಿಯು ತಮ್ಮ ಪಾಲಿಗೆ ಕೊಟ್ಟ ಪ್ರಸಾದವೆಂದೇ ತಿಳಿಯಬೇಕಲ್ಲದೆ, ಜರೆಯುವಂತಿಲ್ಲ. ಜರೆದವರು ಜೀವನದಲ್ಲಿ ಅನೇಕ ಕಷ್ಟ ನಷ್ಟಗಳನ್ನು ಅನುಭವಿಸಿ ಘಟನೆಗಳನ್ನು ಹೇಳುತ್ತಾರೆ.

ಘಟನೆ ೧. ಚನ್ನಗಿರಿ ತಾಲೂಕು ನಲ್ಲೂರು ಬಳಿಯಿರುವ ಅಸ್ತಾಪನಹಳ್ಳಿ ಗ್ರಾಮದಲ್ಲಿ ಇತ್ತೀಚಿಗೆ ನಡೆದು ಒಂದು ಘಟನೆ. ಹಿಂದೆ ಛೇರಮನ್ ಆಗಿದ್ದ ಕೃಷ್ಣಪ್ಪ ಅಲಿಯಾಸ್ ಥೋಮಿನ್ ಎಂಬುವರ ಹೆಂಡತಿ ತಾಮ್ರಮ್ಮ ಅನ್ನುವವರು ಸರ್ಕಾರಿ ಸೇವೆಯಲ್ಲಿ ಹಾಸ್ಟೆಲೊಂದರ

ಕುಕ್ಕ್ ಆಗಿದ್ದರೂ, ಯಾರಿಗಿಂದಲೂ ನಾವೇನೂ ಕಡಿಮೆ ಇಲ್ಲ ಎಂಬ ಗತ್ತು ಕೂಡ ಅವರಲ್ಲಿ ಮನೆಮಾಡಿತ್ತು. ಒಮ್ಮೆ ಮೈಸೂರಿಗೆ ದಸಾರಕ್ಕೆಂದು ಗಂಡ ಹೆಂಡತಿ ಹೊರಟು ನಿಂತಿದ್ದಾಗ, ಊರಲ್ಲಿ ಮಹಮ್ಮಾಯಿಗೆ ಕುರಿ ಹರಕೆಯಿದೆ ಪ್ರಸಾದ ಬಿಟ್ಟು ಹೋಗಬಾರದೆಂದು ಕುಟುಂಬದವರು ಹೇಳಿದಾಗ ಅಂದಿನ ಪ್ರಯಾಣವನ್ನು ರದ್ದುಪಡಿಸಿ ಪ್ರಸಾದ ಸ್ವೀಕರಿಸಿದ ನಂತರ ಹೋಗವದೆಂದು ನಿರ್ಧರಿಸಿದರು. ತಮಗೆ ಬಂದ ಮಾಂಸದ ಪಾಲನ್ನು ಸೊಸೆಯು ಅವರಿಗೆ ಬೇಯಿಸಿ ಊಟಕ್ಕೆ ಬಡಿಸಿದಳು. ಪಾಲು ಚಿಕ್ಕದಾದ್ದರಿಂದ ತುಂಡರಿಸಿದ ತುಕಡಿಗಳು ಎರಡೆರಡು ಬರುವಂತೆ ಮಗ ಹಂಚಿದ್ದನು. ತಟ್ಟೆಯಲ್ಲಿ ಮುದ್ದೆ ಸಾರಿನೊಂದಿಗೆ ಇದ್ದ ಎರಡು ತುಕಡಿಯನ್ನು ಕಂಡ ತಾಮ್ರಮ್ಮಗೆ ಅಸಮಾಧಾನವಾಗಿ ಸಿಟ್ಟು ತಡೆಯಲಾಗಲಿಲ್ಲ. ಒಂದು ಗುಕ್ಕು ಮುದ್ದೆ ಸಾರಲಿಟ್ಟು ನುಂಗಿ ಒಂದು ತುಕಟಿಯನ್ನು ಎಡಕೈಯಲ್ಲಿ ತ್ತಿಕೊಂಡು ಈ ಎರಡು ತುಕಡಿಗೋಸ್ಕರ ನಮ್ಮನ್ನುಳಿಸಿಕೊಂಡಿರಾ ಮೈಸೂರಿನಲ್ಲಿದ್ದ ನನ್ನ ಮಗಳ ಮನೆಗ ಹೋಗಿದ್ದರೆ ಎರಡು ಕೀಲೋ ತಂದು ಬೇಯಿಸಿ ಅಡುಗೆ ಮಾಡಿ ಹಾಕುತ್ತಿದ್ದಳು ಎಂದು ಹೀಯಾಳಿಸುವಂತೆ ಹೇಳಿದ್ದೆ ತಡ ಮರುಕ್ಷಣದಲ್ಲೇ ಆ ಕೈ ದೊಪ್ಪನೆ ಬಿದ್ದು ಶರೀರವೂ ನೆಲಕ್ಕಪ್ಪಳಿಸಿ ಒದ್ದಾಡಲಾರಂಭಿಸಿದಳು. ಏನಾಯಿತು ಏನಾಯ್ತು ಎಲ್ಲರಿಗೂ ಗಾಬರಿ, ಊಟಕ್ಕಾಗಿ ಕುಳಿತುಕೊಂಡ, ಮಗ, ಸೊಸೆ ತಾಮ್ರಮ್ಮನ ಗಂಡ ಕೃಷ್ಣಪ್ಪ, ಸುಶೀಲಪ್ಪ ಮುಖಕ್ಕೆ ನೀರು ಚಿಮುಕಿಸಿ ಗಾಳಿ ಬೀಸುತ್ತ ಚಾಪೆಯ ಮೇಲೆ ತಂದು ಮಲಗಿಸಿದರು. ಏನು ಮಾಡಿದರೂ ಪರಿಸ್ಥಿತಿ ಸುಧಾರಿಸಲಿಲ್ಲ. ಈಗ ಸರಿ ಹೋಗಬಹುದು ಆಗ ಸರಿ ಹೋಗಬಹುದು ಎಂಬ ಮಾತೇ ಎಲ್ಲರ ಬಾಯಲ್ಲೂ ಇತ್ತು, ನೋಡಿದವರೆಲ್ಲ ಏನೂ ಆಗೋಲ್ಲ, ಸರಿ ಹೋಗಬಹುದು. ಮಹಿಮ್ಮಾಯಿ ಪ್ರಸಾದವನ್ನು ಕಡೆಗಣಿಸಿದ್ದರ ಪ್ರತಿಫಲವಿದು. ಬೇರೇನೂ ಅಲ್ಲ. ಆ ತಾಯಿ ಮುನ್ನಿಕೊಂಡಿದ್ದಾಳೆ. ಮತ್ತೆ ಹಕೆ ಕುರೀಂತ ಯಾಕೆ ಮಾಡ್ತೀವಿ ದೇವ್ರನ್ನು ಸಮಾಧಾನ ಮಾಡಾಕೆ ಅನ್ನುವವರೇ ಆದರು. ದಿನಗಳು, ತಿಂಗಳುಗಳು, ವರ್ಷಗಳೇ ಉರುಳಿದರೂ ಸರಿ ಹೋಗುವ ಸೂಚನೆಗಳೇ ಇಲ್ಲವಾಯ್ತು. ದಿನೇ ದಿನೇ ತಾಮ್ರಮ್ಮ ಪರಾವಲಂಬಿಯೆ ಆಗಬೇಕಾಯಿತು. ಈಗ ಲೋಕವನ್ನೇ ತ್ಯಜಿಸಿದ್ದಾರೆ. ಹೀಗೆ ಮಹಮ್ಮಾಯಿಯ ಪ್ರಸಾದವನ್ನು ಹಳಿದವರ ಗತಿಯಾಗುತ್ತದೆಂದು ಉಳಿದವರೂ ತಿಳಿಯಲೆಂದು ಆತಾಯಿ ಯಾರ ಯಾರ ಅಹಂಕಾರವನ್ನು ಯಾವ ಯಾವ ರೀತಿಯಲ್ಲಿ ಮುರಿಯುತ್ತಾಳೊ ತಿಳಿಯಲಾಗದೆಂದು ಅಲ್ಲಿದ್ದ ಹಿರಿಯರು ಈಗಲೂ ಹೇಳುತ್ತಾರೆ. ಇದು ಹಕ್ಕಿಪಿಕ್ಕಿ ಸಮುದಾಯದವರು, ಆಗದ ಕೆಲಸ ಕಾರ್ಯಗಳಿಗಾಗಿ ಹರಸಿಕೊಂಡ ದೇವತೆ. ತನ್ನನ್ನು ನಿಂದಿಸಿದವರನ್ನು ಕಷ್ಟ ಕಾರ್ಪಣ್ಯಗಳಿಗೆ ಗುರಿಪಡಿಸುತ್ತಾಳೆಂದು ಮಹಮ್ಮಾಯಿಯನ್ನು ನಂಬಿದವರು ಹೇಳುತ್ತಾರೆ.

ಘಟನೆ ೨. ಚಿಕ್ಕಪುಟ್ಟ ಕೆಲಸಗಳು ಸೂಸೂತ್ರವಾಗಿ ನೆರವೇರಬೇಕೆಂದರೆ ಅ). ಮಹಮ್ಮಾಯಿಗೆ ದಾರು(ಸಾರಾಯಿ) ಆ). ಮಹಮ್ಮಾಯಿಗೆ ಜಿಲೇಬಿ ಇ). ಬಾಳೆಹಣ್ಣು ನೈವೇದ್ಯ ಮಾಡಬಹುದು. ಕೈಕಾಲು ಮುಖ ತೊಳೆದು ಊದುಬತ್ತಿ ಬೆಳಗಿ, ತಾವೇನು ಏರಿಸಬೇಕೆಂದು (ಚಢಾವಾನು) ತರುವರೋ ತಾವು ನಿಂತ ಸ್ಥಳದಲ್ಲೇ ಎಡ-ಬಲ, ಮುಂದೆ-ಹಿಂದೆ ಎಂಬಂತೆ

ನಾಲ್ಕು ದಿಕ್ಕುಗಳಿಗೆ ಮೂರು ಮೂರು ಸಾಲಿನಂತೆ ತಾಯಿಯ ಹೆಸರನ್ನು ಹೇಳಿ ಚಢಾವ್ (ಏರಿಸುವುದು) ಮಾಡುತ್ತಾರೆ. ಅಲ್ಲಿಗೆ ಮಹಮ್ಮಾಯಿಯು ತೃಪ್ತಿಪಟ್ಟಿರುವಳೆಂದು ಭಾವಿಸುತ್ತಾಳೆ. ದೊಡ್ಡ ದೊಡ್ಡ ಕಾರ್ಯಗಳಾದರೆ. ಅಂದರೆ, ಊರಿಗೇ (ತಾಂಡಕ್ಕೆ) ಆಪತ್ತು ಒದಗುವಂತಿದ್ದರೆ, ಶಿಕಾರಿ ಆಗದಿದ್ದರೆ, ಕುಟುಂಬದವರೆಲ್ಲ ಸೇರಿ ಮಹಮ್ಮಾಯಿಯ ಕುರಿ (ಮಹಮ್ಮಾಯಿನ್ನೊ ಬೊಕ್ಕೊ) ತಂದು ಆಚರಿಸುತ್ತಾರೆ. ಅಥವಾ ಚಂದಾ ಮಾಡಿ ಊರಿನವರೆಲ್ಲ ಒಂದೆಡೆ ಸೇರಿ ಮಹಮ್ಮಾಯಿಗೆಂದೇ ನಿಗದಿಪಡಿಸಿದ ಸ್ಥಳದಲ್ಲಿ ಹಬ್ಬವನ್ನು ಆಚರಿಸುತ್ತಾರೆ.

೮. ಖ್ವಿರ್‌ಮಯ್ ದೇವತೆ ಮೌನದೇವತೆ ಶಾಂತಿದೇವತೆ ಶಿಕೋತರ್ ಮತ್ತು ಖ್ವಿರ್‌ಮಯ್ ದೇವತೆಗಳಿಗೆ ಛರ್ಸುದಲ್ಲಿ ಗುರುತಿಗಾಗಿ ವೀಳ್ಯದೆಲೆ ಕೂರಿಸಿ ಕುಂಕುಮ ಚಿಮುಕಿಸಿ, ದೀಪ ದೂಪ, ಹೂವುಗಳಿಂದ ಹೆಸರಿಟ್ಟು ಪೂಜಿಸುತ್ತಾರೆ. ಹಬ್ಬಗಳನ್ನು ಆಚರಿಸುವಾಗ ಯಾವುದೇ ಭಿನ್ನಾಭಿಪ್ರಾಯ ಉಂಟಾಗಿ ಮನಸ್ತಾಪ ಜಗಳಗಳು ಉಂಟಾಗದಂತೆ ಪೂಜೆ ಸಾಂಗವಾಗಿ ನಡೆವಂತೆ ಮಾಡು ತಾಯಿ ಎಂದು ಈ ದೇವತೆಯನ್ನು ಪ್ರಾರ್ಥಿಸಿ ಪೂಜಿಸುತ್ತಾರೆ.

**೯. ಮೆಲಡಿ ದೇವತೆ (ಅಸಮಾಧಾನದಿಂದ ಮುನ್ನುಗ್ಗುವ ದೇವತೆ):** ಒಬ್ಬ ವರ್ತಕ ಕೊಬ್ಬಿದ ಕುರಿಯನ್ನು ಸಾಕಿದ್ದ. ತನ್ನ ವ್ಯಾಪಾರದಲ್ಲಿ ದ್ವಿಗುಣ ಲಾಭ ಮಾಡಿದಂಥ ದೇವರಿಗೆ ಕೊಡುವನೆದು ಮನದಲಲಿ ಅಂದು ಕೊಂಡಿದ್ದ. ಎಲ್ಲ ದೇವತೆಗಳಿಗೂ ಆ ಕೊಬ್ಬಿದ ಕುರಿಯ ಮೇಲೆ ಕಣ್ಣಾಯಿತು. ವರ್ತಕನಿಗೆ ಲಾಭವೋ ಲಾಭವಾಯಿತು. ಆಗ ಈ ಜುಲಮ್ (ಜಬರದಸ್ತ್) ಮೆಲಡಿ ದೇವತೆಯು ಜುಲಮ್‌ನಿಂದಲೇ ತನ್ನನ್ನು ಯಾರೂ ಪೂಜಿಸಿ ಆದರಿಸಿದಿದ್ದುದರಿಂದ ಇದೇ ಸರಿಯಾದ ಸಮಯವೆಂದು ಆ ಕೊಬ್ಬಿದ ಕುರಿಯನ್ನು ಯಾರೂ ಕಣ್ಣೆತ್ತಿಯೂ ನೋಡದಂತೆ ಕೆಟ್ಟ ದುರ್ವಾಸನೆಯಿಂದ ತುಂಬಿರುವಂತೆ ಮಾಡಿದಳು. ಇದರಿಂದ ಎಲ್ಲ ದೇವತೆಗಳು ದೂರ ಸರಿದರು. ವರ್ತಕನಿಗೆ ಚಿಂತೆಯಾಯಿತು. ಯಾವ ದೇವರ ಹೆಸರಿನಲ್ಲಿ ಕುರಿ ಕೊಡಬೇಕೆಂದು (ಬೊಕ್ಕುದ್ಯಾವಾನು) ತಿಳಿಯಲಿಲ್ಲ. ಕೊನೆಗೆ ಒಂದು ನಿರ್ಧಾರಕ್ಕೆ ಬಂದವನಾಗಿದ್ದ. ಹಕ್ಕಿಪಿಕ್ಕಿಯರ ದೇವತೆ ಜುಲಮ್ ಮೆಲಡಿ, ಜೋಗಮ್ಮನಾಗಿ ಬಂದು ಉಪಾಯ ಹೇಳಿದಳು. "ನೀನು ಸಾಕಿದ್ದ ಕುರಿಯ ಕೆಟ್ಟ ದುರ್ವಾತಗಳನ್ನು ಹೋಗಲಾಡಿಸುವಂತಹ ಒಂದು ದೇವತೆಯಿದ್ದಾಳೆ. ಆಕೆಯೆ 'ಮೆಲಡಿ' ದೇವತೆ, ಎಲ್ಲ ದೇವತೆಗಳ ಕಣ್ಣು ಬಿದ್ದದ್ದರಿಂದ ಆಕೆ ಈ ಥರ ಮಾಡಿದ್ದಾಳೆ. ಕುರಿಯನ್ನು ಆಕೆಯ ಹೆಸರಿಗೆ ಕೊಡುವೆಯಾದರೆ ಈ ದುರ್ವಾತಗಳನ್ನು ತೀರಿಸುತ್ತಾಳೆ ಎಂದು. ಆತ ಹಾಗೆ ಮಾಡುತ್ತೇನೆಂದು ಹರಸಿಕೊಂಡ ಮರುಕ್ಷಣವೇ ಎಲ್ಲ ದುರ್ವಾತಗಳೂ ಮಾಯವಾಗಿ, ಸುಗಂಧ ದ್ರವ್ಯಗಳ ಸುವಾಸನೆಯಿಂದ ತುಂಬಿತು. ಆಗ ತಾನೇ ಪೂಜಾಮಂದಿರದಿಂದ ಹೊರಬಂದ ಸುವಾಸನೆಯೆಂಬಂತಾಯಿತು. ವರ್ತಕ ಮರುದಿನ ಸಂಜೆಯೇ ಹಕ್ಕಿಪಿಕ್ಕಿಗರನ್ನು ಕರೆಸಿ ಹಬ್ಬ ಆಚರಿಸುವಂತೆ ಕುರಿ ಮತ್ತು ಬೇಕಾದ ಸಾಮಾಗ್ರಿಗಳನ್ನು ಒದಗಿಸಿದ.

ಹಕ್ಕಿಪಿಕ್ಕಿಗರು ಛರ್ಸುಗಳಲ್ಲಿ ಖ್ವಿಕ್ಕತ್ ದೇವತೆಗೆ ಪೂಜೆಸಲ್ಲಿಸುವ ಸಮಯದಲ್ಲೇ ಶೇಳ್, ಮಹಮ್ಮಾಯಿ, ಶಿಕೋತರ್, ಖ್ವಿರಾಮಯ್ ಮೆಲಡಿ, ದೇವತಗಳಿಗೆ ವೀಳ್ಯದೆಲೆಯನ್ನು

ಕೂರಿಸಿ ಪೂಜಿಸುತ್ತಾರೆ. ಖ್ವಿಕ್ಕತ್‌ಗೆ ಮಾಡಿದ ಪೂಜೆ ಮೇಲಡಿಗೂ ಸಲ್ಲುತ್ತದೆಂಬ ವಾಡಿಕೆಯಿದೆ. ಆದರೆ ಪ್ರತ್ಯೇಕ ಪೂಜೆಗಳಿಲ್ಲ.

೧೦. ಪಂವತಣ (ಪಾರ್ಥನ್) ತದ್ರೂಪಿ ದೇವತೆ : ಭರ್ಸುದಲ್ಲಿ ಗುರುತಿಗಾಗಿ ವೀಳ್ಯದೆಲೆ ಅಥವಾ ಮೂರ್ತಿ ಕೂರಿಸುತ್ತಾರೆ. ಹಕ್ಕಿಪಿಕ್ಕಿಯರಲ್ಲಿರುವ ಕಥಾ ಪುರಾಣಗಳಲ್ಲಿ 'ಲೋಮ-ಘೋಮ' ಎಂಬ ದೈತ್ಯರನ್ನು ದೇವಿಯು ಸಂಹರಿಸುತ್ತಾಳೆ. ಆಕಾಶ ಮಾರ್ಗದಲ್ಲಿ ಹೋಗುತ್ತಿದ್ದ ದೇವಿಯ ರೂಪ ನದೀ ನೀರಲ್ಲಿ ಕಂಡು ಮೋಹಗೊಂಡ ಲೋಮ ಎಂಬುವವನು ದೇವಿಯನ್ನು ಮದುವೆ ಆಗುವುದಾಗಿ ವ್ಯಕ್ತಪಡಿಸುತ್ತಾನೆ. ಘೋಮ ಎಂಬುವವನು ತಾನೇ ಮದುವೆಯಾಗುವುದಾಗಿ ಹೇಳುತ್ತಾನೆ. ಅವರಿಬ್ಬರೂ ನದೀ ತೀರದಲ್ಲಿ ಕಚ್ಚಾಡುವುದನ್ನು ಕಂಡು ಆಕಾಶ ಮಾರ್ಗದಲ್ಲಿ ಹೋಗುತ್ತಿದ್ದ ದೇವಿ ವೀಖ್ಬಾಳಿಯು ಪರನಾರೀ ವ್ಯಾಮೋಹಿತರಾಗಿ ಕರ್ತವ್ಯ ಮರೆತು ಅಹಂಕಾರಿಗಳಾದ ಲೋಮ-ಘೋಮ ಮದೋನ್ಮತ್ತರಂತೆ ಹೋರಾಡುತ್ತಿರುವುದನ್ನು ಕಂಡು ಇಷ್ಟಕ್ಕೆಲ್ಲ ಕಾರಣ ತನ್ನ ನೆರಳನ್ನು ನೀರಲ್ಲಿ ಕಂಡುದರ ಪರಿಣಾಮವೆಂದೇ ತಿಳಿದಳು. ಆದ್ದರಿಂದ ಇಬ್ಬರಿಗೂ ತಾನೊಬ್ಬಳು ಸಮಾಧಾನ ಪಡಿಸಲಾರಳು. ತನ್ನಲ್ಲಿ ಅಧೀನರಾದ ಹಲವಾರು ದೇವತೆಗಳಲ್ಲಿ ಪಂವತಣಿ(ಪಾರ್ಥನ್) ದೇವತೆಯೋ ಮೊದಲು ಮುಂದೆ ಬಂದು, ಅವಳಿಗಾದ ಸಂಕಟ ತೀರಿಸುವಂತೆ ಅಭಯವಾಗಿ ದೇವಿ ವೀಖ್ಬಾಳಿಯ ನೆರಳಿನಂತೆ ಪ್ರತಿರೂಪ ತಾಳಿದಳು. ಈ ತದ್ರೂಪಗಳಿಂದ ಇಬ್ಬರೂ ಒಂದೇ ಆಗಿ ತೋರಿ ಬಂದರು. ತಮ್ಮಾಸೆಗಳು ಎರಡಾಗಿ ತೋರಿಬಂದದ್ದರಿಂದ ಜಗಳ ನಿಂತಿತು. ತಾವಿನ್ನು ಮದುವೆಯಾಗುವ ರೀತಿ ಹೇಗೆಂದು ಕೇಳಲು ದೇವಿಯು ಒಂದೊಂದಾಗಿ ವಿವರಗಳನ್ನು ನೀಡುತ್ತಾಳೆ.

ಆ ವಿವರಗಳನ್ನು ದೇವಿ ವೀಖ್ಬಾಳಿಯ ದಹೆತ್ ಪೂಜೆಯಲ್ಲಿ ಕಾಣಬಹುದು. 'ಲೋಮ-ಘೋಮ' ಎಂಬ ದಹೆತ್(ದೈತ್ಯ)ನನ್ನು ಟೀಪ್ಪವಾಗ (ಬಿಗಿ) ಕಡಿ(ಕಡಿವಾಣ)ಯನ್ನು ನೆಲದಲ್ಲಿ ಆಳಕ್ಕೆ ಹೂತು ದಹೆತನ ಕಾಲಿಗೆ ಬಿಗಿಯುತ್ತಾರೆ. ಎಷ್ಟು ಸಲ ಬಿಗಿದರೂ, ಬಿಗಿಸಿಕೊಳ್ಳಲು ಸಫಲರಾಗುತ್ತಿದ್ದ ಲೋಮ-ಘೋಮರು 'ಇದೆಂಥ' ಪದ್ಧತಿಯೆನ್ನುತ್ತ ಪುಟಿದು ಬಿಡಿಸಿಕೊಳ್ಳುತ್ತಿದ್ದರು. ಹೀಗಾದರೆ ಅವರನ್ನು ಅಂಕೆಯಲ್ಲಿಡಲಾಗದೆಂದು ಬೆಳಗು ಹರಿವ ಮೊದಲೇ ಅನಾಹುತಗಳಿಂದ ನೂರಾರು ಅಮಾಯಕ ಹೆಂಗಳೆಯರನ್ನು ಸಲಹುವ ಪಣತೊಟ್ಟ ದೇವಿ ವೀಖ್ಬಾಳಿಯು ಪಂವತಣಿಯನ್ನು ಸಹಾಯಕ್ಕೆ ಕರೆಯುತ್ತಾಳೆ. ದೇವಿ ಪಂವತಣಿ ತಂಗಿ, ನೀನು ಕಡಿಯ ಗುಂಡಿಯೊಳಕ್ಕಿಳಿದು, ಅವರೆಷ್ಟು ಜಗ್ಗಿದರೂ ಬಿಡಿಸಿಕೊಳ್ಳಲಾರದಂತೆ ತಡೆಯಾಗಿ ಹಿಡಿದಿಡಬೇಕೆಂದಳು. ಆಗ ದೇವಿ ಪಂವತಣಿಯು ಉಳಿದ ಶಾಸ್ತ್ರಗಳಲ್ಲಿ ತನಗೆ ಭಾಗವಹಿಸಲಾಗುವುದಿಲ್ಲವಲ್ಲ ಎಂದು ಬೇಸರಿಲಸಲು ದೇವಿಯು ಮುಂದೆ ನಡೆವ ನಿನ್ನ ಪೂಜೆಯ ಕೊನೆಯ ಶಾಸ್ತ್ರಗಳಲ್ಲಿ ಬೆಳಗುವ ದೀವಳಿಗೆಯನ್ನು, ದಹೆತನನ್ನು ಬಿಗಿದಿರುವ ಕಡಿಯ ಬಳಿಯೂ ಬೆಳಗಿ ನನ್ನಂತೆ ಕೊನೆಯುಶಾಸ್ತ್ರದ ದಿವಳಿಗೆ ನಿನಗೆ ಸಲ್ಲುವಂತೆ ಮಾಡುತ್ತೇನೆಂದು ಆಶ್ವಾಸನೆ ನೀಡುತ್ತಾಳೆ. ಇದರಿಂದ ಸಂತುಷ್ಟಳಾದ ಪಂವತಣಿದೇವಿ ಕಡಿಯ

ಮೂಲಕ ಗುಂಡಿಯೊಳಕ್ಕಿಳಿದು ದಹೆತ್(ದೈತ್ಯ)ನು ಏನೇ ಕೊಸರಾಡಿದರೂ ಬಿಡಿಸಿಕೊಳ್ಳದಂತೆ ಬಿಗಿ ಮಾಡಿದಳು. ಹೀಗೆ ದೇವಿ ವೀಖ್ಬಳಿಯ ಪೂಜೆಯಲ್ಲಿ ಪಂವತಣಿಯ ಪೂಜೆಯೂ ಕಡಿ ಬಿಗಿದಿರುವ ಜಾಗದಲ್ಲಿ ಸಲ್ಲುತ್ತದೆ. ಈ ಕಾರ್ಯ ಭರ್ಮ್ನದಲ್ಲಿ ಮಾತ್ರ ನಡೆಯುತ್ತದೆ.

**೧೧. ಚಾಂದಡಿ ದೇವತೆ ಪೂಜೆ :** ಚಾಂದಡಿ ದೇವತೆಯ ಗುರುತಿಗಾಗಿ ಗುಜರಾತ್ಯೋವಾಳದಲ್ಲಿ ಮೋಳ್ಕ್ಯ ಇರುತ್ತದೆ. ಮತ್ತೆ ಬೇರೆ ಪಂಗಡದಲ್ಲಿ ಮೋಳ್ಕ್ಯ ಚಾಂದಡಿಗಿಲ್ಲ. ಚಾಂದಡಿ ದೇವತೆ ಪಾರ್ಧನ್ ರಹವಡಿ ಮಧ್ಯೆ ಕೂರುವ ೧೧ನೇ ದೇವತೆಯಾದರೂ ಖ್ಬಕ್ಯತ್ ಪೂಜೆಯಾಗುವಾಗ ಈ ದೇವತೆಯನ್ನು ಜೊತೆಯಲ್ಲೇ ಕರೆವುದಿದೆ. ಭವನ್ ಬಂದ ಪೂಜಾರಿ ಕಾವುರಕುತವನ್ನು ಮೋಳ್ಕ್ಯಕ್ಕೆರಿಸಿ ತನ್ನೆರಡೂ ಕೈಯಿಂದ ಮುಖಕ್ಕೆ ಭುಜಗಳಿಗೆ ತಟ್ಟಿಕೊಳ್ಳುತ್ತಾನೆ. ವಿನಃ ಆಪೋಶಿಸುವುದಿಲ್ಲ. ಇದಕ್ಕೆ ಭಾಪಾ ನಾಖಾನು ಅನ್ನುತ್ತಾರೆ. ವೀಖ್ಬಳಿ ಪೂಜೆಯಲ್ಲಿ ಕಡ್ಯೆಗಾಗಿ ಸಿಹಿಕಜ್ಜಾಯ ಮಾಡುತ್ತಾರೆ. ಅದರಲ್ಲಿ ಐದು ಕಜ್ಜಾಯದ ಮೇಲೆ ಈ ಚಾಂದಡಿ ಖಕ್ಯತ್‌ಗೆ ಕೊಯ್ಯಲ್ಪಡುವ ಕುರಿಯ ಸುಟ್ಟ ಖ್ಯೊಳಿೊ (ಕಲಿಜ), ಮಾಂಸದ ತುಂಡು ಇಡಲಾಗುತ್ತದೆ. ಇಲ್ಲಿ ಗಮನಿಸಬಹುದಾದಂಥ ಒಂದಂಶವೆಂದರೆ ದೇವಿ ವೀಖ್ಬಳಿಗೆ ದಹೆತ್(ಕೋಣ) ಬಲಿಯಾಗುವಾಗ ಆ ಡೇರೆಯಿಂದ ಚಾಂದಡಿಯ ಮೋಳ್ಕ್ಯವನ್ನು ಡೇರೆಯಿಂದ ಹೊರಗೆ ಅಂದರೆ ಪಕ್ಕದಲ್ಲಿರಿಸಿ ಪೂಜೆ ನಡೆಸುತ್ತಾರೆ. ಏಕೆಂದರೆ ದಹೆತನ ಪೂಜೆ ಚಾಂದಡಿ ದೇವತೆಗೆ ಸ್ವೀಕರವಿಲ್ಲ. ಆದ್ದರಿಂದ ಚಾಂದಡಿಯ ಭವನ್ ಬಂದ ಪೂಜಾರಿ (ಭವನ್ಯೊ) ದಹೆತನ ಮಾಂಸ ಸ್ವೀಕರಿಸುವುದಿಲ್ಲ. ದಹೆತನ ಪೂಜೆಯಾಗಿ ಎತ್ತಿಕೊಂಡು ಹೋದ ಮೇಲೆ ಮತ್ತೆ ಮೋಳ್ಕ್ಯವನ್ನು ಯಥಾಪ್ರಕಾರ ಇರಿಸಿ ಪೂಜೆಸಲ್ಲಿಸುತ್ತಾರೆ.

**ಚಾಂದಡಿ ಕೃಪೆ :** ಚಾಂದಡಿ ದೇವತೆ ಹಕ್ಕಿಪಿಕ್ಕಿಯರ ಬೇಟೆಗಾರಿಕೆಗೆ ಬೆನ್ನೆಲುಬಾದವಳೆಂದು ನಂಬುತ್ತಾರೆ. ಶಿಕಾರಿಗೆ ಹೊರಡುವಾಗ ಆತ ಪಾಳ, ಮಗರಿ, ಖಿಂದಾರುವನ್ನು ಎತ್ತಿ ಹೆಗಲಿಗೆ ಹಾಕಿಕೊಳ್ಳಬೇಕಾದರೆ "ಚಾಂದಡಿ ಒಳ್ಳೆ ಶಿಕಾರಿ ಆಗೊಹಾಗೆ ಮಾಡು" ಅನ್ನುತ್ತ ಹೊರಡುತ್ತಾರೆ. ನೆನಸದಿದ್ದರೆ ಒಳ್ಳೆ ಶಿಕಾರಿ ಯಾಗುವುದಿಲ್ಲವೆಂದು ನಂಬುತ್ತಾರೆ. ಹೆಂಗಸರು ಭಿಕ್ಷೆಗೆ ಹೋಗುವಾಗ ಚಾಂದಡಿ ಎನ್ನುತ್ತಲೆ ಹೆಗಲು ಚೀಲ (ಬಟುವೊ) ಎತ್ತುತ್ತಾರೆ. ಕಾಳಿವಾಳದಲ್ಲಿ ಲೋಢವ್ (ಪಾಶ್) ಬಣಜಾರಿ (ಮಗರಿ) ದೇವತೆಯನ್ನು ನೆನೆಸಿ ಶಿಕಾರಿಗೆ ಹೊರಡುತ್ತಾರೆ.

ಚಾಂದಡಿ ದೇವತೆಗೆ ಪ್ರತ್ಯೇಕ ಪೂಜೆ i) ಚಾಂದಡೀನೊ ಬೋಕ್ಡೊ (ಚಾಂದಡಿಗೆ ಕುರಿ), ii) ಹಲ್ವನ್ ಪುರಿ ಪೂಜೆ (ರಹಾವಡಿ ದೇವತೆಯೊಂದಿಗೆ)

**i) ಚಾಂದಡೀನೊ ಬೋಕ್ಡೊ :** ಭರ್ಮ್ನದಲಲೇ ಅಲ್ಲದೆ ಚಾಂದಡಿ ದೇವತೆಗೆ ಪ್ರತ್ಯೇಕ ಪೂಜೆ ಕೂಡ ಮಾಡುತ್ತಾರೆ. ಚಾಂದಡಿಗಾಗಿ ಕುರಿತಂದು ಮೋಳ್ಕ್ಯ ಕೂರಿಸಿ, ಪೂಜೆಮಾಡಿ ಭವನ್ ಬರಿಸಿ, ಕೊಯ್ದ ಕುರಿಯ ಕಾವನ್ನು ಮೋಳ್ಕ್ಯಮೇಲೆರಿಸಿ, ಮುಖದ ಮೇಲೆ ಭುಜಗಳಿಗೆ 'ಭಾಪ ನಾಖಾನು' (ಕೈತಟ್ಟಿಕೊಳ್ಳುವುದು) ಮಾಡುತ್ತಾರೆ. ಅಲ್ಲಿಗೆ ದೇವಿ ತೃಪ್ತಿಪಡುವಳೆಂದು ಹೇಳುತ್ತಾರೆ. ಬೇರೆ ಪೂಜೆಯ ಹಾಗೆ ಕಾವನ್ನು ಚಾಂದಡಿ ಭವನ್ಯೋ (ಚಾಂದಡಿ ಆವಾಹನಿತ ಪೂಜಾರಿ) ಆಪೋಶಿಸುವುದಿಲ್ಲ. ಇಲ್ಲಿ ಸಿಹಿ ಅಡುಗೆಯನ್ನು ಮಾಡಬೇಕಾಗುತ್ತದೆ. ಎಲ್ಲ

ತರಹದ ತಿನ್ನುವ ಹಣ್ಣು-ಹಂಪಲಗಳನ್ನು ಒಣ ಪದಾರ್ಥಗಳನ್ನು ಸಿಹಿ ಅಡುಗೆಯಲ್ಲಿ ಹೆಚ್ಚಿ (ಕತ್ತರಿಸಿ) ಹಾಕುತ್ತಾರೆ. ಮಾಂಸದ ಸಾರು ಮಾಡಿದ ನಂತರ ಅಕ್ಕಿಯೊಂದಿಗೆ ತಯಾರಿಸಿದ ಸಿಹಿಯೂಟವನ್ನು 'ಥಾಳ್'(ಹರಿವಾಣ)ನಲ್ಲಿ ಹರಡಿ ಮಾಂಸ ಮತ್ತು ಸಾರು 'ಥಾಳ್' ಮೇಲೆ ಬಡಿಸುತ್ತಾರೆ. ವಧಾವ (ಗುಲಗುಂಜಿಶಾಸ್ತ್ರ) ನೋಡಿ ಪ್ರಸಾದ ಹಂಚುತ್ತಾರೆ. ಗುಜರಾತ್ಯ ಹೆಂಗಸರು ಈ ಪ್ರಸಾದ ಥಾಳ್ ಸ್ವೀಕರಿಸುವಂತಿಲ್ಲ. ಕಾಳಿವಾಳೋ, ಮೇವಾಡೊದವರ ಹೆಂಗಸರು ಸ್ವೀಕರಿಸುತ್ತಾರೆ. ಬರಿಯ ಸಿಹಿ ಅಡುಗೆಯೂಟ ಸ್ವೀಕರಿಸಬಹುದಷ್ಟೇ ಮಾಂಸ, ಸಾರು, ಗುಜರಾತ್ಯ ಹೆಂಗಸರಿಗೆ ಕೊಡುವುದಿಲ್ಲ.

**ii) ಹಲ್ಬನ ಪುರಿ ಪೂಜೆ ಮತ್ತು ರಹಾವಡಿ ಪೂಜೆ :** ಯಥಾಪ್ರಕಾರ ಚಾಂದಡಿಗೆ ಕೋರ ಹಂಡಕ(ಯಾರೂ ಬಳಸದ ಹೊಸ ದೊಡ್ಡ ಮಣ್ಣಿನ ಹಂಡೆ)ದಲ್ಲಿ ಸಿಹಿ ಅಡುಗೆ ಮಾಡುತ್ತಾರೆ. ಚಾಂದಡಿಗೆ ಹಲ್ಬನ್‌ಪುರಿ ಪೂಜೆಯಲ್ಲಿ ಕುರಿಬಲಿಯಿರುವುದಿಲ್ಲ. ಸಿಹಿ ಅಡುಗೆ ಮಾತ್ರ ಹೊಸ ಮಡಕೆ ಖರೀದಿಸುವಾಗ ದೊಡ್ಡ ಮಣ್ಣಿನ ಕೋರ ಹಂಡಕುದೊಂದಿಗೆ ರಹಾವಡಿ ದೇವತೆಗಾಗಿ ಚಿಕ್ಕ ಕೋರ ಹಂಡಕುವನ್ನು ತರುತ್ತಾರೆ. ಇದರಲ್ಲೂ ಸಿಹಿ ಅಡುಗೆ ಬೇಯುತ್ತದೆ. ಎರಡು ದೇವತೆಗಳಿಗೂ ಪ್ರತ್ಯೇಕ ಥಾಳ್(ಹರಿವಾಣ)ನಲ್ಲಿ ಸಿಹಿಯೂಟ ಬಡಿಸಲ್ಪಡುತ್ತದೆ. ನಂತರ ಪೂಜಾರಿಗೆ ಭವನ್‌ದೇವಿ ಆವಾಹನೆ ಬರಿಸಲು ಜೋಲೋ... ಜೋಲೋ... ಹೇಳುತ್ತಾರೆ. ಬೇರಾವ ಅನವಶ್ಯಕ ಮಾತುಗಳನ್ನಾಡುವಂತಿಲ್ಲ. ಆದ್ದರಿಂದ ಪೂಜೆ ಹೆಚ್ಚಿನ ಗದ್ದಲವಿಲ್ಲದೆ ನಡೆಯುತ್ತದೆ. ಚಾಂದಡಿಗೆ "ಹಲ್ಬನ್‌ಪುರಿ" ಪೂಜೆಯಲ್ಲಿ ಹೆಂಗಸರಿಗೆ ಪ್ರಸಾದ ವಿನಿಯೋಗಿಸುವುದಿಲ್ಲವಾದ್ದರಿಂದ ಅವರು ಹಬ್ಬದ ಬಿಡಾರದ ಬಳಿ ಇರುವುದಿಲ್ಲ. ರಾತ್ರಿಯಾದರೆ ಅಲ್ಲಿ ಮಲಗುವಂತಿಲ್ಲ. ಆಕಸ್ಮಾತ್ ಮಲಗಿದರೂ ಎಬ್ಬಿಸುವಂತಿಲ್ಲ. ಕಾರಣ 'ಹೆಂಗಸರ ಬಳೆಗಳ ಸದ್ದು ನಿಷೇಧ' ಇದರಿಂದಲೇ ಚಾಂದಡಿಯ ಪೂಜೆ ರಾತ್ರಿ ವೇಳೆ ಕೈಗೊಳ್ಳುವಾಗ ಹೆಚ್ಚಿನ ಗದ್ದಲವಿರುವುದಿಲ್ಲ. ಎಷ್ಟೇ ಜಾಗರೂಕತೆ ವಹಿಸಿದರೂ ಅಲ್ಲಿರಬಹುದಾದ ಹೆಂಗಸರ ಕೈಬಳೆಗಳ ಸದ್ದಾದರೆ ಅವರ ಆಪತ್ತನ್ನು ಬರಮಾಡಿಕೊಂಡಂತಾಗ ಬಾರದೆಂದು ಹಬ್ಬವನ್ನು ಆಚರಿಸಲು ಶುರುಮಾಡುವಾಗಿಂದಲೇ ಹೆಂಗಸರನ್ನು ಬಿಡಾರದಿಂದ ಕಳಿಸಿ ಬಿಡುತ್ತಾರೆ. ಅಥವಾ ಹೆಂಗಸರು ತಾವಾಗಿಯೇ ಹೊರಟು ಹೋಗುತ್ತಾರೆ.

೧೩. **ಹನುಮಾನ್ ಪೂಜೆ (ಹನೋಮಾನ್ ಪೂಜಾ) :** ಹಕ್ಕಿಪಿಕ್ಕಿಗರ ಗುಜರಾತ್ಯೋ ಪಂಗಡದಲ್ಲಿ ಹನುಮಾನ್ ದೇವರನ್ನು ಪೂಜಿಸುವುದು ಒಂದು ವಿಶೇಷವೆಂದೇ ಹೇಳಬೇಕು. ಏಕೆಂದರೆ ಶಿಕಾರಿಗೆ ಹೋಗುವಾಗ ಚಂಚಲ ಮಲಸ್ಯನಾಗದೆ ಕಂಡ ಬೇಟೆಯನ್ನು ಛಲದಿಂದ ಕೆಡಹುವಂತೆ ಬಾಹುಬಲದ ಜೊತೆ ಏಕಾಗ್ರತೆಯನ್ನು ಕರುಣಿಸುವನೆಂದು ಹೇಳುತ್ತಾರೆ.

**ಹನುಮಾನ ಕೃಪೆ :** ಬಾಹುಬಲ, ನೇಕ್ ನಜರ್ (ಒಳ್ಳೆಯ ದೃಷ್ಟಿ), ದಾತಿ ಬತೀಶಿ (ಹಲ್ಲು ವಸಡು) ಕಷ್ಟದಲ್ಲಿ ಪಾರೊ(ಪಾರು) ಮಾಡುವುದು. ಭಗ್ಗುದಲ್ಲಿ ಗುರುತಿಗಾಗಿ ಬಾಲವಿರುವ ಮೂರ್ತಿ ಕೂರಿಸುತ್ತಾರೆ. ಮೂರ್ತಿ ಇಲ್ಲದವರು ಹನುಮಾನ್ ಹೆಸರಿನಲ್ಲಿ ವೀಳ್ಯದೆಲೆ ಕೂರಿಸುತ್ತಾರೆ. ಹನುಮಾನ್ ಮಾಂಸಹಾರಿ ಅಲ್ಲದಿರುವುದರಿಂದ ಬೇಯಿಸಿದ

ವಸ್ತುವೊಂದನ್ನು ಬಿಟ್ಟು ಉಳಿದೆಲ್ಲ ಪದಾರ್ಥಗಳಾದ ಹಣ್ಣು ಹಂಪಲು, ನೆಲಗಡಲೆ, ಇತ್ಯಾದಿ ತಂದು ಥಾಳ್(ಪತ್ತರ್, ಹರಿವಾಣ)ನಲ್ಲಿ ಹಾಕಿ ಪೂಜೆ ಮಾಡಿ ಎಲ್ಲರಿಗೂ ಹಂಚುತ್ತಾರೆ.

**೧೪. ಗುರುಪಾಥ್ಯೋ ಪೂಜೆ :** ಹಕ್ಕಿಪಿಕ್ಕಿಯರ ನಾಲ್ಕು ಪಂಗಡಗಳಲ್ಲೂ ಆಯಾ ಪಂಗಡಕ್ಕೆ ಸಂಬಂಧ ಪಟ್ಟ ಗುರುಗಳನ್ನು ಆಯ್ದುಕೊಳ್ಳುತ್ತಾರೆ. ಯಾರಿಂದ ತಮ್ಮ ವಂಶ ಬೆಳೆಯಿತು. ಯಾರಿಂದ ತಮ್ಮ ವಂಶ ಬೆಳೆಯಿತು. ಯಾರಿಂದ ಉದ್ಧಾರವಾದೆವು ಎಂಬುದನ್ನು ಗಮನಿಸಿ ಗುರುಗಳನ್ನು ಆಯ್ದುಕೊಳ್ಳುತ್ತಾರೆ.

೧. ಗುಜರಾತ್ಯೋ ಪಂಗಡದಲ್ಲಿ - ಗುರು ಪಾಥ್ಯೋ
೨. ಮೆವಾಡೊ ಪಂಗಡದಲ್ಲಿ - ಗುರು ಹಾಜೊ
೩. ಕಾಳಿವಾಳೋರಲ್ಲಿ ಪಂಗಡದಲ್ಲಿ - ಗುರು ಥಾಡರ್
೪. ಪವಾರ ಪಂಗಡದಲ್ಲಿ - ಗುರು ಉಬಾರ್‍ಯೋ

ಯಾವುದೇ ಒಳ್ಳೆಯ ಕಾರ್ಯ, ಹಬ್ಬಗಳನ್ನು ಮಾಡುವಾಗ ಹಿರಿಯರಾಗಿ ಆಯಾ ಪಂಗಡದವರು ಗುರುವನ್ನು ನೆನೆಸುತ್ತಾರೆ. ಬೇರೆ ಸಮುದಾಯದವರು ಹಿರಿಯರ ಪೂಜೆಯನ್ನು ಮಾಡಿದ ಹಾಗೆ ಹಕ್ಕಿಪಿಕ್ಕಿಯರು ಗುರುಪೂಜೆಯನ್ನು ಮಾಡುತ್ತಾರೆ. ಇಲ್ಲಿ 'ಗುರು' ಮತ್ತು 'ವಡೋ' ಎಂಬ ಶಬ್ದದ ಅರ್ಥ ಹಿರಿಯ ಎಂದಾಗುತ್ತದೆ. ಆದರೂ ಗುರುವಿನ ಅರ್ಥ ವಿಶೇಷತೆಯಿಂದ ಕೂಡಿದೆ.

೧. ಗುರು ಆದವನು ತನ್ನ ಸಮುದಾಯದವರಿಗಾಗಿ ಶ್ರಮಿಸಿರಬೇಕು. ಬದುಕೆಂಬ ಹೋರಾಟದಲ್ಲಿ ಕೇವಲ ತಮ್ಮಗಳ ಉಳಿವಿಗಾಗಿ ತಮ್ಮನ್ನು ತಾವೇ ಬಲಿಕೊಟ್ಟವರೆನಿತೋ ಮಂದಿಯಿದ್ದಾರೆ. ಅವರೆಲ್ಲ ಹುತಾತ್ಮರು ಎನಿಸಿಕೊಳ್ಳುವ ಸಾಲಿನಲ್ಲಿ 'ಗುರು' ಎಂಬ ಹೆಸರನ್ನು ಪಡೆಯುತ್ತಾರೆ.

೨. ಗುರುವಾದವನು ತಾನು ಮಾಡಿದ ಘನಕಾರ್ಯಗಳಿಗೆ ಮಾರುಸೋತ ತನ್ನ ಮಕ್ಕಳಿಂದ ಮೊಮ್ಮಕ್ಕಳಿಂದ ಪೂಜಿತನಾಗುವನು.

೩. ಸದಾ ಒಳ್ಳೆಯ ನಡತೆಯಿಂದ ಕೂಡಿದವನಾಗಿ, ಕೆಡಕು ಅಪ್ಪಿತಪ್ಪಿಯೂ ಮನಸ್ಸಲ್ಲಿ ಎಣಿಸಿರಬಾರದು, ಎಲ್ಲರಿಂದಲೂ ಮನ್ನಣೆ ಪಡೆದವನಾಗಿರಬೇಕು.

೪. ಮಗ ಅಥವಾ ಮಕ್ಕಳು ಮೊಮ್ಮಗನಿಂದ ತನ್ನ ಮೂರ್ತಿ ಪ್ರತಿಷ್ಠಾಪಿಸಿಕೊಂಡು ದೇವಿಯ ಪಿಟಾರಿ(ತ್ರಾಂಗಡೂ)ಯಲ್ಲಿ ಇಡಲ್ಪಡುವನು. ಹಬ್ಬಗಳಲ್ಲಿ ಮಾತ್ರ ಹೊರತೆಗೆಯಲ್ಪಡುವ ಮೂರ್ತಿ, ಬೇರೆ ಕಾರ್ಯಗಳಲ್ಲಿ ಬರೀ ಹೆಸರನ್ನು ಹೇಳಿ ಕರೆಯುವುದರ ಮೂಲಕ ಪೂಜಿಸಲ್ಪಡುವನು.

ಇದೆಲ್ಲ ಕಾರ್ಯಗಳು ಆತನ ಜೀವಿತದಲ್ಲಿ ಸಾಧ್ಯವಿಲ್ಲ. ಆತನ ಮರಣಾನಂತರ ವಂಶಜರು ಮಗ ಮೊಮ್ಮಗ ತಂದೆಯ ನೆನಪಿನ ಗುರುತಾಗಿ ಮೂರ್ತಿ (ಖಪ್ಪರ್) ಘಡಾವಾನು (ನಿರ್ಮಾಣಿಸು) ಮಾಡುತ್ತಾನೆ. ಇತ್ತೀಚಿನವರು ತನ್ನ ವಂಶಕ್ಕೆ ಕಾರಣನಾದವನ್ನು ಪೂಜಿಸುವುದರ ಬದಲು (ಹತ್ತು-ಹದಿನೈದು) ಎಷ್ಟೋ ತಲೆಮಾರಿನಿಂದಾಚೆಯನ್ನು ಯಾಕೇ ಪೂಜಿಸಬೇಕೆಂಬ

ತಗಾದೆ ತೆಗೆದರೂ ಸಹ, ಹಿಂದಿನಿಂದಲೂ ಸಂಪ್ರದಾಯದಂತೆ ಆಚರಿಸುತ್ತ ಬಂದಿರುವುದನ್ನು ಅಳಿಸಿ ಹಾಕಲು ಸುತರಾಂ ಒಪ್ಪುವುದಿಲ್ಲ ಈಗಿನ ಹಿರಿಯರು. ಆದರೂ ಅವರಿಗೊಪ್ಪುವ ಮನೆತನದ ಹಿರಿಯನನ್ನು ಗುರುವಾಗಿ ಆಚರಿಸಿದರೂ ಮೂಲ ಗುರುವನ್ನು ಮರೆವಂತಿಲ್ಲ. ಈ ಪದ್ಧತಿಯನ್ನು ಗುರುನೋ ಗೋಟ್ ಮೂಲಕ ಆಚರಿಸುತ್ತಾರೆ.

ಹೀಗೆ ಹಿರಿಯನಿಗೆ ಗುರುವಿನ ಪದವಿ ನೀಡಲು ಆತನಿಂದ ಜನಿಸಿದ ಗಂಡು ಮಕ್ಕಳೆಲ್ಲ ಸೇರಿ ಆವರವರ ತ್ರಾಂಗಡೂ ಒಂದೆಡೆ ಸೇರಿಸಿ, ಪಟ್ಟದ ದೇವಿಯಿರುವೆಡೆ ರಕ್ತಸಂಬಂಧಿ (ಗೋತ್ರಿ)ಗಳನ್ನೆಲ್ಲ ಒಟ್ಟು ಮಾಡಿ ದೊಡ್ಡ ಹಬ್ಬವನ್ನೇ ಆಚರಿಸುವ ರೀತಿಯೇ "ಗುರುನೋ ಗೋಟ್". ಉದಾಹರಣೆಗೆ ಹೇಳಬೇಕೆಂದರೆ ಒಬ್ಬ ಅಜ್ಜನಿಗೆ ವಡೋನಿಗೆ ಎಷ್ಟು ಗಂಡು ಮಕ್ಕಳಿದ್ದಾರೋ ಅವರ ತ್ರಾಂಗಡೂ, ಆ ಗಂಡು ಮಕ್ಕಳಿಗೆ ಎಷ್ಟು ಜನ ಗಂಡು ಮಕ್ಕಳಿದ್ದಾರೋ ಅವರ ತ್ರಾಂಗಡೂಗಳನ್ನೆಲ್ಲ ಅಜ್ಜನ ತ್ರಾಂಗಡೂ ಬಳಿ ಒಯ್ದು ಲಂಗರಲ್ಲಿ ಸೇರಿಸಿ ಹಬ್ಬವನ್ನು ಆಚರಿಸಬೇಕಾಗುತ್ತದೆ. ಇದಕ್ಕೆ "ತ್ರಾಂಗಡೂ ಮಳಾವಳು" (ತ್ರಾಂಗಡೂ ಸೇರಿಸುವುದು) ಎನ್ನುತ್ತಾರೆ. ಆಚರಿಸುವ ಹಬ್ಬಕ್ಕೆ "ಗುರುನೊ ಗೋಟ್" (ಹಿರಿಯನಿಗೆ ಗುರುವಿನ ಪದವಿ) ಎನ್ನುತ್ತಾರೆ.

ಗುರುವಿನ ಪೂಜೆ ಈ ಕೆಳಕಂಡ ಸಂದರ್ಭಗಳಲ್ಲಿ ನಡೆಯುತ್ತದೆ.

೧. ಹಬ್ಬಗಳಲ್ಲಿ ಭರ್ನು ಆಚರಿಸುವಾಗ (ಕುರಿ-ಕೋಣ ಬಲಿ) ಕಥ್ಥೆನಲ್ಲಿ ಮಾಡುವ ಸಿಹಿ ಕಜ್ಜಾಯ(ಖ್ವಿವಾಳಿ)ದಲ್ಲಿ ಒಂದೆರಡನ್ನೆತ್ತಿ ಪ್ರತ್ಯೇಕ ಇರಿಸುತ್ತಾರೆ. ಹಬ್ಬದ ಕೊನೆಯಲ್ಲಿ ಆ ಖ್ವಿವಾಳಿಯ ಮೇಲೆ 'ಖ್ಲೊಳೋ' (ಸುಟ್ಟು ಬೇಯಿಸಿದ ಕಲೀಜ ಮತ್ತು ಮಾಂಸದ ಚೂರು) ಇಟ್ಟು ಆಯಾ ಪಂಗಡದ ಗುರುವಿನ ಹೆಸರನ್ನು ಹೇಳಿ ಅದನ್ನು ಸ್ವೀಕರಿಸಿ ಹರಸುವಂತೆ ಬೇಡಿಕೊಳ್ಳುತ್ತಾರೆ.

ಇಲ್ಲಿ ಗುಜರಾತ್ಯೋ ಪಂಗಡದವರು ಗುರುಪಾಥ್ಯೋನ ಹೆಸರು ಹೇಳಿ ಖ್ವಿವಾಳಿ ಮೇಲೆ ಖ್ಲೊಳೋ ಇಟ್ಟು ದೂಪ ದೀಪಗಳಿಂದ ಪೂಜಿಸುತ್ತಾರೆ.

೨. ಮನೆತನದಲ್ಲಿ ಗಂಡು ಮಕ್ಕಳ ಜನನವಾದರೆ ಮೂರು ದಿನದ ಛಟ್ಟಿ ದೇವತೆ (ಮಗುವಿಗೆ ನಗಿಸುವ ಅಳಿಸುವ ದೇವತೆ) ಪೂಜೆ ಆದ ನಂತರ "ಕಂದೊರೊ ಕಳಪಾನು" (ಉಡುದಾರ ತೊಡಿಸುವುದು) ಶಾಸ್ತ್ರದಲ್ಲಿ ಮೊದಲು ಗುರುಪಾಥ್ಯೋನ ಹೆಸರು (ಗುಜರಾತ್ಯೋ ಪಗಂಡದಲ್ಲಿ) ಹೇಳಿ, ತಲೆಮಾರನ್ನು ರಕ್ಷಿಸಲು ಹುಟ್ಟಿದ ಗಂಡುಮಗುವನ್ನು ಹರಸಬೇಕು ಎಂದು ಬೇಡಿಕೊಳ್ಳುತ್ತಾರೆ.

೩. ಮದುವೆಗಳಲ್ಲಿ ಗಂಡಿನ ಕಡೆಯವರ ತಿಲಕಶಾಸ್ತ್ರ ಮಾಡಿದ ನಂತರ ತ್ರಾಂಗಡೂ ಎದುರು ಮವಾಳ್ ಎಂಬ ಬೇಯಿಸಿದ ಬೆಲ್ಲದನ್ನವನ್ನು ಎಲ್ಲರಿಗಿಂತ ಮೊದಲು ಸೌಟಿನ ತುಂಬಾ ತೆಗೆದುಕೊಂಡು ಗುರುವಿನ ಹೆಸರು ಹೇಳಿ "ಡೋಯೋ ಠೋಕಾನು" (ಸೌಟು ಬಡಿಯುವುದು) ಮಾಡುತ್ತಾರೆ. ನಂತರದಲ್ಲಿ ಎಲ್ಲರಿಗೂ ಹಂಚುತ್ತಾರೆ. ಮೊದಲು ಗೋತ್ರಿಗಳಿಗೆ ರಕ್ತಸಂಬಂಧಿ ನಂತರ ಖ್ವಿಗು(ಸಂಬಂಧಿಕ)ಗಳಿಗೆ ಹಂಚುತ್ತಾರೆ. ಎಲ್ಲರಿಗೂ ಬೆಲ್ಲದನ್ನದ

ಉಂಡೆಯನ್ನು ಕಟ್ಟಿ ಮಧ್ಯ ಗುಳಿ ಮಾಡಿ ತುಪ್ಪ ಅಥವಾ ಡಾಲ್ಡ ಹಾಕಿ ತಪ್ಪದೆ ತಲುಪಿಸಬೇಕಾಗುತ್ತದೆ. ಇಲ್ಲವಾದರೆ ನೆಂಟಸ್ತಿಕೆ ಮುರಿವ ಪ್ರಮೇಯಗಳು ಹೆಚ್ಚು. ವ್ಯಥಾ ಜಗಳವನ್ನು ಮದುವೆಯ ಸಂದರ್ಭದಲ್ಲಿ ಬಯಸದವರು ಒಂದು ಉಂಡೆ ಕೊಡುವ ಜಾಗದಲ್ಲಿ ಎರಡು ಕೊಟ್ಟು ಶಾಂತಿ ಅನುಸರಿಸುತ್ತಾರೆ. ಹೆಣ್ಣಿನ ಮನೆಯವರೂ 'ಧಾಪ'(ಬೆಲ್ಲದನ್ನ)ವನ್ನು ಅದೇ ರೀತಿ ಹಂಚುತ್ತಾರೆ.

ನಂಬಿಕೆಗಳು

೧. ಇವರು ನರಿಯನ್ನು ತಿನ್ನುತ್ತರಾದ್ದರಿಂದ ನರಿಯ ವಾಸನೆ ಯಾವಾಗಲೂ ಇವರೊಂದಿಗೇ ಇರುತ್ತದಂತೆ. ಹೀಗಾಗಿ ನಾಯಿಗಳು ಇವರನ್ನು ಕಂಡಕೂಡಲೇ ಬೊಗಳುತ್ತವೆಯಂತೆ!
೨. ಕೊಂಬುಗಳಿರುವ ನರಿಯು ಕೇವಲ ಅದೃಷ್ಟವಂತರಿಗೆ ಮಾತ್ರ ಸಿಗುತ್ತದೆಯಂತೆ.
೩. ಮನುಷ್ಯರ ಕೈಕಾಲುಗಳು ಬಿರಿದಾಗ ಸಿಳಿದಾಗ ನರಿಯ ರಕ್ತವನ್ನು ಹಚ್ಚಿದರೆ ಅದು ವಾಸಿಯಾಗುತ್ತದೆಯಂತೆ.
೪. ಹಕ್ ನರಿಯ ದಿಕ್ಕನ್ನು ಅಪಶಕುನ ಎಂದು ನಂಬುತ್ತಾರೆ.
೫. ಮೊಲ, ಪಾಂತಿ, ಬಲದಿಂದ ಎಡಕ್ಕೆ ಹೋದರೆ, ಹಾವು ಅಡ್ಡಬಂದರೆ, ಸೀನು ಹಾಗೂ ಖಾಲಿಕೊಡ ಎದುರಾದರೆ ಎದುರಾಂಥಹ ವ್ಯಕ್ತಿಗೆ ಕೆಟ್ಟದಾಗುತ್ತದೆಯೆಂದು ನಂಬುತ್ತಾರೆ.
೬. ಕನಸಿನಲ್ಲಿ ಆನೆ, ಹುಲಿ, ಸಿಂಹದಂಥಹ ಕಾಡು ಪ್ರಾಣಿಗಳು ಬಂದರೆ ಅಂಥವರಿಗೆ ಕೆಟ್ಟದಾಗುತ್ತದೆಯಂತೆ.
೭. ದೇವತೆಗಳಿಗೆ ಮರ್ಯಾದೆ ಕೊಡದಿದ್ದರೆ, ಅವರ ಪೂರ್ವಿಕರಿಗೇ ಅವಮಾನ ಮಾಡಿದಂತೆ ಎಂದು ನಂಬುತ್ತಾರೆ.
೮. ದೇಹದ ಎಡಭಾಗಕ್ಕೆ ಗುದ್ದಿದಂತಾದರೆ ಬಹಳ ಹಕ್ಕಿಗಳು ಸಿಗುತ್ತದೆ ಎಂದು ಬಲಭಾಗಕ್ಕೆ ಗುದ್ದಿದಂತಾದರೆ ಕೆಟ್ಟದಾಗುತ್ತದೆ ಎಂದು ನಂಬುತ್ತಾರೆ.
೯. ನಮ್ಮ ಹುಟ್ಟು ಮತ್ತು ಬದುಕಿಗೆ ದಾದಾಜಿಯೇ ಕಾರಣವೆಂಬುದು ಇವರ ಬಲವಾದ ನಂಬಿಕೆ.
೧೦. ಶನಿವಾರ, ಭಾನುವಾರ ಕೆಟ್ಟ ದಿನಗಳು ಈ ದಿನಗಳಲ್ಲಿ ಬೇಟೆಗೆ ಹೋದರೆ ಹಕ್ಕಿಗಳು ಸಿಗುವುದಿಲ್ಲವಂತೆ.

ಆಚರಣೆಗಳು

೧. ದೃಷ್ಟಿ ತೆಗೆಯುವುದು : ಕಾಲು ಧೂಳಾದರೆ ಮೂರು ಕಲ್ಲು ತಂದು ಮೂರುಸಲ ಒಟ್ಟಿಗೆ ನೀವಾಳಿಸುತ್ತಾ

ಅವರ ಕಣ್ಣು ...

ಇವರ ಕಣ್ಣು ...

ಅವರ ಬಾಯಿಗೆ ಮಣ್ಣು ಬೀಳಾ...., ಎಂದು ಹೇಳುತ್ತಾ ಮೂರು ದಾರಿ ಸೇರುವ ಕಡೆ ಪುಡಿ ಪುಡಿಯಾಗುವಂತೆ ಆ ಕಲ್ಲುಗಳನ್ನು ಹೊಡೆದು ಹಾಕುತ್ತಾರೆ. ಕಾಲು ಧೂಳಿನಿಂದ

ಆರೋಗ್ಯ ಕೆಡೆಸಿಕೊಂಡು ಹೊಟ್ಟೆ ಉಬ್ಬರ ಆಗದಿರಲೆಂದು ರುಚು ಹಾಕುತ್ತಾರೆ. ತಟ್ಟೆಯಲ್ಲಿ ಸಗಣಿಯನ್ನು ಕಲಸಿದ ನೀರಿಗೆ ಕೆಂಡ ತುಂಬಿದ ಲೋಟವನ್ನು ದಬ್ಬಾಕುತ್ತಾರೆ. ಹೀಗೆ ಮಾಡುವದರಿಂದ ಆದಂತಹ ದೃಷ್ಟಿ ನಿವಾರಣೆಯಾಗುತ್ತದೆಯಂತೆ.

೨. ನೀರಿಳಿಸುವುದು : ಒಂದು ಮಡಿಕೆ ಚೊಂಬಿನಲ್ಲಿ ಒಂದು ತಟ್ಟೆಯ ಕೆಳಗೆ ಇಡುವುದು. ನಂತರ ಚೊಂಬನ್ನು ಕೈಯಲ್ಲಿ ಎತ್ತಿಕೊಳ್ಳುವುದು ಇದು ಮುಖ್ಯವಾಗಿ ಮಕ್ಕಳು ಹಸಿರಾಗಿ ಬೇಧಿ ಮಾಡುತ್ತಿದ್ದರೆ ಈ ಆಚರಣೆಯನ್ನು ಮಾಡುತ್ತಾರೆ. ನಾಲ್ಕೈದು ಈಚಲು ಚಾಪೆಗರಿಗಳಿಂದ ನೀವಳಿಸಿ ಏಳು ಗರಿಕೆ ಎಸಳಿಗೆ ಒಂದೊಂದು ಗಂಟು ಹಾಕುತ್ತಾ ಸುಟ್ಟು ಒಟ್ಟು ೭ ಗಂಟು ಹಾಕಿ ಸುಡುತ್ತಾರೆ. ಹೀಗೆ ನೀರಿಳಿಸುವಾಗ ಹೇಳುವ ಶ್ಲೋಕ.

ಭೋತ್ ಭಾಂದು
ಭೇಡೊ ಭಾಂದು
ಭಾಗರೋ ಭಾಂದು
ದಾತ್‌ಮ ಭಾಂದು
ಬತೀಷಿಮ ಭಾಂದು
ಚೋಟಿ ಭಾಂದು
ಕಾಭಳಿ ಭಾಂದು
ಥಾಕಾಣ್ ಭಾಂದು
ಭರ್ಲಿ ಭಾಂದು
ಭಾರ್ಲಿ ಭಾಂದು ಎಂದೆಲ್ಲಾ ಮಂತ್ರ ಹೇಳುತ್ತಾರೆ.
ಹೀಗೆಂದರೆ,
ನೆಲಗಾಕಟ್ಟು
ಲಂಗದ ಕಟ್ಟು
ಹಲ್ಲು ಕಟ್ಟು
ಹಲ್ಲಿನ ವಸಡುಕಟ್ಟು
ಜಡೆ ಕಟ್ಟು
ಬಾಕೀಟ್ ಕಟ್ಟು
ದೇವ್ರದ ಕಟ್ಟು
ಮನೆಯ ಹೆಂಗಸರ ಕಟ್ಟು
ಹೊರಗೆ ಹೆಂಗಸರ ಕಟ್ಟು

ಎಂದು ಹೇಳುವುದರ ಜೊತೆಗೆ ಗಂಟು ಹಾಕುತ್ತಾರೆ. ಅದೇ ಮಂತ್ರ ಮತ್ತೊಮ್ಮೆ ಹೇಳಿ ಮತ್ತೊಂದು ಗಂಟು ಹಾಕುತ್ತಾರೆ. ಹೀಗೆ ೭ ಗಂಟು ಹಾಕಿ ೭ ಬಾರಿ ಕುದಿಯುವ ನೀರನ್ನು ನೀವಾಳಿಸಿ ತಟ್ಟೆಗೆ ಅರ್ಧ ಚೊಂಬಿನ ನೀರನ್ನು ನೀವಾಳಿಸಿ ದಬ್ಬಾಕಿದಾಗ ಮೇಲೆ ಒಂದು

ಕಬ್ಬಿಣದ ಪೀಸಿನಿಂದ ಅಡ್ಡದಿಡ್ಡಿ ಗೆರೆ ಕೊರೆದು ತಟ್ಟೆಯಲ್ಲಿರುವ ನೀರೆಲ್ಲಾ ಚೊಂಬಿನಲ್ಲಿ ಹೋಗುವಂತೆ ಮಾಡುತ್ತಾರೆ. ಹೀಗೆ ಮಾಡಿದಾಗ, ಒಂದು ವೇಳೆ ದೃಷ್ಟಿಯಾಗಿದ್ದರೆ ಖಂಡಿತವಾಗಿಯು ಅದು ಹೊರಟು ಹೋಗುತ್ತದೆಯಂತೆ.

೩. ಎದೆಯ ಹಾಲಿನ ದೃಷ್ಟಿ : ಎದೆಯ ಹಾಲನ್ನು ಕಪ್ಪೆ ಚಿಪ್ಪಿಗೆ ಹಾಕಿ ಬೆಂಕಿ ಮೇಲೆ ಇಟ್ಟು ಕಾಯಿಸುತ್ತಾರೆ. ಆಗ ಅದು ಕೆಂಪಗೆ ಆದರೆ ಮಗುವಿಗೆ ಸೂತಕ ತಗುಲಿದೆ ಎಂದು ನಿರ್ಧರಿಸುತ್ತಾರೆ. ಬೆಳಿಗ್ಗೆ ಸಾಯಂಕಾಲ ೩ ಬಾರಿ ಈ ರೀತಿ ಹಾಲು ಸುಟ್ಟು ಬಿಟ್ಟರೆ ಆದ ಸೂತಕ ಹೋಗಿ ಬಿಡುತ್ತದೆಯಂತೆ.

೪. ವೈರಿಗಳು ಅಥವಾ ದೆವ್ವಗಳು : ರಾತ್ರಿ ೨-೩ ಗಂಟೆಯ ಹೊತ್ತಿನಲ್ಲಿ ದೆವ್ವಗಳು ಓಡುತ್ತಿರುತ್ತವಂತೆ ಅಂಥಹ ಸಂದರ್ಭದಲ್ಲಿ ಮನೆಯ ಮುಂದೆ ಎಕ್ಕೆ ಗಿಡದ ಕೊನೆಯನ್ನು ಸೂರಿನಲ್ಲಿ ಸಿಗಿಸಿರುತ್ತಾರೆ. ಇದರಿಂದ ದೆವ್ವ ಬಿಟ್ಟು ಓಡಿ ಹೋಗುತ್ತದೆ ಎಂದು ನಂಬಿಕೆ, ಇತ್ತೀಚೆಗೆ ಮಂತ್ರಿಸಿದ ತೆಂಗಿನ ಕಾಯಿ, ಬರೆಸಿದ ತಾಮ್ರದ ತುಂಡು, ಮಣ್ಣಿನ ಕುಡಿಕೆಗಳನ್ನು ಮಂತ್ರ ತಂತ್ರ ಮಾಡಿಸಿ ಕಟ್ಟುತ್ತಾರೆ.

# ೬

# ಒಳಾಡಳಿತ ವ್ಯವಸ್ಥೆ

ಮಾನವ ಸಮಾಜವು ಸಾಮಾಜಿಕ ಸಂಬಂಧಗಳ ಬಲೆ. ವ್ಯಕ್ತಿಗಳ ನಡುವೆ ಪರಸ್ಪರ ಸಂಬಂಧ ಏರ್ಪಡುವ ಪ್ರಕ್ರಿಯೆಯು ವ್ಯವಸ್ಥೆಯೊಂದನ್ನು ಹೋಲುತ್ತಿದ್ದು ಅಂತಹ ವ್ಯವಸ್ಥೆಯನ್ನು 'ಸಾಮಾಜಿಕ ವ್ಯವಸ್ಥೆ' ಎಂದು ಕರೆಯಬಹುದಾಗಿದೆ. ಇದೊಂದು ಸಮಾಜದ ಘಟಕಗಳಾದ ಅಥವಾ ಭಾಗಗಳಾದ ಸಾಮಾಜಿಕ ಸಂಬಂಧಗಳ ಕ್ರಮಬದ್ಧ ವ್ಯವಸ್ಥೆಯಾಗಿದೆ. ಹಕ್ಕಿಪಿಕ್ಕಿ ಬುಡಕಟ್ಟುಗಳ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯು ಲೋಕರೂಢಿಗಳು, ಸಂಪ್ರದಾಯಗಳು, ಪರಸ್ಪರ ಸಹಕಾರ, ವಿವಿಧ ನಿಯಮಗಳು, ವರ್ಗಗಳು, ಉಡಿಗೆ-ತೊಡಿಗೆ, ಆಹಾರ, ವಸತಿ, ವೃತ್ತಿ, ಬೆಡಗುಗಳು, ವಿವಾಹ, ಕುಟುಂಬ, ನ್ಯಾಯ ಪದ್ಧತಿ ಹಾಗೂ ಸಾಮಾಜಿಕ ನಿಯಂತ್ರಣವನ್ನೊಳಗೊಂಡ ಕ್ರಮಬದ್ಧ ವಾದ ವ್ಯವಸ್ಥೆಯಾಗಿದೆ. ಈ ಸಾಮಾಜಿಕ ವ್ಯವಸ್ಥೆಯಲ್ಲಿ ಇತರ ಹಲವಾರು ಉಪ ವ್ಯವಸ್ಥೆಗಳಿದ್ದು, ಇವೆಲ್ಲವೂ ತನ್ನದೇ ಆದ ವಿಶಿಷ್ಟ ಕಾರ್ಯಗಳನ್ನು ನಿರ್ವಹಿಸುತ್ತವೆ. ಈ ಕಾರ್ಯ ನಿರ್ವಹಣೆಯಲ್ಲಿ ಕ್ರಮಬದ್ಧತೆ ಇರುತ್ತದೆ.

ಹಕ್ಕಿಪಿಕ್ಕಿ ಬುಡಕಟ್ಟಿನ ಕುಟುಂಬಗಳು ಮಾತೃಪ್ರಧಾನವು ಆಗಿರದೇ ಪಿತೃಪ್ರಧಾನವೂ ಆಗಿರದೇ ಇವು ಇಬ್ಬರಿಗೂ ಸಮನಾದ ಅಧಿಕಾರವನ್ನು ಹೊಂದಿರುವ ಕುಟುಂಬಗಳಾಗಿವೆ. ಈ ಬುಡಕಟ್ಟಿನಲ್ಲಿ ಗಂಡಿಗೆ ಯಾವ ರೀತಿಯ ಸ್ಥಾನಮಾನವಿದೆಯೋ ಹೆಚ್ಚು ಕಡಿಮೆ ಹೆಣ್ಣಿಗೂ ಅದೇ ರೀತಿಯ ಸ್ಥಾನವನ್ನು ಕೊಟ್ಟಿದ್ದಾರೆ. ಇವರಲ್ಲಿ ಮನೆಯ ಹೆಚ್ಚು ಕಡಿಮೆ ಜವಾಬ್ದಾರಿಯೆಲ್ಲಾ ಆಕೆಯ ಮೇಲೆಯೇ ಇರುತ್ತದೆ. ಗಂಡಸು ಕೇವಲ ಬೇಟೆ ಮತ್ತು ವ್ಯಾಪಾರ ಮಾಡುವದರಲ್ಲಷ್ಟೇ ಪ್ರಮುಖ ಪಾತ್ರವಹಿಸುತ್ತಾನೆ. ಇವರಲ್ಲಿ ತಾನು ದುಡಿದು ತಂದ ವರಮಾನವನ್ನೆಲ್ಲಾ ಹೆಂಡತಿಯ ಕೈಗೆ ಒಪ್ಪಿಸುತ್ತಾನೆ. ಮಕ್ಕಳು ಮತ್ತು ಸೊಸೆಯಂದಿರ ಮೇಲೆ ಮನೆಯ ಯಜಮಾನಕಿಯೇ ಹೆಚ್ಚು ನಿಯಂತ್ರಣವನ್ನು ಹೊಂದಿರುತ್ತಾಳೆ.

ಚಿಕ್ಕಮಕ್ಕಳ ಪೋಷಣೆ ಬಹುತೇಕವಾಗಿ ಮುದುಕರ ಜವಾಬ್ದಾರಿಯಾಗಿರುತ್ತದೆ. ಹುಟ್ಟಿದ ಮಗು ಸುಮಾರು ೧೨ ವರ್ಷಗಳ ವರೆಗೆ ಅಜ್ಜ ಅಜ್ಜಿಯವರ ನಿಯಂತ್ರಣದಲ್ಲಿರುತ್ತವೆ. ಸ್ವತಂತ್ರವಾಗಿ ವ್ಯಾಪಾರ ಇಲ್ಲ ಗುಡಿಕೈಗಾರಿಕೆಗಳಲ್ಲಿ ತೊಡಗಿಕೊಳ್ಳುತ್ತಾರೆ. ಗಂಡು ಆ ವಯಸ್ಸಿಗಾಗಲೆ ಮದುವೆಯ ವಿಷಯದಲ್ಲಿ ತನ್ನ ಕುಟುಂಬದವರ ನಿಯಂತ್ರಣದಲ್ಲಿರುತ್ತಾನೆ.

ಅಥವಾ ಸ್ವಂತ ನಿರ್ಧಾರದಲ್ಲಿರುತ್ತಾನೆ ಬಹುವಾಗಿ ಈ ಅಂಶ ಹೆಣ್ಣಿಗೂ ಅನ್ವಯಿಸುತ್ತದೆ. ಕೌಟುಂಬಿಕವಾಗಿ ಬಹುತೇಕ ಶಿಥಿಲತೆ ಇದೆಯೆಂದು ಹೊರನೋಟಕ್ಕೆ ಕಂಡುಬಂದರೂ ಇವರು ಹೆಚ್ಚು ನಿಯಂತ್ರಿತ ಸಂಕೀರ್ಣ ವ್ಯವಸ್ಥೆಯನ್ನು ಹೊಂದಿರುವುದನ್ನು ಕಾಣಬಹುದಾಗಿದೆ.

ಹೆಚ್ಚು ಕಡಿಮೆ ಪ್ರತಿಯೊಂದು ಜೋಡಿಯೂ ಪ್ರತ್ಯೇಕವಾಗಿ ಬದುಕಲು ಇಷ್ಟಪಡುತ್ತವೆ. ಹೀಗಿದ್ದೂ ಅನೇಕ ದಂಪತಿಗಳು ಕೂಡಿಯೇ ಬಾಳುತ್ತಿರುವುದು (Joint Family) ಕಂಡು ಬರುತ್ತದೆ. ಹೀಗಿದ್ದೂ ಆ ದಂಪತಿಗಳ ಮಕ್ಕಳನ್ನು ಅಲೆಮಾರಿ ಜೀವನದಲ್ಲಿ ಖಾಯಂ ಆಗಿ ನೆಲೆನಿಂತ ಮನೆಗಳಲ್ಲೇ ಮುದುಕರ ಆಶ್ರಯದಲ್ಲಿ ಬೆಳೆಯುತ್ತವೆ.

ಹಕ್ಕಿಪಿಕ್ಕಿಯವರಲ್ಲಿ ಅನಾಥತೆ ಅಥವಾ ಏಕಾಂತತೆ ಅಥವಾ ಒಂಟಿತನ ಎಂಬುದು ತುಂಬಾ ಕಡಿಮೆ. ಸುಮಾರು ೬೦ ವರ್ಷದ ಮುದುಕ ಮುದುಕಿಗೆ ಸಹ ಅದೇ ವಯಸ್ಸಿನ ವ್ಯಕ್ತಿಗಳನ್ನು ಸಮಾಜದವರೆಲ್ಲಾ ಕೂಡಿ ಜೊತೆ ಮಾಡುತ್ತಾರೆ. ಇವರಲ್ಲಿ ಯಾರು ಹೆಚ್ಚು ಕಾಲ ಏಕಾಂಗಿ ಯಾಗಿರುವುದಿಲ್ಲ. ಒಬ್ಬ ಗಂಡನಿಗೆ ಹೆಂಡತಿ ಬಿಟ್ಟರೆ ಅಥವಾ ಸತ್ತು ಹೋದರೆ ವಾರ, ತಿಂಗಳಲ್ಲಿ ಇನ್ನೊಂದು ಹೆಣ್ಣನ್ನು ಜೊತೆ ಮಾಡಿಬಿಡುತ್ತಾರೆ. ಹೆಣ್ಣಿಗೂ ಇದೆ ಸ್ಥಿತಿಯೇ ಇರುತ್ತದೆ. ಈ ಸಮುದಾಯದ ಒಟ್ಟು ಧೋರಣೆ ಗುಂಪು ಜೀವನವಾಗಿ ಕಂಡರೂ ಕೌಟುಂಬಿಕ ವ್ಯವಸ್ಥೆಯಲ್ಲಿ ಅಷ್ಟೇ ಪ್ರತ್ಯೇಕತೆಯನ್ನು ಕಾಣಬಹುದಾಗಿದೆ.

ವಯಸ್ಸಾದ ಹಿರಿಯರು ಮಕ್ಕಳನ್ನು ಸಾಕುವುದು ತಮ್ಮ ಆದ್ಯ ಕರ್ತವ್ಯವೆಂದು ತಿಳಿದಿರು ತ್ತಾರೆ. ತಮ್ಮ ಸ್ವಂತ ಮೊಮ್ಮಕ್ಕಳನ್ನು ಹೇಗೆ ನೋಡಿಕೊಳ್ಳುತ್ತಾರೊ ಹಾಗೆಯೇ ಬೇರೆಯವರ ಮಕ್ಕಳನ್ನು ನೋಡಿಕೊಳ್ಳುತ್ತಾರೆ. ಇವರಲ್ಲಿ ಮಕ್ಕಳ ಸಂಖ್ಯೆ ಸ್ವಲ್ಪ ಹೆಚ್ಚು ಇರುವುದರಿಂದ ಕೆಲವರ ಮನೆಗಳು ನೋಡಲು ಒಂದು ರೀತಿಯಲ್ಲಿ ಬಾಲವಾಡಿ ತರಹ ಕಾಣುತ್ತಿರುತ್ತವೆ. ವ್ಯಾಪಾರದ ಕಾರಣಕ್ಕೆ ಅಲೆಮಾರಿಗಳಾದ ತಂದೆ ತಾಯಿಗಳ ಮಕ್ಕಳು ಅನಾಥವಾಗಿಯೇ ಇರುತ್ತವೆ. ಆದರೆ ಬೇರೆಯವರ ಪ್ರೀತಿ ವಿಶ್ವಾಸದಿಂದಾಗಿ ಈ ಅನಾಥತೆ ಹೆಚ್ಚು ಕಾಡುವುದಿಲ್ಲ ವೆಂಬುದನ್ನು ಗಮನಿಸಬೇಕಾಗಿದೆ.

ಇತರೇ ಜಾತಿಯ ಅನಾಥ ಮಕ್ಕಳನ್ನು ತಮ್ಮ ಸ್ವಂತ ಮಕ್ಕಳಂತೆಯೇ ಸಾಕಿ ತಮ್ಮಲ್ಲೇ ಮದುವೆ ಮಾಡಿಕೊಂಡಿರುವ ಉದಾಹರಣೆಗಳು ಇರುವುದರಿಂದ ಮೂಲತಃ ಇವರು ಕಾಡು ಜನರಾದರೂ ನಿಜವಾದ ಅರ್ಥದಲ್ಲಿ ನಾಡ ಜನರೇ ಸರಿ.

ಹಕ್ಕಿಪಿಕ್ಕಿಗಳು ಮೇಲುಶಿಕಾರಿಗಳು ತಮ್ಮದೇ ಆದ ರೀತಿಯಲ್ಲಿ ಸಮಾಜ ರಚಿಸಿಕೊಂಡಿದ್ದಾರೆ. ಗುಂಪು ಅಥವಾ ನಾಲ್ಕೈದೋ, ಹತ್ತಾರೋ ಕುಟುಂಬಗಳಿರುವ ಅಲೆಮಾರಿ ತಂಡಕ್ಕೆ 'ಟಾಂಡು' ಅಥವಾ 'ಟೋಳ್' ಎನ್ನುತ್ತಾರೆ. ಒಂದೆಯೇ ನೆಲೆಸಿದ್ದರೆ ಅದನ್ನು 'ನಂಗರ್ ನಂಗ್ರಿ' ಎನ್ನುತ್ತಾರೆ. ಇಲ್ಲಿ ನಂಗರ್ ಎಂಬುದು ಸಂಸ್ಕೃತದ ನಗರ ಶಬ್ದದಿಂದ ಬಂದಿದುದಾಗಿದೆ. ವಿಶಾಲಾರ್ಥದಲ್ಲಿ ಬಳಕೆಯಾಗಿರುವ ನಗರ ಎಂಬ ಪದವನ್ನು ಹಕ್ಕಿಪಿಕ್ಕಿಯರು ತಮ್ಮ ಟೋಳ್‌ಕಿ(ತಾಂಡ)ಗೆ ಹೇಳುವುದನ್ನು ಕಂಡರೆ ಅವರಿಗೆ ತಮ್ಮ ತಾಂಡದ ಮೇಲಿರುವ ಹಿರಿಮೆ, ಹೆಮ್ಮೆಯನ್ನು ಎತ್ತಿ ತೋರಿಸುತ್ತದೆ. ಇದಕ್ಕೆ ಅವರ ಪ್ರಾಚೀನ ಬದುಕಿನ ಕಾಲದ ವಿಧಾನಗಳೂ ಕಾರಣವಾಗುತ್ತದೆ.

ಅಲೆಮಾರಿಗಳಾದ ಈ ಜನಾಂಗ ಊರ ಹೊರಗೆ, ಕಾಡಿಗೆ ಸಮೀಪ ಬಿಡಾರ ಹೂಡುವದರಿಂದ ತಮ್ಮ ರಕ್ಷಣೆಗೆ, ಆಯುಧಗಳನ್ನು, ನಾಯಿಗಳನ್ನು ಇಟ್ಟುಕೊಳ್ಳುತ್ತಿದ್ದರು. ಹಿಂದೆ ಅವರಿರುವ ತಾಂಡಾಕ್ಕೆ ಒಂದು ನಿರ್ದಿಷ್ಟ ಹೆಸರಿರುತ್ತಿರಲಿಲ್ಲ. ಪಕ್ಕದ ಊರಿನ ಹೆಸರಿನ ಜೊತೆಗೆ ಟಾಂಡ ಪದ ಸೇರಿಬಿಡುತ್ತಿತ್ತು. ಇತ್ತೀಚೆಗೆ ಅವರಿರುವ ತಾಂಡಾಗಳಿಗೆ ಹೆಸರಿಟ್ಟಿದ್ದಾರೆ. ಆದರೂ ಅವರು ಆಯಾ ಊರಿನ ಸಮೀಪದ ತಾಂಡದವರೆಂದೇ ಗುರ್ತಿಸಲ್ಪಡುತ್ತಾರೆ. ಉದಾಹರಣೆಗೆ ಹುಣಸೂರಿನವರು ನಲ್ಲೂರಿನ ಬಳಿಯಿರುವ ಅಸ್ತಾಪನಹಳ್ಳಿ ತಾಂಡಾದವರನ್ನು ನಲ್ಲೂರ್ ಝ್ಯಾಡಿ ಯವರೆಂದೂ ಹೇಳುವುದುಂಟು. ಅದೇ ನಲ್ಲೂರಿನವರು ಹುಣಸೂರಿನ ಬಳಿಯಿರುವ ಪಕ್ಷಿರಾಜಪುರದವರಿಗೆ ಹುಣಸೂರ್ ಝ್ಯಾಡಿ ಅಥವಾ ತಾಂಡಾದವರೆಂದೋ ಕರೆಯುವುದನ್ನು ಕಾಣಬಹುದು. ಹಕ್ಕಿಪಿಕ್ಕಿಯರು ಸದಾ ಊರಿನಿಂದ ಹೊರಗಡೆಯೇ ತಮ್ಮ ತಾಂಡಾವನ್ನು ಹಾಕಲು ಇಷ್ಟಪಡುತ್ತಾರೆ. ಊರ ಸಂಪರ್ಕದಿಂದ ದೂರವಿರುತ್ತಾರೆ. ತಮ್ಮದೇ ಆದ ಆಚಾರ ವಿಚಾರ ಉಡುಗೆ ಅಡುಗೆಗಳಿಂದಾಗಿ, ಅವರಾಡು ಭಾಷೆ ಬೇರೆಯವರಿಗೆ ಕೂಗಾಡುವಂತೆಯೇ ಜಗಳವಾಡುವಂತೆಯೇ, ಕೇಳಿಸುವದರಿಂದ ಊರವರು ಅಣಕಿಸುವರೆಂದೋ, ಅನ್ಯಭಾಷಿಸಿ ಓಡಿಸುವರೆಂದೋ ಇತರರ ಒಡನಾಟದಿಂದ ದೂರವಿರಲು ಬಯಸುತ್ತಾರೆ. ಒಳ್ಳೆಯ ದುಡಿಮೆಯಾಗಿ, ಕಷ್ಟಗಳು ಕಳೆದರೆ ದೇವಿಗೆ ಹರಕೆಯಾಗಿ ಚಾತ್‌ನವರು ಕುರಿ, ಕೋಳಿಯನ್ನು ಭೂಕ್ಯಾನವರು ದಹೆತ್ ಕೋಣವನ್ನು ಕೊಡುವುದರಿಂದ ಹಬ್ಬಗಳಲ್ಲಿ ಬಾಧೆ ತಂದು ದೇವಿಯ ಕೋಪಕ್ಕೆ ತಾವು ಬಲಿಯಾಗಿಯೇ ಕಷ್ಟಕಾರ್ಪಣ್ಯಗಳಿಗೆ ಗುರಿಯಾಗಿಯೋ, ಬೇಟೆಯೇ ಸಿಗದಂತಾಗಿಯೇ, ಹೆಂಡತಿ ಮಕ್ಕಳು ಉಪವಾಸವಿರುವದೆಂದೇ ಊರುಗಳಿಂದ ದೂರದಲ್ಲಿ ಬಿಡಾರ ಹೂಡುತ್ತಿದ್ದರು. ಊರುಗಳಿಂದ ದೂರ, ಕಾಡಿನ ಆಸು ಪಾಸುನಲ್ಲೇ ಬಿಡಾರ ಹೂಡುವ ಈ ಜನಾಂಗ, ಬೆಳಗ್ಗಿನ ಜಾವವೇ ಶಿಕಾರಿಗೆ ಹೋಗಲು ಸುಲಭವಾಗುತ್ತದೆಂದು ಅಲ್ಲಿ ಒಟ್ಟು ಗೂಡುತ್ತಿದ್ದರು. ಬಿಡಾರ ಹೂಡುವುದಾದರೂ ಹೇಗೇ? ಒಬ್ಬರ ಬಿಡಾರದ ಕಾಲ ಬಳಿ ಒಬ್ಬರು ಹೂಡುವಂತಿಲ್ಲ. ಅವರಿಗಿಂತ ನಾವೇನು ಕಮ್ಮಿ ಎಂಬ ಭಾವನೆ. ಹಕ್ಕಪಕ್ಕದಲ್ಲೇ ಬಿಡಾರ ಹೂಡುವಿಕೆ. ತಲೆಕೊಟ್ಟು ಮಲಗುವ ಭಾಗದಲ್ಲಿ ದೇವಿಯ ಮೂರ್ತಿಯಿಡುವ ತ್ರಾಂಗಡೂ ಪಿಟಾರಿ ಮತ್ತು ಉಪಯೋಗಿಸುವ ಸಾಮಾಗ್ರಿಗಳು ಕಾಲಭಾಗದಲ್ಲಿ ಒಲೆ ಬಿಡಾರದ ಗೋಡೆಯ ಭಾಗದಲ್ಲಿ ಪಾತ್ರೆಪಗಡಿಗಳು ಇಡಲ್ಪಟ್ಟಿದ್ದವು. ಹೆಂಗಸಾದವಳು ಉಡುತ್ತಿದ್ದ ಒಳಉಡುಪಾದ ಲಂಗವನ್ನು ಬಹಳ ದೂರ ಇಡಬೇಕಾಗುತ್ತಿತ್ತು. ಇದು ಗಂಡನಿಗೆ ತಾಗಬಾರದೆಂಬುದು ಕಡ್ಡಾಯ. ಜಗಳದಲ್ಲಿ ಹೆಂಗಸು ಹೊಡೆದರೆ ಅವನನ್ನು ಜಾತಿಯಿಂದ ಬಹಿಷ್ಕರಿಸುತ್ತಿದ್ದರು. "ಘಾ....ಲೋ" ಘಾಗ್ರಾನ ಮಾರ್ ಖಿಂವ್ ಘಾತೇಲೋ ಲಂಗದ ಹೊಡೆತ ತಿಂದು ಗಾಯಗೊಂಡವ ಘಾತ್ = ಗಾಯ, ಘಾತೇಲೋ = ಗಾಯಗೊಂಡ ಎನ್ನುತ್ತಾರೆ. ಅವನು ಮತ್ತೆ ಹಿರಿಯರೊಂದಿಗೆ ಕೂಡಬೇಕಾದರೆ ಪಂಚಾಯ್ತಿಯಲ್ಲಿ ವಿಧಿಸುವ ದಂಡವನ್ನು ತೆರಬೇಕಾಗುತ್ತದೆ. ಹಕ್ಕಿಪಿಕ್ಕಿಗರಲ್ಲದೆ ಇತರ ಅಲೆಮಾರಿ ಬುಡಕಟ್ಟು ಜನಾಂಗಗಳಾದ ಲಂಬಾಣಿಗರು. ವೇಷಗಾರರೂ ಕೂಡ ಊರಿ ನಿಂದಾಚೆಗೆ ಬಿಡಾರ ಹೂಡುತ್ತಿದ್ದುದನ್ನು ಕಾಣಬಹುದು. ಜೋಪಡಿ ಹಾಕಿಕೊಂಡರೆ ತಾವು

ಅಲ್ಲಿಯೇ ನೆಲೆಸಿಬಿಡುತ್ತೇವೆ ಎಂಬುದಾಗಿ ಹೇಳುತ್ತಾರೆ. ಹೆಚ್ಚಾಗಿ ಬಿಡಾರ ಗುಡ್ಡಗಳನ್ನೆಲ್ಲಾ ಅವಲಂಬಿಸುತ್ತಿದ್ದರು. ನಾಗರಿಕತೆಯ ಬಿರುಗಾಳಿ ಬೀಸಿದಂತೆಲ್ಲ ಬದಲಾಗುತ್ತಾ ಹೋದವುಗಳಲ್ಲಿ ಅನೇಕ ಬುಡಕಟ್ಟು ಕುಟುಂಬಗಳು ಬದಲಾವಣೆ ಕಂಡವು. ಆದರೆ ಹಕ್ಕಿಪಿಕ್ಕಿಗರ ಕುಟುಂಬಗಳಲ್ಲಿ ಬದಲಾವಣೆ ಕಾಣಬೇಕಾದರೆ ೨೦ನೇ ಶತಮಾನವೇ ಕಾಲಿಡಬೇಕಾಗಿತ್ತು. ಮೊದಲಿಗೆ ಗುಡ್ಡಾಗಿ ಬಿಡಾರ ಬಿದಿರಿನಿಂದ ತಯಾರಿಸಿದ ೧೦ ರಿಂದ ೧೨ ಮೊಳದುದ್ದದ ಚಾಪೆಯಂಥದರಿಂದ ಗೂಟನೆಟ್ಟು ಕಮಾನಿನಂತೆ ಹೊದೆಸುತ್ತಿದ್ದರು. ಇದಕ್ಕೆ ಟಾಟಾನು ಘರ್ ಎನ್ನುತ್ತಿದ್ದರು. ಆಪಿನ ಕಡ್ಡಿಯಿಂದ ಮುಂದೆ ಹಿಂದೆ ತಟ್ಟಿ ಕಟ್ಟಿ ರಾತ್ರಿಯ ಹೊತ್ತು ಮುಚ್ಚುತ್ತಿದ್ದರು. ನಂತರವಲ್ಲಿ ದಲ್ಲಾಳಿ ಡೇರೋ, ತಾಡಪಾಲುಗಳನ್ನು ಉಪಯೋಗಿಸುತ್ತಿದ್ದರು. ಒಂದೂರಿನಿಂದ ಇನ್ನೊಂದುರಿಗೆ ಹೋಗುವಾಗ ಎತ್ತು, ಆಕಳುಗಳ ಮೇಲೆಯೇ ಹೊತ್ತೊಯ್ಯಬೇಕಿತ್ತು. ಶಿಕಾರಿಯಲ್ಲೂ ತಮಗೆ ಸಹಾಯ ಮಾಡುವ ಗೋಮಾತೆಯನ್ನು ಎರಡು ಕಡೆ ದುಡಿಸಿಕೊಳ್ಳುವುದು ಕೆಲವರಿಗೆ ಸರಿದೋರಲಿಲ್ಲವಾದರಿಂದ ಇತ್ತೀಚಿನವರು ಪ್ಲಾಸ್ಟಿಕ್ ಚೀಲಗಳಿಂದ ರೋಂದ ಡೇರೆಯನ್ನು ಉಪಯೋಗಿಸುತ್ತಾರೆ. ಇದು ಹಗುರಾದ್ದರಿಂದ ಹೊತ್ತೊಯ್ಯಲು ಸುಲಭವಾಗುತ್ತದೆ. ಅಡುಗೆ ಮಾಡಲು ಎರಡು ದೊಡ್ಡದಾದ ಮಡಕೆ ಈಗ ಪಾತ್ರೆಗಳು ಗಳು, ತೆಂಗಿನ ಚಿಪ್ಪಿನಿಂದಾದ ಸೌಟು ಊಟಮಾಡಲು ಮಣ್ಣಿನ ಕುಂಡಿಗಳು, ತಟ್ಟೆ ಕಿರಿದಾದ ಗುಡಿಸಲು ಟಾಮ್ ಹದ್ದಿನ ರೆಕ್ಕೆಯ ಪುಕ್ಕದ ಕಟ್ಟು ಉಡಲು ಮಿತವಾದ ಬಟ್ಟೆಗಳು ಇವಿಷ್ಟೇ ಅವರ ಬಿಡಾರದಲ್ಲಿರುತ್ತಿದ್ದ ಸಾಮಾನುಗಳು. ಇನ್ನು ಧವಸಧಾನ್ಯಗಳನ್ನು ಸಂಗ್ರಹಿಸಿಡುವ ಗೋಜಿನವರಲ್ಲ. ಅಂದು ಬೇಟೆಯಿಂದ ತಂದದ್ದನ್ನೆಲ್ಲಾ ತಮ್ಮ ಜೀವನ ಸಾಗಿಸುತ್ತಿದ್ದರು. ಬೇಟೆ ಸಿಗದಿದ್ದ ಪಕ್ಷದಲ್ಲಿ ಹೆಂಗಸು ಭಿಕ್ಷೆಬೇಡಿಯೋ, ಕಸ್ತೂರಿ, ಗೋರೋಜನ, ಗಿಡಮೂಲಿಕೆಗಳನ್ನು ಮಾರಿಯೇ ಧವಸ ಧಾನ್ಯಗಳನ್ನು ತರುತ್ತಿದ್ದಳು.

ಹೀಗಾಗಿ ಗಂಡ ಹೆಂಡಿರಲ್ಲಿ ಸಂಸಾರದೂಗುವ ಕಲಿಕೆ ಸಾಮರಸ್ಯದಿಂದ ನಡೆದು ಅವರುಗಳು ತಮ್ಮ ತಾಂಡದಲ್ಲಿ ಶಿಸ್ತುಗಳನ್ನು ಕಾಪಾಡುವಲ್ಲಿ ನಿಸ್ಸೀಮರೆನ್ನಬಹುದು. ತಪ್ಪುಮಾಡುವುದು, ಸುಳ್ಳು ಹೇಳುವುದು, ಮೋಸ ವಂಚನೆ ಮಾಡದ ವಿಶಾಲ ಹೃದಯವಂತಿಕೆಯಿರುವ ಈ ಸಮುದಾಯ ತಮ್ಮ ಸಮಾಜವನ್ನು ಒಂದು ವ್ಯವಸ್ಥಿತವಾಗಿ ನಡೆಸಿಕೊಂಡು ಬಂದಿದ್ದಾರೆ.

ಸಮುದಾಯದಲ್ಲಿ ತಲೆದೋರುವ ಸಮಸ್ಯೆಗಳಿಗೆ ನ್ಯಾವ್(ಪಂಚಾತ್) ಮಾಡಿ ಬಗೆಹರಿಸಿಕೊಳ್ಳುತ್ತಾರೆ. ಇದರಲ್ಲಿ ನ್ಯಾವ್ರೋ, ಘಟಗೀರ್ ರೈಟಿರ್ ಎಂಬುವರೇ ಪ್ರಮುಖರು. ನ್ಯಾವ್ರೋ ಸಂಪ್ರದಾಯದಲ್ಲಿ ಹಿರಿಯನಾಗಿದ್ದು ಮಾತುಗಾರಿಕೆಯಲ್ಲಿ ತಲೆಮಾರು ಹೇಳುವಲ್ಲಿ ಬೇಟೆಯಲ್ಲಿ ಆತನ ಯೌವನದಿಂದ ಹೆಚ್ಚು ಬೇಟೆ ತರುವಲ್ಲಿ ಉತ್ತಮ ಚತುರತೆ ಹೊಂದಿದವನಾಗಿರುತ್ತಿದ್ದ. ಅವರಿವರೆಂದೆನಲ್ಲಾ ಎಷ್ಟು ಜನಬೇಕಾದರೂ ಇರಬಹುದು. ಬೆಳಗ್ಗಿನ ಜಾವವೇ ಒಂದು ನಿರ್ದಿಷ್ಟ ಜಾಗದಲ್ಲಿ ಸುತ್ತಲೂ ಕುಳಿತು ತೀರ್ಮಾನಿಸುತ್ತಾರೆ. ಒಬ್ಬರಿಗೊಬ್ಬರಿಗೆ ತೀರ್ಮಾನ ಸರಿಬರದಿದ್ದರು ಅದೊಂದು ಹಂತ ತಲುಪುವವರೆಗೂ ಪರಿಹಾರ ಕಂಡುಕೊಂಡ ನಂತರವೇ ಏಳುತ್ತಾರೆ. ಇದು ಎರಡರಿಂದ ಮೂರು ದಿನವೂ ಆಗಬಹುದು. ಖರ್ಚುಗಳನ್ನು

ತಪ್ಪು ಮಾಡುವವ, ಮಾಡದಿರುವವ ಇಬ್ಬರೂ ಭರಿಸಬೇಕಾಗುತ್ತದೆ. ಕುಡಿಸುವುದು, ಹೋಟೆಲ್‌ನಲ್ಲಿ ತಿಂಡಿ ತಿನಿಸುವ ಖರ್ಚು. ಘಟಗೀರ್ ಅಥವಾ ರೈಟರ್ ಈತನ ಕೆಲಸ ಪಂಚಾಯ್ತಿಯಲ್ಲಿ ಹಿರಿಯರನ್ನು ಸೇರಿಸುವುದು, ಜಗಳವಾಗದಂತೆ ನೋಡಿಕೊಳ್ಳಲು ಕೈಯಲ್ಲಿ ಬಾರುಕೋಲನ್ನು ಝಳಪಿಸುತ್ತಾ ಪಂಚಾಯ್ತಿಯ ಸುತ್ತ ತಿರುಗುತ್ತಾರೆ. ಹೆಂಗಸರಿಗೆ ಪ್ರವೇಶವಿಲ್ಲ. ದೂರದಲ್ಲಿ ಕುಳಿತು ತೀರ್ಮಾನ ನೋಡಬೇಕಾಗುತ್ತದೆ. ಆಕಸ್ಮಾತ್ ಬಾಯಿಹಾಕಿ ಮಾತಾಡಿದಾಗ, ಹೆಂಗಸರಿಂದ ಜಗಳವುಂಟಾದರೆ ಪಕ್ಷಪಾತವಿಲ್ಲದಂತೆ, ಕಣ್ಣಿಗೆ ಬಟ್ಟೆ ಕಟ್ಟಿಸಿಕೊಂಡು ಉಳಿದ ನಾಲ್ಕರು ರೈಟರ್ ಸಹಾಯದಿಂದ ಬಾರುಕೋಲನ್ನು ಬೀಸುತ್ತ ಪಂಚಾಯ್ತಿ ಸುತ್ತ ತಿರುಗಾಡುತ್ತಾನೆ. ಪೂಜಾರಿ ಹಕ್ಕಿಪಿಕ್ಕಿಗರು ಎಲ್ಲರೂ ತಲೆಯಕೂದಲನ್ನು ಕತ್ತರಿಸಿಕೊಳ್ಳಲು ಹಿಂಜರಿಯುತ್ತಾರೆತ್ತಾರೆ. ಅಂಥವನನ್ನು ಮಥ್ಯಾಮುಂಡವ್ ತಲೆ ಬೋಳಿಸಿಕೊಂಡವ ಎಂದು ವ್ಯಂಗ್ಯವಾಗಿ ಕರೆಯುತ್ತಾರೆ. ಹಬ್ಬದಲ್ಲಿ ದೇವಿ ಆತನ ಮೈಮೇಲೆ ಬರುವುದಿಲ್ಲವಾದರಿಂದ ಖಾಂದಾನಿನ ಕುಲದೇವಿಯ ತ್ರಾಂಗಡೂವನ್ನು ಆತ ಹಿರಿಮಗನಾದರೂ ಕೊಡಲು ಬರುವುದಿಲ್ಲ. ಪಂಚಾಯ್ತಿಯಲ್ಲೂ ಆತನಿಗೆ ಬೆಲೆಯಿರುವುದಿಲ್ಲ. ಪೂಜಾರಿಯ ಹೆಂಡತಿಯೂ ಪತಿವ್ರತೆಯಾಗಿರಬೇಕಾಗುತ್ತದೆ. ಇಲ್ಲದಿದ್ದರೆ ಆತನ ಶಿರಾಣೆ ತಲೆಗೆ ದೇವಿ ಕೊಡಲಾಗುವುದಿಲ್ಲ.

ನಿರ್ಬಂಧಿಸುವ ರೂಢಿಗಳು ಆದಿವಾಸಿ ಕುಟುಂಬಗಳಲ್ಲಿ ಪ್ರತಿಯೊಬ್ಬ ವ್ಯಕ್ತಿಯೊಬ್ಬ ವ್ಯಕ್ತಿಗೂ ನಿರ್ದಿಷ್ಟವಾದ ಸ್ಥಾನಮಾನಗಳಿರುತ್ತವೆ. ಕರ್ತವ್ಯಗಳಿರುತ್ತವೆ. ವಿಧಿನಿಷೇಧಗಳಿರುತ್ತವೆ. ಹಾಗೇ ಹಕ್ಕಿಪಿಕ್ಕಿಯರಲ್ಲಿ ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯೊಡನೆ ಹೇಗೆ ವರ್ತಿಸಬೇಕು ಅಥವಾ ವರ್ತಿಸಬಾರದು ಎಂಬ ಬಗ್ಗೆ ಕೆಲವು ಕಟ್ಟುಪಾಡುಗಳು ಆಯಾ ಪಂಗಡದ ಅಥವಾ ಒಳಪಂಗಡದಲ್ಲಿ ಈಗಲೂ ಆಚರಣೆಯಲ್ಲಿವೆ.

ನಿರ್ಬಂಧಗಳು

೧. ಹಿಂದಿನ ಕಾಲದಲ್ಲಿ ಹಕ್ಕಿಪಿಕ್ಕಿಯರು ಮಾದಿಗರು ಮತ್ತು ಮುಸ್ಲಿಂರ ಮನೆಗಳಲ್ಲಿ ನೀರು ಕುಡಿಯುತ್ತಿದ್ದಿಲ್ಲ. ಹಾಗೇನಾದರೂ ಯಾರಾದರೂ ಕುಡಿದರೆ ಅಂಥವರಿಗೆ ೨೦ ರೂಪಾಯಿಗಳಿಂದ ೧೧೧ ರೂ.ಗಳವರೆಗೆ ದಂಡ ವಿಧಿಸುತ್ತಿದ್ದರು. ಯಾಕೆಂದರೆ, ನಾವು ಕ್ಷತ್ರಿಯವಂಶದವರಾಗಿದ್ದು ಅವರುಗಳು ಶೂದ್ರರಾಗಿದ್ದಾರೆ ಎಂದು ಇವರ ವಾದ.

ಆದರೆ ಬದಲಾಗುತ್ತಿರುವ ಇಂದಿನ ದಿನಗಳಲ್ಲಿ ಈ ನಿರ್ಬಂಧನೆಗಳಲ್ಲಿ ಸಡಿಲತೆ ಕಂಡು ಬರುತ್ತಿದ್ದು. ಇಂದು ಎಲ್ಲರೂ ಎಲ್ಲರ ಮನೆಗಳಲ್ಲಿ ನೀರನ್ನು ಕುಡಿಯುತ್ತಿದ್ದಾರೆ.

೨. ಇಬ್ಬರು ಸೇರಿ ಬೇಟೆಗೆ ಹೋದಾಗ, ಏನಾದರೂ ಮಾರುವ ಸಾಮಾನುಗಳಿದ್ದರೆ ಅವುಗಳಲ್ಲಿ ಪಾಲು ಮಾಡಿಕೊಳ್ಳುವ ಪದ್ಧತಿ ಇರುತ್ತದೆ. ಅದು ಅವರಿಬ್ಬರಿಗೂ ಪ್ರತ್ಯೇಕವಾಗಿ ಸೇರಿದ್ದುದ್ದಾಗಿಲ್ಲ. ಇದಕ್ಕೆ "ವಾಟೋಪಾಡಾನು" ಎನ್ನುತ್ತಾರೆ. ವಲಸೆಗೆ ಹೋದ ತಾಂಡಾಗಳಲ್ಲಿ, ಒಬ್ಬ ಅಥವಾ ಇಬ್ಬರಿಗೆ ಬೇಟೆ ಸಿಕ್ಕರೆ ಮಾರಿದಂಥ ಹಣದಲ್ಲಿ ಅರ್ಧದಷ್ಟು ಬೇಟೆಯಾಡುವವನಿಗೂ ಉಳಿದರ್ಧದಲ್ಲಿ ಬೇಟೆಗೆ ಹೋಗದೇ ಇದ್ದರೂ ಸರಿ ಅವರಿಗೆ ಸಿಗಬೇಕಾದ ಪಾಲನ್ನು ಕೊಡಬೇಕು. ಯಾರಿಗೆ ಪಾಲು ಸಿಕ್ಕರುವದಿಲ್ಲವೋ ಅಂಥವನು

ಪಂಚಾಯಿತಿಯನ್ನು ಕೂರಿಸಿ ದಂಡವನ್ನು ಹಾಕಿಸುತ್ತಾನೆ. ಇದನ್ನು 'ಭಾಗ್‌ಪಾಡಾನು'(ಭಾಗ ಕೊಡುವುದು, ಹಂಚುವುದು) ಎಂತಲೂ ಕರೆಯುತ್ತಾರೆ.

೩. ತಮ್ಮ ಸಮಾಜದಲ್ಲಿ ಯಾರಾದರೂ ತಪ್ಪು ಮಾಡಿದರೆ, ಅಂಥವರನ್ನು ಪತ್ತೆ ಹಚ್ಚಲು ಅಥವಾ ಶಿಕ್ಷಿಸುವ ನಿಟ್ಟಿನಲ್ಲಿ ಕೊಡಲಿಯನ್ನು ಕೆಂಪಗೆ ಕಾಯಿಸಿ ಅಪರಾಧಿ ಎನ್ನುವವರ ಅಂಗೈಯ ಮೇಲೆ ಒಂದು ಎಳೆದಲೆ ಇಟ್ಟು ಅದರ ಮೇಲೆ ಕೊಡಲಿ ಇಡುತ್ತಾರೆ. ಆ ವ್ಯಕ್ತಿ ತಪ್ಪು ಮಾಡಿದಿದ್ದರೆ ಕೈ ಸುಡುವುದಿಲ್ಲ, ಒಂದು ವೇಳೆ ಅವನು ತಪ್ಪು ಮಾಡಿದರೆ ಕೂಡಲೇ ಕೈ ಸುಟ್ಟು ಬಿಡುತ್ತದೆ. ಇದು ಅಲ್ಲದೆ. ಒಲೆಯ ಮೇಲೆ ಕಡಾಯಿ ಒಂದನ್ನು ಇಟ್ಟು ಅದರಲ್ಲಿ ಎಣ್ಣೆಯನ್ನು ಹಾಕಿ ಚೆನ್ನಾಗಿ ಕಾಯಿಸುತ್ತಾರೆ. ಇಲ್ಲಿಯು ಸಹ ಅವರ ತಪ್ಪನ್ನು ಪರೀಕ್ಷಿಸುವ ನಿಟ್ಟಿನಲ್ಲಿ ಆ ಎಣ್ಣೆಯಲ್ಲಿ ತಪ್ಪಿತಸ್ಥನನ್ನು ಕೈ ಹಾಕಲು ಹೇಳುತ್ತಾರೆ. ಆತ/ಆಕೆ ತಪ್ಪು ಮಾಡದಿದ್ದಲಿ ಅವರ ಕೈ ಸುಡುವುದಿಲ್ಲ. ಒಂದು ವೇಳೆ ತಪ್ಪು ಮಾಡಿದರೆ. ಅವರ ಕೈ ಕೂಡಲೇ ಸುಟ್ಟು ಹೋಗಿ ಬಿಡುತ್ತದೆ ಎಂದು ಇವರು ಬಲವಾಗಿ ನಂಬಿರುತ್ತಾರೆ.

೪. ಅಷ್ಟೇ ಏಕೆ ಯಾರಾದರೂ ಬೇರೆಯವರು ಆರೋಪಿಸಿದರೆ, ನ್ಯಾಯ ಮಾಡುವಾಗ ನೋಡಿದವರು ಕೂಡಾ ಅದನ್ನು ಸಾಬೀತುಪಡಿಸಬೇಕು. ಅಪರಾಧ ಮಾಡಿದವರೂ ಪರೀಕ್ಷೆಗೆ ಒಳಗಾಗಬೇಕು.

೫. ಬೇಟೆಗೆ ಹೋದಾಗ ಒಬ್ಬ ಬೇಟೆಯಾಡುತ್ತಿದ್ದಾಗ, ಇನ್ನೊಬ್ಬ ಅವನಿಗೆ ಅಡ್ಡ ಬಂದು ಒಬ್ಬನಿಗಾಗುತ್ತಿದ್ದ ಬೇಟೆಯನ್ನು ತಾನು ಮಾಡಿದರೆ, ಆ ಬೇಟೆ ಇಬ್ಬರಿಗೂ ಸಮಪಾಲು ಮಾಡಿಕೊಳ್ಳುತ್ತಾರೆ. ಇದನ್ನು ಸಂಯೋಜಿತ ಬೇಟೆಯಾಗುತ್ತದೆ.

೬. ಇವರಲ್ಲಿ ಮಾಡಿದ ತಪ್ಪುಗಳನ್ನು ಕಂಡು ಹಿಡಿಯಲು ಇನ್ನೂ ಅನೇಕ ತಂತ್ರಗಳನ್ನು ಬಳಸುತ್ತಾರೆ. ಉದಾಹರಣೆಗೆ ಕುಲಪಂಚಾಯಿತಿ ಎದುರು ಪಾತ್ರೆಯೊಂದರಲ್ಲಿ ಸಗಣಿ ನೀರನ್ನು ಚೆನ್ನಾಗಿ ಕಾಯಿಸಿ ಅದರಲ್ಲಿ ಉಂಗುರ ಅಥವಾ ದುಡ್ಡು ಹಾಕಿ ಕುಲಚಾರರು ಅದನ್ನು ತೆಗೆಯುವಂತೆ ಅಪರಾಧಿ ಅಥವಾ ತಪ್ಪಿತಸ್ಥ ಎನಿಸಿಕೊಂಡವನ್ನು ಹೇಳುತ್ತಾರೆ. ಆಗ ಅದನ್ನು ತೆಗೆಯುವಾಗ ಅವರು ತಪ್ಪಿತಸ್ಥರಲ್ಲದಿದ್ದರೆ ಚರ್ಮ ಸುಡುವುದಿಲ್ಲ. ಒಂದು ವೇಳೆ ತಪ್ಪು ಮಾಡಿದ್ದರೆ ಅವರ ಚರ್ಮಸುಡುತ್ತದೆಂದು ನಂಬುತ್ತಾರೆ.

೭. ಹೆಂಗಸರು ಭಿಕ್ಷೆ ಅಥವಾ ವ್ಯಾಪಾರಕ್ಕೆಂದು ಹೊರ ಹೋದಾಗ ತಮ್ಮ ಗುಡ್ಲು ಅಥವಾ ಟೆಂಟನ್ನು ಬಿಟ್ಟು ರಾತ್ರಿ ಹೊತ್ತು ಬೇರೆಲ್ಲೂ ಉಳಿದುಕೊಳ್ಳುವಂತಿಲ್ಲ. ಹಾಗೇನಾದರೂ ಇದ್ದರೆ ಅದನ್ನು ಮೈಲಿಗೆ ಎಂದು ಭಾವಿಸುತ್ತಾರೆ. ಗಂಡಾಗಲಿ ಅಥವಾ ಹೆಣ್ಣಾಗಲಿ ಹೊರಗೆ ಉಳಿದುಕೊಂಡರೆಂದರೆ ಅವರು ಯಾರದೋ ಜೊತೆಗೆ ಅಕ್ರಮ ಸಂಬಂಧ ಇಟ್ಟುಕೊಂಡಿದ್ದಾರೆಂದೇ ಭಾವಿಸುತ್ತಾರೆ. ಹೊರಗೆ ಕಟ್ಟು ನಿಟ್ಟಾಗಿಲ್ಲದಿದ್ದರೆ ಹೆದರಿಕೆಯಿಂದಾಗಿ ಅಂಥವರಿಗೆ ಕಾಯಿಲೆ ಬರುತ್ತದೆಯಂತೆ ಜೊತೆಗೆ ಇಡೀ ಸಮಾಜವೇ ಒತ್ತಾಯ ಮಾಡುತ್ತದೆ. ಆಗ ತಪ್ಪನ್ನು ಮಾಡದಿದ್ದರೂ ಒತ್ತಾಯದಿಂದ ಅದನ್ನು ಒಪ್ಪಿಕೊಳ್ಳಲಾಗುತ್ತದೆ. ಇಲ್ಲವೇ ಅದನ್ನು ಪ್ರಮಾಣ ಮಾಡಿಸುತ್ತಾರೆ. ಈ ಎಲ್ಲಾ ಪರೀಕ್ಷೆಗಳಿಗಾಗಿ ಅನೇಕ ರೀತಿಯ ಕ್ರೂರವಾದ

ಪರೀಕ್ಷೆಗಳಿಗೆ ಒಳಪಡಿಸುತ್ತಾರೆ. ಅಂಥಹ ಕ್ರೂರ ಪರೀಕ್ಷೆಗಳನ್ನು ಈಗಾಗಲೇ ಮೇಲೆ ಎರಡು ಮೂರು ಉದಾಹರಣೆಗಳನ್ನು ನೀಡಲಾಗಿದೆ.

೮. ಉಟ್ಟು ಬಿಟ್ಟ ಲಂಗವನ್ನು ಗಂಡಸರಿಗೆ ತಾಗುವಂತೆ ಇಟ್ಟರೆ ಅಂಥಹ ಹೆಂಗಸರಿಗೆ ೧೦೧ ರೂ.ವರೆಗೆ ದಂಡ ಹಾಕುತ್ತಾರೆ. ಇನ್ನೂ ಋತುಮತಿಯಾಗದ ಹುಡುಗಿಯಾಗಿದ್ದರೆ ಅವಳಿಗೆ ರಿಯಾಯ್ತಿ ಇದೆ. ಈ ರೀತಿ ಅವರು ಯಾಕೆ ಮಾಡುತ್ತಾರೆಂದರೆ ಮಡಿ ಮೈಲಿಗೆಗಳ ಬಗ್ಗೆ ಅವರು ತುಂಬಾ ಕಟ್ಟು ನಿಟ್ಟಿನವರಾಗಿದ್ದಾರೆ.

೯. ಪ್ರತಿ ತಿಂಗಳು ಋತುಸ್ರಾವವಾದಾಗ ಅಂಥಹ ಹೆಂಗಸು ಈಗಲೂ ಹೊರಗಡೆಯೇ ಕೂಡಬೇಕಾಗುತ್ತದೆ. ಅವಳು ಯಾವುದೇ ಕಾರಣಕ್ಕೂ ಅಡಿಗೆ ಮಾಡುವ ಹಾಗಿಲ್ಲ. ಹಾಗೆಯೇ ಇತರೇ ಕೆಲಸಕಾರ್ಯಗಳು ಮಾಡುವಂತಿಲ್ಲ. ಈ ಮೂರು ದಿನಗಳಲ್ಲಿ ಪುರುಷರೇ ಎಲ್ಲ ಕೆಲಸಕಾರ್ಯಗಳನ್ನು ಮಾಡಬೇಕಾಗುತ್ತದೆ. ಇದು ಕಟ್ಟುನಿಟ್ಟಾಗಿದೆ.

೧೦. ಗಂಡ ಹೆಂಡತಿಯ ಜಗಳದಲ್ಲಿ ಗಂಡ ಹೆಂಡತಿಗೆ ಹೊಡೆದನೆಂದರೆ, ಹೆಂಡತಿ ಯಾದವಳು ಯಾವುದೇ ಸಂದರ್ಭದಲ್ಲಿ ಗಂಡನಿಗೆ ತಿರುಗಿ ಹೊಡೆಯುವ ಆಗಿಲ್ಲ, ಒಂದು ವೇಳೆ ಆಗೇನಾದರು ಅವಳು ಹೊಡೆದರೆ ೧೦೧ ರೂ. ವರಗೆ ದಂಡವನ್ನು ಹಾಕುತ್ತಾರೆ. ದಂಡವನ್ನು ಕಟ್ಟಲು ಆಗದಿದ್ದರೆ ಅಥವಾ ನಿರಾಕರಿಸಿದರೆ ಅಂಥವಳನ್ನು ಜಾತಿಯಿಂದ ಹೊರಗೆ ಹಾಕಿ ಅವಳು ಆ ದಂಡವನ್ನು ಕಟ್ಟಿದ ನಂತರವೇ ಅವಳನ್ನು ಜಾತಿಯ ಒಳಗೆ ಸೇರಿಸಿಕೊಳ್ಳುತ್ತಾರೆ.

೧೧. ಒಬ್ಬ ಗಂಡಸು ಅಪ್ಪಿತಪ್ಪಿ ತನ್ನ ತಂಗಿ ಅಥವಾ ಅಕ್ಕ, ಚಿಕ್ಕಮ್ಮ, ದೊಡ್ಡಮ್ಮ, ಅತ್ತೆ, ಅತ್ತಿಗೆ ಇಂಥವರೊಂದಿಗೆ ಲೈಂಗಿಕ ಸಂಬಂಧವನ್ನಿಟ್ಟುಕೊಂಡರೆ ಅವರನ್ನು ತೀವ್ರವಾದ ದಂಡನೆಗೆ ಒಳಪಡಿಸುತ್ತಾರೆ. ಏಕೆಂದರೆ ಈ ತರಹದ ಸಂಬಂಧಗಳಿಗೆ ಇವರಲ್ಲಿ ತುಂಬಾ ಕಟ್ಟುನಿಟ್ಟಿನ ನಿಷೇಧವಿದೆ. ಇಂತವರಿಗೆ ವಿಧಿಸುವ ದಂಡದ ಹಣ ಕೂಡ ಬೇರೆ ಬೇರೆ ಯಾಗಿರುತ್ತದೆ.

| | | |
|---|---|---|
| ಅಕ್ಕ/ತಂಗಿಯವರೊಂದಿ(ಬೆಹನ್ ಚೋದ್)ಗೆ | ರೂ. | ೬೦೦ ರಿಂದ ೮೦೦ |
| ಅತ್ತಿಗೆಯೊಂದಿಗೆ | ರೂ. | ೩೦೦ ರಿಂದ ೪೦೦ |
| ಚಿಕ್ಕಮ್ಮ/ದೊಡ್ಡಮ್ಮಳೊಂದಿಗೆ | ರೂ. | ೬೦೦ ರಿಂದ ೭೦೦ |
| ಹೆಣ್ಣು ಕೊಟ್ಟ ಅತ್ತೆಯೊಂದಿಗೆ | ರೂ. | ೧೦೦೦ ವರಗೆ |

ಹೀಗೆ ಪುರುಷರಿಗೆ ದಂಡ ವಿಧಿಸಿದರೆ, ಈ ಅವ್ಯವಹಾರದಲ್ಲಿ ಸಿಕ್ಕಿಬಿದ್ದ ಹೆಂಗಸಿಗೆ ಹತ್ತು ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಹಬ್ಬ ಬಂದಾಗ ದೇವರ ಮುಂದೆ ಕೂರಿಸಿ ತಲೆಗೆ ಸಗಣಿಯನ್ನು ಬಳಿದು ಶುದ್ಧಿಮಾಡಿ, ಸಾವಿರಾರು ರೂಪಾಯಿಗಳನ್ನು ಖರ್ಚುಮಾಡಿ ಇಡೀ ಕುಲದವರೆಲ್ಲಾ ಸೇರಿ ಕುಡಿದು ತಿಂದು ಆ ಹೆಣ್ಣನ್ನು ಕುಲಕ್ಕೆ ಸೇರಿಸಿಕೊಳ್ಳುತ್ತಾರೆ.

೧೨. ಇವರಲ್ಲಿ ಚಪ್ಪಲಿಯಿಂದ ಹೊಡೆದವನಿಗೂ ಹಾಗೂ ಹೊಡೆಸಿಕೊಂಡವನಿಗೆ ಇಬ್ಬರಿಗೂ ದಂಡವನ್ನು ಹಾಕುತ್ತಾರೆ. ತಪ್ಪಿಲ್ಲದೇ ಹೊಡೆಸಿಕೊಂಡವನಿಗೆ ರೂ. ೧೦ಂಗಳ

ದಂಡ ವಿಧಿಸಿದರೆ, ಚಪ್ಪಲಿಯಿಂದ ಹೊಡೆದವನಿಗೆ ರೂ. ೫, ೧೦ ರೂ. ದಂಡವನ್ನು ವಿಧಿಸುತ್ತಾರೆ. ಇಂಥಹ ಸಂದರ್ಭದಲ್ಲಿ ಕೇವಲ ದಂಡವನ್ನು ಹಾಕಿ ಕೈ ತೊಳೆದುಕೊಳ್ಳುತ್ತಾರೆಯೇ ಹೊರತು ಕುಡಿ ತಿನ್ನುವ ಯಾವ ಕಾರ್ಯಕ್ರಮಗಳನ್ನು ಇಟ್ಟುಕೊಳ್ಳುವುದಿಲ್ಲ.

೧೩. ಹೆಂಗಸು ಗಂಡಸಿಗೆ ಕಾಲಿನಿಂದ ಒದ್ದರೆ, ಅಂತಹ ಹೆಣ್ಣಿಗೆ ೫೦೦ ರೂ.ಗಳವರೆಗೆ ದಂಡ ಹಾಕುತ್ತಾರೆ. ಆ ಹಣದಿಂದ ಕುಲಸ್ಥರೆಲ್ಲಾ ಸೇರಿ ಕುಡಿದು, ತಿಂದು ಕುಪ್ಪಳಿಸುತ್ತಾರೆ. ಆಗ ಅವರ ತಪ್ಪು ಮುಗಿಯುತ್ತದೆ. ಹೆಂಗಸಿನ ಕಾಲಿನಿಂದ ಒದೆಸಿಕೊಂಡವನಿಗೆ ಅವರ ಭಾಷೆಯಲ್ಲಿ "ಲಾತ್‌ನಾ ಮಾರ್‌ಖಿವ್ ಫೆತೆಲೊ'' ಎಂದು ಕರೆಯುತ್ತಾರೆ.

೧೪. ಹೆಂಡತಿಯ ಬಾಣಾಂತಿತನ ಮುಗಿಯುವ ಮೊದಲೆ ಸುಮಾರು ಮೂರು ತಿಂಗಳಿನ ಒಳಗಾಗಿ ಆಕೆಯೊಂದಿಗೆ ಸಂಭೋಗಕ್ಕೆ ತೊಡಗಿದ ಗಂಡಸನ್ನು "ಮೊಹೊವ್ ವಾಲೊವ್'' 'ದಚ್ಚನ ಲೊಹಿಮ ಕಲವ್' ಎಂದು ಕರೆಯುತ್ತಾರೆ. ಇದರ ಅರ್ಥ ಹೆಂಡತಿಯ "ರಕ್ತ ದೊಳಗೆ ಕಲಸಿಬಿಟ್ಟೆ" ಎಂದು. ಇದು ಇವರಲ್ಲಿ ಬಹುದೊಡ್ಡ ತಪ್ಪಾಗಿ ಪರಿಗಣಿತವಾಗುತ್ತದೆ.

ಗುಜರಾತಿಯೊಳಗಲ್ಲಿ ಕೋಣವನ್ನು ಕಡಿದು ಚಾಮುಂಡಿ ಹಬ್ಬವನ್ನು ಮಾಡಬೇಕಾಗುತ್ತದೆ. ಪವಾರೊಗಳು ಹಬ್ಬಗಳಲ್ಲಿ ಹೋತ ಹಾಗೂ ಕೋಣವನ್ನು ಕಡಿದು ಊಟಕ್ಕೆ ಹಾಕಬೇಕಾಗುತ್ತದೆ. ಮೇವಾಡೊಗಳು ಎಲ್ಲಮ್ಮನಿಗೆ ಹೋತವನ್ನು ಕಡಿಯಬೇಕಾಗುತ್ತದೆ. ಕಾಳಿವಾಳೋಗಳೂ ಹೋತವನ್ನು ಕೊಯ್ಯಬೇಕಾಗುತ್ತದೆ.

೧೫. ಅಂದಿನ ದಿನಗಳಲ್ಲಿ ಮುಟ್ಟಾದ ಹೆಂಗಸನ್ನು ಮೂರು ದಿವಸಗಳ ಕಾಲ ಮುಟ್ಟುವಂತಿಲ್ಲ. ಹಾಗೇನಾದರೂ ಮುಟ್ಟಿದರೆ ಅಂತಹ ಗಂಡಸಿಗೆ ೨೦೦ರೂಗಳವರೆಗೆ ದಂಡ ಹಾಕುತ್ತಾರೆ. ಅಷ್ಟೇ ಏಕೆ ಅಂತಹ ಪುರುಷರನ್ನು ಜಾತಿಯಿಂದಲೇ ಒಂದು ತಿಂಗಳು ಕಾಲ ಹೊರಗೆ ಇಡುತ್ತಿದ್ದರು. ಈ ಅಪರಾಧ ಮಾಡಿದ ಗಂಡಸಿಗೆ ಅವರ ಭಾಷೆಯಲ್ಲಿ "ಭಾರ್‌ಹುಯ್ ಬಾಯಿಕೋನ ಚೋದು, ಲೊಹಿ ವಾಳೊವ್'' ಎಂದು ಕರೆಯುತ್ತಾರೆ. ಆದರೆ ಇಂದು ಈ ನಿಯಮಗಳು ಸಡಿಲಗೊಳ್ಳುತ್ತಿವೆ.

೧೬. ಬೇರೆಯವರ ಹೆಂಡತಿಯನ್ನು ಅಪಹರಿಸಿದವನನ್ನು 'ಚೊಟ್ಟಿಚೋದು, ಉಪ್‌ರೀನ ಉಡಾಯ್‌ಲಿಗೊ' ಎಂದು ಕರೆಯುತ್ತಾರೆ. ಅಪಹರಿಸಿದ ಹೆಣ್ಣಿನೊಂದಿಗೆ ವಾಪಸ್ಸು ಬಂದರೆ, ಅಂಥವರಿಗೆ ಕುಲಸ್ಥರೆಲ್ಲಾ ಸೇರಿ ಅವರನ್ನು ಹಿಡಿದು (ಇಬ್ಬರನ್ನು) ಬೆತ್ತಲು ಮಾಡಿ ಕಂಬಕ್ಕೆ ಕಟ್ಟಿ ಚರ್ಮದ ಬಾರುಕೋಲಿನಿಂದ ಘಟಗೀರರನ ಕೈಲಿ ಗಂಡಿಗೆ ಹನ್ನೆರಡು (೧೨) ಹಾಗೂ ಹೆಣ್ಣಿಗೆ ಇಪ್ಪತೆಂಟು (೨೮) ಏಟುಗಳನ್ನು ಹೊಡೆಸುತ್ತಿದ್ದರು. ನಂತರ ಆ ಗಂಡಿಗೆ ಇದೇ ಹೆಣ್ಣು ಬೇಕೊ? ಅಥವಾ ಆಕೆಯ ಗಂಡನಿಗೆ ಆಕೆಯನ್ನು ಬಿಡ್ತಿಯೋ? ಒಂದು ವೇಳೆ ಈಕೆಯನ್ನು ನೀನೆ ಇಟ್ಟುಕೊಳ್ಳುದಾದ್ರೆ ಗಂಡಿಗೆ ಬೇರೆ ಲಗ್ನ ಮಾಡಿಸಿಕೊಡು ಎಂದು ಕುಲಸ್ಥರೆಲ್ಲಾ ಸೇರಿ ಕೇಳುತ್ತಾರೆ. ಈ ಸಂದರ್ಭದಲ್ಲಿ ತಪ್ಪನ್ನು ಕಟ್ಟಿಸಿಕೊಂಡು ಆ ಹೆಣ್ಣನ್ನು ಕುಲದಲ್ಲಿ ಸೇರಿಸಿಕೊಂಡು ಮೊದಲ ಗಂಡನಿಗೆ ಬಿಟ್ಟು ಕೊಡಬಹುದು. ಅಥವಾ ಅಪರಾಧಿ ಗಂಡಿನೊಂದಿಗೆ. ಕೂಡಿಸಿ ಮೊದಲ ಗಂಡನಿಗೆ ಬೇರೆ ಮದುವೆಯನ್ನು ಮಾಡಬಹುದಾಗಿದೆ.

ಅಪರಾಧಿಗಳಿಬ್ಬರೂ ಒಂದೇ ಕುಲದವರಾಗಿದ್ದರೆ. ಕುಲಸ್ಥರೆಲ್ಲರಿಗೂ ಅವರ ತಪ್ಪಿನ ಕುಡಿತ ಮತ್ತು ಊಟವನ್ನು ಮಾಡಿಸಿದ ಮೇಲೆ ಹೆಣ್ಣಿನ ಕೈಯಿಂದ ಗಂಡಿನ ತಲೆಗೆ ಎಣ್ಣೆ ಹಾಕಿಸುತ್ತಾರೆ. ಇದನ್ನು ಹಾಕಲು ಕಾರಣ ಇನ್ನೂ ಮುಂದೆ ಈ ಹೆಣ್ಣನ್ನು ಕೆಟ್ಟ ದೃಷ್ಟಿಯಿಂದ ನೋಡದಿರಲೆಂದು ನಂತರ ಆ ಗಂಡನಿಗೆ ೫೦೦ ರಿಂದ ೬೦೦ ರೂ.ವರೆಗೆ ದಂಡವನ್ನು ವಿಧಿಸುತ್ತಾರೆ. ಈ ಗಂಡನಿಗೆ "ಜನಿರಾಂಡ್ ತಿನ ಮೆಹಲಿದಿದೊ" (ತನ್ನ ಹೆಂಡತಿಯನ್ನು ಬೇರೆಯವನಿಗೆ ಕೊಟ್ಟವನು) ಎಂದೂ ಮತ್ತು 'ತೆಲ್ ಘಲಾಯೊ' ಎಣ್ಣೆ ಹಚ್ಚಿಸಿ ಕೊಂಡವನು ಎಂದೆಲ್ಲಾ ಕರೆಯುತ್ತಾರೆ. ಹೀಗೆ ಕರೆಯಿಸಿಕೊಳ್ಳುವುದು ಕೆಟ್ಟ ಅವಮಾನವಾಗುತ್ತದೆ.

೧೭. ಲಗ್ನಕ್ಕಿಂತ ಮೊದಲೇ ಒಂದು ಹೆಣ್ಣು ಅನೈತಿಕವಾಗಿದ್ದಾಳೆಂಬ ಅನುಮಾನ ವೇನಾದರೂ ಕುಲಸ್ಥರಿಗೆ ಬಂದರೆ, ಆ ಹೆಣ್ಣನ್ನು ಪರೀಕ್ಷಿಸುವ ವಿಧಾನವಂತೂ ಬಹಳ ನಾಚಿಕೆಗೇಡಿನದಾಗಿದೆ. ಅದೇನೆಂದರೆ, ಅಂಥಹ ಹುಡುಗಿಯನ್ನು ಪರೀಕ್ಷಿಸಲು ಹೆಂಗಸರನ್ನು ಬಿಟ್ಟು ಅಪರಾಧಿ ಎನಿಸಿಕೊಂಡ ಹೆಣ್ಣಿನ ಯೋನಿಯೊಳಗೆ ಕೋಳಿ ಮೊಟ್ಟೆಯನ್ನು ತುರುಕುವ ಮೂಲಕ ಪರೀಕ್ಷೆ ಮಾಡುತ್ತಾರೆ. ಮೊಟ್ಟೆ ಯೋನಿ ಒಳಗೆ ಹೋಗದಿದ್ದರೆ ಆ ಹೆಣ್ಣು ಯಾರೊಂದಿಗೂ ಸಂಭೋಗ ಮಾಡಿಸಿಕೊಂಡಿಲ್ಲವೆಂತಲೂ, ಮೊಟ್ಟೆ ಒಳಗೆ ಹೋಗಿಬಿಟ್ಟರೆ ಅವಳು ಬೇರೆಯವರೊಂದಿಗೆ ಸಂಭೋಗ ಮಾಡಿಸಿಕೊಂಡಿದ್ದಾಳೆಂದು ತಿಳಿದು ಆಕೆಗೆ ದೇವಿನಾ ಟೀಕ್‌ಬಂದ್ ಅಂದರೆ ದೇವಿಯ ಆಶೀರ್ವಾದದ ಬೊಟ್ಟಿನ ಶಾಸ್ತ್ರ ಇಲ್ಲವೆಂದು ನಿರ್ಧರಿಸುವುದರಿಂದ ಯಾರೂ ಆಕೆಯನ್ನು ಮದುವೆ ಶಾಸ್ತ್ರದಿಂದ ಲಗ್ನವಾಗುವುದಿಲ್ಲ. ಹಾಗಾಗಿ ಆಕೆ ಟೀಕಂಧಾರಿಣಿ ಆಗುವುದಿಲ್ಲ.

ಆದರೆ ಆಕೆ 'ಸೀರುಡಿಕೆ' ಮಾಡಿಕೊಳ್ಳುವ ಅವಕಾಶವಿದೆ. ಇದಕ್ಕೆ ದಂಡವಾಗಿ ಮದುವೆ ಯಲ್ಲಿ ಕುಲಕ್ಕೆ ಊಟ ಹಾಕಿಸಿ ಆ ಹೆಣ್ಣು ತನ್ನ ಕುಲದವರಿಗೆಲ್ಲರಿಗೂ ವೀಳೆದೆಲೆ ಕೊಡ ಬೇಕಾಗುತ್ತದೆ. ಇದೇ ಅವಳಿಗೆ ವಿಧಿಸುವ ದಂಡ. ಹೀಗೆ ವೀಳ್ಯದೆಲೆ ಕೊಟ್ಟವಳನ್ನು 'ಕವಾರೆ ಚೋದಿ' ಅಂದರೆ (ಲಗ್ನಕ್ಕಿಂತ ಮೊದಲೆ ನಡತೆಗೆಟ್ಟವಳು) ಎಂದು ಕರೆಯುತ್ತಾರೆ.

೧೮. ತಮ್ಮ ಅಲೆಮಾರಿ ಬದುಕಿನಲ್ಲಿ ತಮ್ಮ ಊರಿನಿಂದ ಬೇರೆ ಊರಿಗೆ ಹೋದಾಗ ಅವಳು ಬೇರೆಯವರೊಂದಿಗೆ ಅನೈತಿಕ ಸಂಬಂಧ ಹೊಂದಿದವಳಿಗೆ 'ಬಹರ್ ಪೆಹಿಲೆ ಚೋದ ಯ್‌ಗಯ್' ಎಂದು ಕರೆಯುತ್ತಾರೆ. ಮತ್ತು ಅಂತಹ ಹೆಣ್ಣು ಮಕ್ಕಳಿಗೆ ೧೦೧ ರೂ. ದಂಡ ಹಾಗೂ ತಪ್ಪಿನ ಕುಡಿತ, ಹಾಗೂ ಅದರ ದಂಡದ ರೂಪದಲ್ಲಿ ಊಟವನ್ನು ಕುಲಸ್ಥರೆಲ್ಲಾ ಪಡೆಯುತ್ತಾರೆ.

೧೯. ಗುಜರಾತ್ನಲ್ಲಿ ಮದುವೆಯಾದ ಹೆಣ್ಣುಮಕ್ಕಳು ರೇಷ್ಮೆ, ಪಿತಾಂಬರದ ಸೀರೆಯನ್ನು ಉಡುವಂತಿಲ್ಲ. ಮೇವಾಡೋಗಳಲ್ಲಿ ಬಿಳಿ ಬಣ್ಣದ ಸೀರೆಯನ್ನು ಹಾಗೂ ಕಾಳಿವಾಳದಲ್ಲಿ ಕಪ್ಪು ಸೀರೆಯನ್ನು ಉಡುವಂತಿಲ್ಲ. ಇದು ಕಟ್ಟಾ ನಿಷೇಧ ಕೂಡ. ಕಾರಣ ಆಯಾ ಪಂಗಡದ ಕುಲದೇತೆಯು ಧರಿಸುವುದರಿಂದ.

ಯಾರಾದರೂ ಇವರ ಜಾತಿ ಹೆಸರಿಡಿದು ಬೈದರೆ ಅಂಥವರಿಗೆ ೧೫ ರೂ. ದಂಡ

ಹಾಕುತ್ತಾರೆ. ಈ ಮೇಲೆ ತಿಳಿಸಿದ ಎಲ್ಲಾ ನಿಬಂಧನೆಗಳು ಈಗಲೂ ಹೆಚ್ಚು, ಕಡಿಮೆ ಚಾಲ್ತಿಯಲ್ಲಿವೆ. ಕೆಲವು ನಿಬಂಧನೆಗಳಲ್ಲಿ ಸ್ವಲ್ಪ ಸಡಿಲಿಕೆಯೂ ಕಂಡು ಬರುತ್ತಿದೆ. ಕೆಲವು ಮಾತ್ರ ಪೂರ್ತಿಯಾಗಿ ಕೈಬಿಟ್ಟು ಹೋಗಿವೆ. ದಿನದಿಂದ ದಿನಕ್ಕೆ ಬದಲಾಗುತ್ತಿರುವ ಈ ಸಾಮಾಜಿಕ ಬದಲಾವಣೆಗಳ ನಡುವೆ ಈ ಬದಲಾವಣೆಗಳು ಸರ್ವೆಸಾಮಾನ್ಯ. ದಿನದಿಂದ ದಿನಕ್ಕೆ ಸರಳವಾಗುತ್ತಿರುವ ಹಕ್ಕಿಪಿಕ್ಕಿಯರ ಜೀವನದಂತೆ ಅವರ ನ್ಯಾಯ ನಿಯಮಗಳೂ ಸರಳವಾಗುತ್ತಿವೆಯೆಂದೇ ಹೇಳಬಹುದು.

## ೨

# ಆರ್ಥಿಕ ಜೀವನ

ಪ್ರಸ್ತುತ ಹಕ್ಕಿಪಿಕ್ಕಿ ಬುಡಕಟ್ಟಿನವರ ಜೀವನ್ನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಅವರ ವೇಷ-ಭೂಷಣ, ಆಹಾರ, ವಸತಿ, ವೃತ್ತಿ, ಬೆಡಗುಗಳು, ರಕ್ತಸಂಬಂಧ, ಕುಟುಂಬ, ನ್ಯಾಯ ಪದ್ಧತಿ ಮತ್ತು ವಿಧಿ-ನಿಷೇಧಗಳನ್ನು ನೋಡಬಹುದಾಗಿದೆ. ಭೌಗೋಳಿಕ ಮತ್ತು ಆರ್ಥಿಕ ವ್ಯವಸ್ಥೆಯ ಮೇಲೆ ಈ ಬುಡಕಟ್ಟು ಜನರ ಸಂಸ್ಕೃತಿ ನಿಂತಿದೆ. ಆದರೂ ಚೆಡ್ಡಿ ಚಲ್ಲಣ ತೊಟ್ಟು, ಮಾತೃಭಾಷೆಯನ್ನೇ ಅಪಭ್ರಂಶವಾಗಿ ಮಾತನಾಡುವ, ನೂರಾರು ಬೆಡಗು ಗಳನ್ನು ಹೊಂದಿದ, ರಕ್ತ ಸಂಬಂಧಕ್ಕೆ ಮಹತ್ವ ಕೊಟ್ಟು ಹತ್ತಿರದ ರಕ್ತ ಸಂಬಂಧದಲ್ಲಿ ವಿವಾಹ ಮಾಡಿಕೊಳ್ಳುವ, ಗುಡಿಸಲುಗಳಲ್ಲಿ ವಾಸಿಸುವ, ಬೇಟೆಗಾರರಾಗಿ ಗುಡಿಕಟ್ಟೆ ಮತ್ತು ಕಟ್ಟೆಮನೆಗಳಲ್ಲಿ ನ್ಯಾಯ ತೀರ್ಮಾನ ಮಾಡಿಕೊಳ್ಳುವ, ಬಡತನದ ಬೇಗೆಯಲ್ಲಿ ಬಳಲುತ್ತಿರುವ, ಪ್ರಾಚೀನ ಕಾಲದ ಬುಡಕಟ್ಟು ಸಂಸ್ಕೃತಿಯನ್ನು ಉಳಿಸಿಕೊಂಡಿರುವ, ವಿಜ್ಞಾನ, ತಂತ್ರಜ್ಞಾನ, ಶಿಕ್ಷಣ ಮತ್ತು ನಗರೀಕರಣಕ್ಕೆ ಒಳಗಾಗದಂಥ ಸಾಮಾಜಿಕ ವ್ಯವಸ್ಥೆ ಮತ್ತು ಜೀವನ ವಿಧಾನ ಪ್ರಸ್ತುತ ಹಕ್ಕಿಪಿಕ್ಕಿಯರಲ್ಲಿ ಕಂಡು ಬರುತ್ತದೆ.

**ಆರ್ಥಿಕ ಜೀವನ:** ಇವರು ರಾಜ್ಯದ ಕೆಲವು ಕಡೆ ಮೀನುಗಾರಿಕೆ, ಪ್ರಾಣಿ, ಪಕ್ಷಿಗಳ ಬೇಟೆ, ಹಂದಿ, ಕುರಿ ಮೇಕೆಗಳ ಸಾಕಾಣಿಕೆ, ಗೋರಂಜನೆ, ಕರಿಮಣಿಗಳ ವ್ಯಾಪಾರ, ಶ್ರೀಮಂತ ರೈತರ ಹೊಲಗಳಲ್ಲಿ ಕೂಲಿಕಾರ್ಮಿಕರಾಗಿ ದುಡಿಯುವುದು, ಭಟ್ಟಿಸಾರಾಯಿ ಮಾಡುವುದು ಇವರ ವೃತ್ತಿಗಳು. ಅಬಕಾರಿ ಇಲಾಖೆ ಹಾಗೂ ಸರ್ಕಾರದ ಕಾನೂನುಕ್ರಮಗಳಿಂದ ಅನೇಕ ಕಡೆ ಇಂದು ಭಟ್ಟಿಸರಾಯಿ ನಿಂತುಹೋಗಿದೆ. ಬದಲಾದ ಕಾಲಕ್ಕನುಗುಣವಾಗಿ ಇತ್ತೀಚಿಗೆ ಬೇರೆ ಬೇರೆ ಸಮುದಾಯಗಳಂತೆ ಇವರೂ ಸಹ ತಮ್ಮ ಮೂಲ ಕಸುಬುಗಳನ್ನು ಬಿಡುತ್ತಾ ಇತರರಂತೆ ಬೇರೆ ಬೇರೆ ಉದ್ಯೋಗಗಳಲ್ಲಿ ಸಹ ತೊಡಗಿಸಿಕೊಳ್ಳುತ್ತಲಿದ್ದಾರೆ. ಅಪರೂಪ ವೆನ್ನುವಂತೆ ಅಲ್ಲೊಬ್ಬ ಇಲ್ಲೊಬ್ಬ ಸರ್ಕಾರದ ಬೇರೆ ಬೇರೆ ಇಲಾಖೆಗಳಲ್ಲಿಯು ಸರ್ಕಾರಿ ನೌಕರರಾಗಿ ಕಾರ್ಯಮಾಡುತ್ತಿರುವುದು ಕಂಡುಬರುತ್ತಿದೆ.

ಇದೆಲ್ಲದರ ಜೊತೆಗೆ ಇವರ ಗಿಡಮೂಲಿಕೆ ಔಷಧಗಳ ಜನಕರೇ ಆಗಿದ್ದಾರೆ. ಕಾಡು ಉತ್ಪನ್ನಗಳಾದ ಗೆಡ್ಡೆಗೆಣಸು ಹಾಗೂ ಜೇನುಗಳನ್ನು ಸಹ ಮಾರಾಟ ಮಾಡಿ ತಮ್ಮ ಆರ್ಥಿಕ ಜೀವನಕ್ಕೆ ನೆರವಾಗುವರು.

### ಕಾಯಕರ್ಹವಲ್ಲದ ವಯೋಗುಂಪು

ಸರ್ಕಾರವು ಸಾಮಾನ್ಯವಾಗಿ ೦-೧೭ರ ವಯೋಮಾನದವರನ್ನು ನೇಮಕಾತಿಗಳಿಗೆ ಅನರ್ಹವೆಂದು ಮತ್ತು ೬೦ ವರ್ಷ ದಾಟಿದವರನ್ನು ವೃದ್ಧರೆಂದು ಪರಿಗಣಿಸಿ ಕಾಯಕರ್ಹ ವಲ್ಲದ ಗುಂಪೆಂದು ಪರಿಗಣಿಸಿದೆ. ಹಕ್ಕಿಪಿಕ್ಕಿಯರಲ್ಲಿ ೧೭ ವರ್ಷ ಒಳಗಿನವರ ಸಂಖ್ಯೆ ೧೨೮೮. ಹಾಗೆಯೇ ೬೧ ವರ್ಷಕ್ಕಿಂತ ಮೇಲ್ಪಟ್ಟವರ ಸಂಖ್ಯೆ ೫೮. ಹೀಗಾಗಿ ಕಾಯಕರ್ಹವಲ್ಲದ ಜನಸಂಖ್ಯೆ ೧೩೪೬ (ಕೋಷ್ಟಕ:೬.೧) ಎಂದು ಪ್ರಸ್ತುತ ಗಣತಿಯಲ್ಲಿ ದಾಖಲಾಗಿದೆ. ಇವರನ್ನು ಅವಲಂಬಿತ ಗುಂಪೆಂದು ಕರೆಯಬಹುದು.

**ಕೋಷ್ಟಕ: ೬.೧ ಸಮೀಕ್ಷೆಗೊಳಪಟ್ಟ ಹಕ್ಕಿಪಿಕ್ಕಿಯರಲ್ಲಿಯ ಆಶ್ರಿತರ ವಯೋಗುಂಪು**

| ಸಂ. | ವಯೋ ಗುಂಪು | ಪುರುಷರು | ಮಹಿಳೆಯರು | ಒಟ್ಟು |
|---|---|---|---|---|
| ೧. | ೦-೧೭ ವರ್ಷ | ೬೬೯ | ೬೧೯ | ೧೨೮೮ |
| ೨. | ೬೧ ವರ್ಷ ಮೇಲ್ಪಟ್ಟವರು | ೩೩ | ೨೫ | ೫೮ |
| | ಒಟ್ಟು | ೭೦೨ | ೬೪೪ | ೧೩೪೬ |

### ಕಾಯಕರ್ಹ ವಯೋಗುಂಪು

೧೮ ರಿಂದ ೬೦ರ ವಯೋಮಾನದೊಳಗಿನವರನ್ನು ಕಾಯಕರ್ಹ ಗುಂಪೆಂದು ಪರಿಗಣಿಸಲಾಗಿದೆ. ಅಂತಹವರು ಹಕ್ಕಿಪಿಕ್ಕಿಯರಲ್ಲಿ ೧೩೫೮ ಜನರಿದ್ದಾರೆ. ಇದರಲ್ಲಿ ಪುರುಷರು ೬೬೩ ಮತ್ತು ಮಹಿಳೆಯರು ೬೯೫ ಸೇರಿರುವರು.

**ಕೋಷ್ಟಕ: ೬.೨**

**ಸಮೀಕ್ಷೆಗೊಳಪಟ್ಟ ಹಕ್ಕಿಪಿಕ್ಕಿಯರಲ್ಲಿಯ ಕಾಯಕರ್ಹ ವಯೋಗುಂಪು**

| ಸಂ. | ವಯೋ ಗುಂಪು | ಪುರುಷರು | ಮಹಿಳೆಯರು | ಒಟ್ಟು |
|---|---|---|---|---|
| ೧. | ೧೮-೪೦ ವರ್ಷ | ೫೦೦ | ೫೬೫ | ೧೦೬೫ |
| ೨. | ೪೧-೬೦ ವರ್ಷ | ೧೬೩ | ೧೩೦ | ೨೯೩ |
| | ಒಟ್ಟು | ೬೬೩ | ೬೯೫ | ೧೩೫೮ |

ಹಕ್ಕಿಪಿಕ್ಕಿಯರಲ್ಲಿಯ ೧೮ ರಿಂದ ೬೦ ವಯೋಗುಂಪಿನವರನ್ನು ವಿಶೇಷವಾಗಿ ಕಾಯಕರ್ಹ ಗುಂಪೆಂದು ಪರಿಗಣಿಸಲಾಗಿದೆ. ಇವರಲ್ಲಿಯ ವಿವಿಧ ವೃತ್ತಿಗಳನ್ನು ಅವಲಂಬಿಸಿರುವವರು ಹೀಗಿದ್ದಾರೆ. ಕೃಷಿಕರು ಶೇ. ೨.೪೫ರಷ್ಟು, ಕೃಷಿಕಾರ್ಮಿಕರು ಶೇ. ೯.೧೯ರಷ್ಟು, ವ್ಯಾಪರಸ್ಥರು ಶೇ. ೦.೮೫ರಷ್ಟು, ಸರ್ಕಾರಿ ನೌಕರಿಯಲ್ಲಿ ಶೇ. ೧.೬೧ರಷ್ಟು, ಧಾರ್ಮಿಕ ಭಿಕ್ಷಾಟನೆಯಲ್ಲಿ ಶೇ. ೩.೩೦ರಷ್ಟು ಹಾಗೂ ಇತರೆ ಕೆಲಸಗಳಲ್ಲಿ ಶೇ. ೮೨.೪೭ರಷ್ಟಿದ್ದು ಇತರೆ ಕೆಲಸಗಳಾದ ಬೇಟೆ, ಗಿಡಮೂಲಿಕೆ ಮಾರಾಟ, ನಾಟಿ ಔಷಧಿ, ಪಶುಪಾಲನೆ, ಕಾಡುಜನ್ಯ ಉತ್ಪನ್ನಗಳ ಮಾರಾಟ, ಕಟ್ಟಡ ಕೆಲಸಗಳು, ಗಾರೆ ಕೆಲಸ, ಇತ್ಯಾದಿಗಳಲ್ಲಿ ತೊಡಗಿಸಿಕೊಂಡಿರುವುದು ಇವರ ಆರ್ಥಿಕ ಅಭದ್ರತೆಯನ್ನು ಬೆರಳುಮಾಡಿ ತೋರಿಸುತ್ತದೆ(ಕೋಷ್ಟಕ:೬.೩).

ಕೋಷ್ಟಕ: ೭.೩ ಕೆಲಸಗಳಲ್ಲಿ ತೊಡಗಿಕೊಂಡಿರುವರ ಹಕ್ಕಿಪಿಕ್ಕಿಯರ ಪ್ರಮಾಣ

| ಸಂ. | ಕಾಯಕಗಳು | ಪುರುಷರು | ಮಹಿಳೆಯರು | ಒಟ್ಟು |
|---|---|---|---|---|
| ೧ | ಕೃಷಿಕರು | ೨೦ | | ೨೦ |
| ೨ | ಕೃಷಿಕಾರ್ಮಿಕರು | ೫೦ | ೨೫ | ೭೫ |
| ೩ | ಸರ್ಕಾರಿ ನೌಕರರು | ೧೦ | ೪ | ೧೪ |
| ೪ | ವ್ಯಾಪಾರಸ್ಥರು | ೫ | ೨ | ೭ |
| ೫ | ಧಾರ್ಮಿಕ ಭಿಕ್ಷಾಟನೆ | ೧೫ | ೧೨ | ೨೭ |
| ೬ | ಇತರೆ ಕೆಲಸ | ೪೯೬ | ೧೭೭ | ೬೭೩ |
| | ಒಟ್ಟು | ೫೯೬ | ೨೨೦ | ೮೧೬ |

ಕರ್ನಾಟಕ ಹಕ್ಕಿಪಿಕ್ಕಿಯ ಬುಡಕಟ್ಟಿನ ಒಟ್ಟು ಜನರನ್ನು ವಯೋಮಿತಿಗೆ ಅನುಸಾರವಾಗಿ ೨ ಗುಂಪುಗಳಾದ ಕಾಯಕರ್ಹವಲ್ಲದ ವಯೋಗುಂಪು, ಕಾಯಕರ್ಹ ವಯೋಗುಂಪುಗಳಾಗಿ ವಿಂಗಡಿಸಿದ್ದು ಇದರಲ್ಲಿ ಕಾಯಕಾರ್ಹಗುಂಪು ಶೇ. ೫೨.೩೭ರಷ್ಟಾಗಿದ್ದು ಅದರಲ್ಲಿ ಕೇವಲ ಕೆಲಸಗಾರರಾಗಿ ಅಥವಾ ವೃತ್ತಿಗಳನ್ನಾಧರಿಸಿ ದುಡಿಯುವವರು ಶೇ. ೫೬.೬೨ ರಷ್ಟಾಗಿದೆ. ಉಳಿದ ಶೇ. ೪೨.೩೭ ರಷ್ಟು ಜನರಲ್ಲಿ ಗಂಡು ಶೇ. ೧೪.೩೬ ಮತ್ತು ಹೆಣ್ಣು ಶೇ. ೬೯.೪೪ರಷ್ಟು ನಿರುದ್ಯೋಗಿಗಳಾಗಿರುವುದು ಸಮೀಕ್ಷಾ ಅಂಕಿಅಂಶಗಳಿಂದ ತಿಳಿದುಬರುತ್ತದೆ. ಆದರೆ ನಿರುದ್ಯೋಗಿ ಪ್ರಮಾಣದಲ್ಲಿ ಪುರುಷರಿಗಿಂತ ಸ್ತ್ರೀಯರು ಹೆಚ್ಚಾಗಿ ಕಂಡುಬರುತ್ತಾರೆ. ಮಹಿಳೆಯರು ಕುಟುಂಬ ನಿರ್ವಹಣೆಯಲ್ಲಿ ತೊಡಗುವುದರಿಂದ ಅವರನ್ನು ನಿರುದ್ಯೋಗಿಗಳೆಂದು ಪರಿಗಣಿಸುವುದು ಅಷ್ಟು ಸೂಕ್ತವಲ್ಲ.

**ಕಸುಬಿನ ಬಗೆಗೆ ನಂಬಿಕೆಗಳು:** ಹಕ್ಕಿಪಿಕ್ಕಿಯರಲ್ಲಿ ಎಷ್ಟೇ ಕಷ್ಟಬಂದರೂ ಯಾವುದೇ ಕಾರಣಕ್ಕೂ ಬೇರೆಯವರಲ್ಲಿ ಜೀತಕ್ಕೆ ದುಡಿಯುವುದಿಲ್ಲ. ಜೀತಕ್ಕಿದ್ದರೆ ಮಾಲಿಕರು ಎಂಥಹ ಕೆಲಸ ಹೇಳಿದರು ಮಾಡಲೇಬೇಕು. ಅಂಥಹ ವ್ಯಕ್ತಿಯನ್ನು ಹಕ್ಕಿಪಿಕ್ಕಿ ಸಮಾಜವು ಕೀಳಾಗಿ ಕಾಣುವುದು.

ಕೃಷಿ, ಭೂಒಡೆತನ : ರಾಜ್ಯದ ಹಕ್ಕಿಪಿಕ್ಕಿಯರಿಗೆ ಭೂಮಿಯ ಮೇಲಿನ ಒಡೆತನ ಸಿಕ್ಕಿರುವುದಿಲ್ಲ. ಆದರೆ ಕೆಲವು ಕಡೆ ತುಂಡು ಭೂಮಿಯಿದ್ದರು ಸಹ ಬಂಜರು ಭೂಮಿಯಾಗಿರುತ್ತದೆ. ಹೀಗಾಗಿ ಇವರಲ್ಲಿ ಕೃಷಿ ಮತ್ತು ಭೂ ಒಡೆತನ ತುಂಬಾ ಅಪರೂಪವೇ ಸರಿ.

**ಕುಲ/ಗೋತ್ರ ಮತ್ತು ಉಪಕುಲ/ಗೋತ್ರಗಳ ಆಹಾರ ಕ್ರಮ ವಿಧಿ ನಿಷೇಧಗಳು**

ಯಾವುದೇ ಬುಡಕಟ್ಟು ಜನಾಂಗ ತಮ್ಮದೇ ಆದ ಆಹಾರ ಕ್ರಮಗಳ ವಿಧಿವಿಧಾನಗಳನ್ನು ಹೊಂದಿರುತ್ತವೆ. ಈ ಜನಾಂಗದವರ ಕುಟುಂಬಗಳಲ್ಲಿ ಆಹಾರ ಸೇವಿಸುವ ಕ್ರಮದಲ್ಲಿ ವಿಧಿನಿಷೇಧದಲ್ಲಿ ವಿಶೇಷತೆಯಿದೆ.

೧. ಕುಟುಂಬದ ಒಡತಿ ಅಡಿಗೆ ಮಾಡಿದರೆ ಎಲ್ಲರೂ ಊಟಮಾಡಬಹುದು.

೨. ಸೊಸೆಯಾದವಳು ಗರತಿಯಾಗಿರಬೇಕು.

೩. ಮುಟ್ಟಾಗಿ ಅಡುಗೆ ಮಾಡುವಂತಿಲ್ಲ.

೪. ಬಾಣಂತಿಯು ಆಹಾರ ಸೇವಿಸುವ ತಂಬಿಗೆ ತಟ್ಟೆ ಯಾರೂ ಬಳಸುವಂತಿಲ್ಲ. ಸೂತಕ ಕಳೆದರೂ ಕೂಡ ಅವುಗಳನ್ನು ಎಸೆದು ಬಿಡುತ್ತಾರೆ. ಬಾಣಂತಿಯು ಸ್ವಲ್ಪ ಬೆಚ್ಚಗಿನ ಆಹಾರವನ್ನು ಸೇವಿಸಬೇಕು. ದೊಡ್ಡ ದೊಡ್ಡ ತುತ್ತು ತಿನ್ನುವಂತಿಲ್ಲ. ಮಗುವಿಗೂ ದೊಡ್ಡ ಗುಟುಕಿನ ಹಾಲು ಬರುತ್ತದೆಬ ನಂಬಿಕೆ.

೫. ಉಡಿಯಲ್ಲಿ ಭಿಕ್ಷೆಬೇಡಿ ತಂದ ತಿನಿಸು-ಊಟವನ್ನು ಆಕೆಯ ಮಕ್ಕಳಲ್ಲದೆ ಗಂಡನ ಮನೆಯ ಬೇರಾರೂ ಉಪಯೋಗಿಸುವುದಿಲ್ಲ. ಹಾಗಾಗಿ ಆಕೆ ತಲೆಯ ಮೇಲೆ ಹೊತ್ತು ತರಬೇಕಾಗುತ್ತದೆ.

ಯಾವುದೇ ಜಾತ್‌ಗೋತ್‌ಗಳಲ್ಲಿ ಸಾಮಾನ್ಯ ಹಾಗೂ ಸಸ್ಯಹಾರ ಪದ್ಧತಿಯಲ್ಲಿ ವಿಶೇಷ ಆಹಾರ ಕ್ರಮಗಳಿಲ್ಲ. ಎಲ್ಲರೂ ಸಸ್ಯಹಾರ ಮತ್ತು ಮಾಂಸಾಹಾರಿಗಳಾಗಿದ್ದಾರೆ. ಹಾಗೆ ಅವುಗಳನ್ನು ತಯಾರಿಸುವ ರೀತಿಕೂಡ ಸರಳವಾಗಿರುತ್ತದೆ.

ಹೋಟೆಲ್‌ಗಳಲ್ಲಿ ಚಹಾ ಕುಡಿಯುವುದು ಅವರ ಬದುಕಿನ ಅವಿಭಾಜ್ಯ ಅಂಗವೆಂದೇ ಹೇಳಬಹುದು. ಏಕೆಂದರೆ ಈ ಪದ್ಧತಿಯಿಂದ ಪರಸ್ಪರ ಸಂಬಂಧಗಳು ಬೆಳೆಯವುದುಂಟು ಹಾಗೇ ಕುಡಿಸದಿದ್ದರೆ ಮುರಿಯುವುದೂ ಉಂಟು.

ಹಾಗೇ ಕುಲ/ಗೋತ್‌ಗಳ ಸಂಬಂಧ ಬೆಳೆಸುವಲ್ಲಿಯೂ ಕೂಡ ಸ್ತ್ರೀಪುರುಷರಿಗೆ ಮಾಂಸಹಾರದಲ್ಲಿ ಮಾತ್ರ ವಿಶೇಷತೆಯಿರುವುದನ್ನು ಕೆಳಕಂಡಂತೆ ಪಟ್ಟಿ ಮಾಡಲಾಗಿದೆ.

೧. ಗುಜರಾತ್ಯೋದವರು ಹಬ್ಬಗಳಲ್ಲಿ ಕೋಣನ ಬಲಿಕೊಡುತ್ತಾರಾದ್ದರಿಂದ, ಆ ಕುಟುಂಬದ ಮದುವೆಯಾಗದ ಹೆಣ್ಣುಮಗಳು ಮಾಂಸ ಉಪಯೋಗಿಸಬಹುದು. ಆದರೆ ಆಕೆ ಮೇವಾಡೋದಲ್ಲಿ ಮದುವೆ ಆದರೆ ತಿನ್ನುವಂತಿಲ್ಲ. ಸೊಸೆಯಾದವಳು, ತಿನ್ನಬೇಕಾಗುತ್ತದೆ. (ಆದ್ದರಿಂದ ಇವರು ಭೇಂಬ್ಯಾವಳೋ ಆಗುತ್ತಾರೆ).

೨. ಮೇವಾಡೋದವರು ಹಬ್ಬಗಳಲ್ಲಿ ಹೋತದ ಬಲಿ ಕೊಡುವುದರಿಂದ ಆ ಕುಟುಂಬದ ಹೆಣ್ಣು ಮದುವೆಯಾಗದವಳಾದರೆ ತಿನ್ನಬಹುದು. ಆದರೆ ಆಕೆ ಗುಜರಾತ್ಯೋದಲ್ಲಿ ಮದುವೆಯಾದರೆ ತಿನ್ನುವಂತಿಲ್ಲ. ಸೊಸೆಯಾದವಳು ತಿನ್ನಬೇಕಾಗುತ್ತದೆ. (ಆದ್ದರಿಂದ ಇವರು ಬೋಕ್ಯಾವಾಳೋ ಆಗುತ್ತಾರೆ).

೩. ಕಾಳಿವಾಲೋದವರು ಹಬ್ಬಗಳಲ್ಲಿ ಹೋತಬಲಿಕೊಡುವುದರಿಂದ ಮದುವೆಯಾಗದ ಹೆಣ್ಣು ತಿನ್ನಬಹುದು. ಹೋತಮಾಂಸ ತಿನ್ನದ ತಮ್ಮ ಮಗಳು ಗುಜರಾತ್ಯೋದಲ್ಲಿದ್ದರೆ ಅವರಲ್ಲಿ ಪೂಜಿಸಲ್ಪಡುವ ಭೀಮ್ ದೇವರಿಗೆ ಗಂಡು ಕುರಿಯನ್ನು ಬಲಿಕೊಟ್ಟು ಅಡುಗೆ ತಯಾರಿಸಿ ಎಲ್ಲರೂ ಉಣ್ಣಬಹುದು.

೪. ಪವಾರ್‌ನವರು ಹಬ್ಬಗಳಲ್ಲಿ ಹೋತ, ಕೋಣನ ಬಲಿಕೊಡುವುದರಿಂದ ಅವರಲ್ಲಿ

ಬರುವ ಹೆಣ್ಣುಮಕ್ಕಳಲ್ಲಿ ಮದುವೆ ಆಗದವರು, ಸೊಸೆ ಆದವಳು ಎಲ್ಲರೂ ಉಪಯೋಗಿಸಬಹುದಾಗಿದೆ. ಹಾಗಾಗಿ ಈ ಪಂಗಡ ಮೇಲಿನ ಮೂರು ಪಂಗಡಗಳಲ್ಲೂ ಸಂಬಂಧವನ್ನು ಬಳಸಬಹುದಾಗಿದೆ. ಹೀಗಾಗಿ ನಿರ್ಬಂಧವಿಲ್ಲದ ಹೆಣ್ಣುಮಕ್ಕಳಿಂದಾಗಿ ಕೆಲವು ಮೇವಾಡೋದವರು ಸಂಬಂಧ ಬೆಳೆಸಲು ಇಚ್ಛಿಸೊಲ್ಲ.

ಊಟದ ರೀತಿ : ಹಕ್ಕಿಪಿಕ್ಕಿಯರು ಮೂಲತಃ ಅಲೆಮಾರಿಗಳಾಗಿರುವುದರಿಂದ ಅವರ ಆಹಾರ ಪದ್ಧತಿಯು ಸಹ ಅಲೆಮಾರಿತನವನ್ನೇ ಅವಲಂಬಿಸಿರುತ್ತದೆ. ಇವರ ಆಹಾರ ಪದ್ಧತಿಯು ತುಂಬಾ ಸರಳವಾಗಿದೆ. ಈ ತರಹದ ಸರಳತನಕ್ಕೆ ಕಾರಣ ಅವರ ಬಡತನ. ಅದ್ದೂರಿಯಾದ ಅಡುಗೆಗಳು ಭಕ್ಷ್ಯಗಳು ಇವರಲ್ಲಿ ಇಲ್ಲ. ಸಸ್ಯಹಾರವಾಗಿರಲಿ ಅಥವಾ ಮಾಂಸಹಾರವಾಗಿರಲಿ ಯಾವುದೇ ಅಡುಗೆಗಳಾದರೂ ಇವರಲ್ಲಿ ಸರಳ. ಇವರಲ್ಲಿ ಹೆಚ್ಚಿನ ಜನ ಅನ್ನವನ್ನು ಪ್ರಮುಖವಾಗಿ ತಿನ್ನುತ್ತಾರೆ. ಒಂದು ದಿನಕ್ಕೆ ಒಂದೇ ಊಟವನ್ನು ಮಾಡುವ ಹಕ್ಕಿಪಿಕ್ಕಿಯರು ತುಂಬಾ ಗಟ್ಟಿಗರು ಹಾಗೂ ಆರೋಗ್ಯವಂತರು. ಇವರಲ್ಲಿ ಸಾಮಾನ್ಯವಾಗಿ ಬೆಳಿಗ್ಗೆ ಯಾರು ಒಲೆಗಳನ್ನು ಹೊತ್ತಿಸುವುದಿಲ್ಲ. ತಮ್ಮ ಕಾಲೋನಿಗಳಲ್ಲಿ ಇಲ್ಲವೇ ಪಕ್ಕದ ಊರುಗಳಲ್ಲಿರುವ ಹೋಟಲುಗಳಿಗೆ ಎಲ್ಲರೂ ಹೋಗಿ ಇಡ್ಲಿಗಳನ್ನು ತಿನ್ನುತ್ತಾರೆ. ದೊಡ್ಡವರು ಕೇವಲ ಇಡ್ಲಿ ಚಟ್ನಿಯನ್ನು ತಿಂದರೆ, ಮಕ್ಕಳಿಗೆ ಇಡ್ಲಿ ಚಟ್ನಿಯ ಜೊತೆಗೆ ಬ್ರೆಡ್ಡು ಚಹವನ್ನು ತಿನ್ನಿಸುತ್ತಾರೆ.

ಈ ತರಹದ ಪದ್ಧತಿಯನ್ನು ಮಾಡುವ ಹಕ್ಕಿಪಿಕ್ಕಿಯರು ಅನುಸರಿಸುವದಿಲ್ಲ. ಆದರೆ ವಾಸ್ತವದಲ್ಲಿ ಬಹುತೇಕ ಹಕ್ಕಿಪಿಕ್ಕಿಯರಿಗೆ ಸರ್ಕಾರ ಜಮೀನನ್ನು ಕೊಟ್ಟಿದ್ದರೂ ಅವರು ಕೃಷಿಯನ್ನು ಮಾಡುವದಿಲ್ಲ ಎಂಬುದು ಇಲ್ಲಿ ಗಮನಾರ್ಹ. ಇವರು ರೈತರಂತೆ ಆಹಾರವನ್ನು ಮನೆಯಲ್ಲೇ ತಯಾರಿಸುತ್ತಾರೆ. ಆದಾಗ್ಯೂ ಹೋಟೆಲ್‌ನಲ್ಲಿ ಇಡ್ಲಿ ಬ್ರೇಡ್ಡು ತಿನ್ನುವುದು ಮತ್ತು ಚಹಾ ಕುಡಿಯುವುದು ಬದುಕಿನ ಅವಿಭಾಜ್ಯ ಅಂಗವಾಗಿದೆ. ಈ ವಿಚಿತ್ರ ನಡವಳಿಕೆಯು ಎಷ್ಟೋ ಬಾರಿ ಮನುಷ್ಯನ ಸಂಬಂಧಗಳನ್ನು ಕೂಡಿಸಲು ಮತ್ತು ಆ ಸಂಬಂಧಗಳನ್ನು ಮುರಿಯಲೂ ಅವರಲ್ಲಿ ಬಳಕೆಯಾಗುತ್ತದೆ. ಒಬ್ಬಳು ಅತ್ತೆಗೆ ಅಳಿಯನಾದವನು ತಿಂಡಿ ತಿನ್ನಿಸಿ ಚಹಾ ಕುಡಿಸದಿದ್ದರೆ, ಅತ್ತೆಯಾದವಳು ತನ್ನ ಮಗಳನ್ನು ಗಂಡನ ಮನೆಯಿಂದ ತನ್ನ ಮನೆಗೆ ತಂದಿಟ್ಟುಕೊಂಡು ಅವನಿಗೆ(ಅಳಿಯನಿಗೆ) ಹೆಂಡತಿಯಿಲ್ಲದಂತೆ ಮಾಡಿಬಿಡುತ್ತಾಳೆ!

ಆ ಕೆಟ್ಟು ಹೋದ ಸಂಬಂಧ ಮತ್ತೇ ಸುಧಾರಿಸಬೇಕೆಂದರೆ, ಅಳಿಯನಾದವನು ಮತ್ತೇ ತನ್ನ ಅತ್ತೆ ಮತ್ತು ಮಾವಗೆ ಹೋಟೆಲ್‌ನಲ್ಲಿ ತಿಂಡಿ ತಿನಿಸಿ ಚಹಾ ಕುಡಿಸಬೇಕು. ಇಲ್ಲವೇ ಸರಾಯಿ ಕುಡಿಸಿ ಕೋಳಿ ತಿನ್ನಿಸಿದರೆ ಮಾತ್ರ ಮುರಿದು ಹೋದ ಸಂಬಂಧ ಸರಿಹೋಗುತ್ತದೆ.

ಹಕ್ಕಿಪಿಕ್ಕಿ ಗಂಡಸರು ಅಲೆಮಾರಿಗಳಾಗಿ ಊರೂರು ಸುತ್ತುತ್ತಿರುವಾಗ, ಹಕ್ಕಿಪಿಕ್ಕಿ ಹೆಂಗಸರು ಊರೂರುಗಳಲ್ಲಿ ತಮ್ಮ ವ್ಯಾಪಾರಕ್ಕೆ ಬರುವುದು ಒಂದು ಮುಖವಾದರೆ, ಮತ್ತೊಂದು ಮುಖದಲ್ಲಿ ಅವರು ಮನೆಮನೆಗಳಲ್ಲಿ ಭಿಕ್ಷೆ ಎತ್ತುತ್ತಾರೆ. ಮುದ್ದೆ ಸಾರು, ಅನ್ನ, ರೊಟ್ಟಿ,

ಸಿಹಿ ತಿಂಡಿಗಳು ತಂಗಳು ಇಲ್ಲವೇ ಬಿಸಿ ಹೀಗೆ ನಾನಾ ಬಗೆಯ ಆಹಾರವನ್ನು ತಿನ್ನುತ್ತಾರೆ. ಹಳ್ಳಿಯ ಜನರು, ಅತಿಯಾಗಿ ಕಾಡುತ್ತಿದ್ದಾರೆಂದು ಬೈಯುತ್ತಾ, ಮರುಗುತ್ತಾ ಈ ಹಕ್ಕಿಪಿಕ್ಕಿಯರಿಗೆ ಬಿಕ್ಷೆಯನ್ನು ಹಾಕುತ್ತಾರೆ. ಈ ಅವಧಿಯಲ್ಲಿ ಗಂಡಸರು ಬೇಟೆಯಾಡಿ ತಂದ ಪ್ರಾಣಿ ಪಕ್ಷಿಗಳನ್ನು ಬೇಯಿಸಿ ಸಂಜೆ ಸಾಧ್ಯವಾದರೆ ಮಾಂಸವನ್ನು ತಿನ್ನುತ್ತಾರೆ. ಇಲ್ಲವೇ ಅದೇ ಮಾಂಸವನ್ನು ಮರುದಿನಕ್ಕೆ ಇಟ್ಟು ಕೊಂಡಿರುತ್ತಾರೆ. ಭಿಕ್ಷೆಯಿಂದ ಬಂದ ಆಹಾರವನ್ನು ಬಹುಶಃ ಎಲ್ಲರೂ ಸೇರಿ ಹಂಚಿಕೊಂಡು ತಿನ್ನುತ್ತಾರೆ. ಈಗಾಗಲೇ ಹೇಳಿರುವಂತೆ, ಹಕ್ಕಿಪಿಕ್ಕಿಯರು ತಿನ್ನುವಷ್ಟು ಬಗೆಬಗೆಯ ಆಹಾರವನ್ನು ಬಹುಶಃ ಬೇರಾವ ಬುಡಕಟ್ಟಿನವರು ತಿನ್ನಲಾರರು. ಇವರು ತಿನ್ನುವ ಸಸ್ಯಹಾರ ಪದ್ಧತಿಯು ಮುಖ್ಯವಾಗಿ ಔಷಧಿಯುಕ್ತವಾಗಿದ್ದಾಗಿದೆ. ಇದಕ್ಕೆ ಕಾರಣ ಹಕ್ಕಿಪಿಕ್ಕಿಯರ ಮುಖ್ಯ ಕಸುಬುಗಳಲ್ಲಿ ವೈದ್ಯ ಪದ್ಧತಿಯು ಒಂದಾಗಿದೆ.

ಹಕ್ಕಿಪಿಕ್ಕಿಯರು ತಿನ್ನುವ ಆಹಾರ ಪದ್ಧತಿಯನ್ನು ನಾಲ್ಕು ಬಗೆಗಳಾಗಿ ವಿಂಗಡಿಸಬಹುದಾಗಿದೆ. ಈ ನಾಲ್ಕು ವಿಭಾಗಗಳು ಅವರ ಸಾಮಾಜಿಕ ಜೀವನ ಪದ್ಧತಿಯನ್ನೇ ಅವಲಂಬಿಸಿರುತ್ತದೆ.

**೧) ಸಾಮಾನ್ಯ ಅಡುಗೆಗಳು**

ಹಕ್ಕಿಪಿಕ್ಕಿಯರು ಸಹ ನಮ್ಮ ಸಮಾಜದ ಇತರರು ತಿನ್ನುವಂತಹ ಕೆಲವು ಸಾಮಾನ್ಯ ಅಡುಗೆಗಳನ್ನು ತಮ್ಮ ದಿನನಿತ್ಯದ ಜೀವನಕ್ಕೆ ಮಾಡಿಕೊಳ್ಳುತ್ತಾರೆ. ಮುದ್ದೆ, ಅನ್ನ, ಸಾರು, ಇಡ್ಲಿ, ಚಿತ್ರನ್ನ, ಪಾಯಸ, ಚಟ್ನಿ, ರೊಟ್ಟಿ ಮುಂತಾದವುಗಳು, ಈ ಅಡಿಗೆಗಳಲ್ಲಿ ಅಂಥಹ ವ್ಯತ್ಯಾಸವೇನೂ ಕಾಣುವದಿಲ್ಲವಾದರೂ ಅವರ ಅಡುಗೆಗಳಲ್ಲಿ ಇತರಿಗಿಂತ ವಿಶೇಷವಾದುದೆಂದರೆ, ಹೆಚ್ಚು ಖಾರವಾಗಲಿ ಅಥವಾ ಹೆಚ್ಚು ಉಪ್ಪಾಗಲಿ ಇರುವದಿಲ್ಲ. ಇತ್ತೀಚೆಗೆ ಹೆಣ್ಣು ಮಕ್ಕಳು ಬೇರೆ ಬೇರೆ ರುಚಿಗಳ ಪ್ರಭಾವದಿಂದಾಗಿ ಬಗೆಬಗೆಯ ಆಹಾರಗಳನ್ನು ಯಾವುದೇ ಒಂದು ಪ್ರಧಾನ ರುಚಿ ಇರದೇ ಅದು ಹೆಚ್ಚು ಸಪ್ಪೆಯಾಗಿರುತ್ತದೆ ಎಂದರೂ ತಪ್ಪಾಗದು.

**೨) ಸಸ್ಯಾಹಾರದ ಅಡುಗೆಗಳು**

ಹಕ್ಕಿಪಿಕ್ಕಿ ಜನರು ಮಾರುಕಟ್ಟೆಯಲ್ಲಿ ಸಿಗುವ ಪ್ರತಿಯೊಂದು ತರಕಾರಿಯನ್ನು ಅಡುಗೆಗೆ ಬಳಸುತ್ತಾರೆ. ಅಲ್ಲದೆ ಬಗೆಬಗೆಯ ಧವಸಧಾನ್ಯಗಳನ್ನು ತಮ್ಮ ಸಸ್ಯಹಾರ ಊಟ ಪದ್ಧತಿಯಲ್ಲಿ ಬಳಸಿಕೊಳ್ಳುತ್ತಾರೆ. ವಿಶೇಷವೆಂದರೆ, ಅವರ ಸೊಪ್ಪಿನ ಸಾರು ಬಹುಶಃ ಅವರ ಅಲೆಮಾರಿ ಜೀವನವು ಹಲವಾರು ಸೊಪ್ಪುಗಳನ್ನು ತಿನ್ನುವಂತೆ ಮಾಡಿದೆ ಎನಿಸುತ್ತದೆ. ಇವರು ತಿನ್ನುವ ಸೊಪ್ಪುಗಳನ್ನು ನೋಡಿದರೆ ಈ ಬುಡಕಟ್ಟಿನವರನ್ನು 'ಆಡಿಗೆ' ಹೋಲಿಸಬಹುದಾಗಿದೆ. ಏಕೆಂದರೆ, ಆಡು ಮುಟ್ಟದ ಸೊಪ್ಪುಹೇಗೆ ಇಲ್ಲವೋ, ಅದೇ ರೀತಿಯಲ್ಲಿ ಹಕ್ಕಿಪಿಕ್ಕಿಯರು ತಿನ್ನದೇ ಇರುವ ಸೊಪ್ಪು ಇಲ್ಲವೆನ್ನಬಹುದು. ನಾಡಿಗಿಂತ ಕಾಡಿನ ಜೀವನವೇ ಹೆಚ್ಚಾಗಿ ಅನುಭವಿಸಿದ ಈ ಬುಡಕಟ್ಟು ಕಾಡಿನಲ್ಲಿರುವ ಎಲ್ಲಾ ಸೊಪ್ಪುಗಳನ್ನು ತಮ್ಮ ಆಹಾರಕ್ಕಾಗಿ ಬಳಸಿಕೊಳ್ಳುತ್ತಾರೆ. ಇವರು ತಿನ್ನುವ ಸೊಪ್ಪಿನ ಸಾರುಗಳೆಂದರೆ, 'ದೇವರಧಾರಿನ

ಬಾಜಿ' ಎಂಬುದು ಮುಖ್ಯವಾದದ್ದು. ಇದು ಕಾಡಿನಲ್ಲಿ ಸಿಗುವ ಒಂದು ಬಗೆಯ ಸೊಪ್ಪಾಗಿದ್ದು, ಇದರಿಂದ ಸಾರು, ಪಲ್ಯ, ಚಟ್ನಿಗಳನ್ನು ಮಾಡುತ್ತಾರೆ.

**'ಪಂಬೊಡಾನಿಭಾಜಿ'**: ಈ ಸೊಪ್ಪು ಸೇಂಗಾ ಸೊಪ್ಪಿನ ತರಹವೇ ಇರುತ್ತದೆ. (ನೆಲಗಡಲೇ ಕಾಯಿಯ ಗಿಡದಂತೆ) ಇದು ಒಂದು ತರಹ ಕೆಟ್ಟ ವಾಸನೆಯನ್ನು ಹೊಂದಿರುತ್ತದೆ. ಜೊತೆಗೆ ಸ್ವಲ್ಪ ಉಪ್ಪುಪ್ಪು ಆಗಿರುತ್ತದೆ. ಇದನ್ನು ಚೆನ್ನಾಗಿ ಬೇಯಿಸಿ ಎರಡು ಮೂರು ಬಾರಿ ಹಿಂಡಿ ಅದರ ರಸವನ್ನು ತೆಗೆಯುತ್ತಾರೆ. ಉಪ್ಪು, ಹುಣಸೆಹಣ್ಣು, ಬೆಳ್ಳುಳ್ಳಿ, ಮೆಣಸಿನಕಾಯಿ, ಕಾಯಿ ಚೂರು ಜೊತೆಗೆ ಎಣ್ಣೆ, ಈರುಳ್ಳಿ ಒಗ್ಗರಣೆ ಮಾಡಿ ಪಲ್ಯವಾಗಿ ಊಟಕ್ಕೆ ಬಳಸುತ್ತಾರೆ. ಸಾಮಾನ್ಯವಾಗಿ ರಸ್ತೆ ಅಕ್ಕಪಕ್ಕ, ಹೊಲಗಳಲ್ಲಿ ಕಂಡುಬರುತ್ತದೆ.

**ಅಂಬೋಡಾನಿಭಾಜಿ ಅಥವಾ (ಪುಂಡಿಪಲ್ಯೆ)**: ಇದು ಹುಳಿ ಹುಳಿಯಾದ ಪುಂಡಿಪಲ್ಲೆ ಆಗಿದೆ. ಇದರಿಂದ ಸಾರು ಹಾಗೂ ಚಟ್ನಿ ಎರಡನ್ನೂ ಮಾಡುತ್ತಾರೆ.

**ಗಾದರಗುಮ್ಮ (ತುಂಬೆಸೊಪ್ಪು)**: ಕಾಗಲಾನಿ ಭಾಜಿ (ದೊಡ್ಡಕನ್ನೆ ಸೊಪ್ಪು), ಪನ್‌ಗಡವೆ ಬಾಜಿ ಈ ಸೊಪ್ಪಿನ ತುದಿ ಮಾತ್ರ ಮುರಿದು ಹಾಕಿ ರೊಟ್ಟಿಗಾಗಿ ಉಪ್ಪು ಹಾಕಿ ಬೇಯಿಸಿದ ಸಾರು ಅಥವಾ ಪಲ್ಲೆಯನ್ನು ಕಾಟಾನಿ ಬಾಜಿ ಅಂದರೆ ಮುಳ್ಳಿನ ಸೊಪ್ಪು ಇದರ ಗಣ್ಣು ಗಣ್ಣಿಗೂ ಮುಳ್ಳು ಇರುತ್ತದೆ.

**'ದಗಲ್‌ಗುರಾನಿ ಭಾಜಿ'** ಇದರ ತುದಿಯಲ್ಲಿ ಉದ್ದನೆಯ ಬೀಜದ ಗೊಂಚಲಿರುತ್ತದೆ. ಆ ಬೀಜಗಳಿಂದಲೇ ಇವರು ಚಟ್ನಿ ಮತ್ತು ಸಾರನ್ನು ಮಾಡಿ ಸಸ್ಯಹಾರವಾಗಿ ಇದನ್ನು ಸೇವಿಸುತ್ತಾರೆ.

ಲೇಮಡಿ ಭಾಜಿ ಅಂದರೆ ಉಣ್ಣೆ ಸೊಪ್ಪು ಎಂದರ್ಥ. ಕಾಮುಣಿನಿ ಭಾಜಿ ಎಂದರೆ ಗೆಣಿಕೆ ಸೊಪ್ಪು ಅಥವಾ ದುಪ್ಪಟೆ ಸೊಪ್ಪು ಎಂದರ್ಥ. ಈ ಸೊಪ್ಪಿನ ಸಾರು ಅಥವಾ ಪಲ್ಲೆ ತಿನ್ನುವುದರಿಂದ ಸಣ್ಣ ಮಕ್ಕಳಿಗೆ ಚರ್ಮ ಸುಲಿದು ಬರುವ ರೋಗವಾದ 'ಕೆಂಬಾರ್' ಎಂಬುದು ಬರುವುದಿಲ್ಲ. ಗರ್ಭಿಣಿಯರಿಗೆ ಹುಟ್ಟುವ ಮಗು ಚೆನ್ನಾಗಿರಲೆಂದು ಮತ್ತು ಮಕ್ಕಳ ಮುಖ ಕಪ್ಪಾಗದಿರಲೆಂದು ಈ ಸೊಪ್ಪನ್ನು ಸ್ತ್ರೀಯರಿಗೆ ಹೆಚ್ಚು ತಿನ್ನಿಸುತ್ತಾರೆ.

ಮುಂಗ್ಯಾನಿ ಬಾಜಿ ಎಂದರೆ ನುಗ್ಗೆಸೊಪ್ಪು ಎಂದರ್ಥ. ಇವುಗಳ ಜೊತೆಗೆ ಅರಿಬೆ ಸೊಪ್ಪು, ಕಾಗಲೆ ಸೊಪ್ಪು, ತಲಮಲಿ ಸೊಪ್ಪು ಮತ್ತು ಇನ್ನೂ ಮುಂತಾದ ಸೊಪ್ಪುಗಳನ್ನು ಅಡಿಗೆಗಾಗಿ ಇವರು ಬಳಸುತ್ತಾರೆ.

ಮೇಲೆ ಹೇಳಿದ ಅನೇಕ ಸೊಪ್ಪುಗಳ ಜೊತೆಗೆ ತರಕಾರಿ ಹಾಗೂ ಕಾಯಿಗಡ್ಡೆಗಳಾದ ಕೋಸುಗಡ್ಡೆ, ಗಜ್ಜರಿ ಆಲೂಗಡ್ಡೆ (ಪಿಂಡಾಳು), ಸೋರೆಕಾಯಿ (ದೂದಿ), ಹಿರೇಕಾಯಿ (ತರೊಯಿ), ಬದನೆಕಾಯಿ (ವೆಂಗಣ್), ಹೂಕೋಸು (ಗೋಭಿ), ಬೆಳ್ಳುಳ್ಳಿ, (ಲಖ್ಖಾಣ್), ಪುದಿನಾ, ಈರುಳ್ಳಿ (ಕಾಂದೊ) ಇನ್ನೂ ಮುಂತಾದ ತರಕಾರಿ ಮತ್ತು ಕಾಯಿಗಡ್ಡೆಗಳನ್ನು ಅಲಸಂದಿ (ಲೋಭಿಯೋ), ಅವರೆಕಾಳು (ಬಲ್ಲರ್), ಹುರುಳಿಕಾಳ್ (ಕುಲ್ತಿ), ಹಾಗೂ ಇನ್ನೂ ಮುಂತಾದ ಕಾಳುಗಳನ್ನು, ಜೀರಿಗೆ (ಜೀರು), ಗಸಗಸೆ (ಕಸ್‌ಕಸ್), ಲವಂಗ, ಚಕ್ಕೆ,

(ಕೋತ್‌ಮಿರ್), ಕೊತಂಬ್ರಿ ಬೀಜ (ಮಿಖಾಲೋ), ಜೊತೆಗೆ ಇನ್ನೂ ಮುಂತಾದ ಸಾಂಬಾರಾ ಪದಾರ್ಥಗಳನ್ನು ಒಳ್ಳೆಣ್ಣೆ ಮಿಠುತೇಲ್, ಸೇಂಗಾ (ಬಿಲ್ಲಾತಿ), ಎಳ್ಳು (ತಿಲ್ಲಿ) ಮುಂತಾದ ಎಣ್ಣೆ ಪದಾರ್ಥಗಳನ್ನು ತಮ್ಮ ಊಟದಲ್ಲಿ ಹಕ್ಕಿಪಿಕ್ಕಿಯರು ಬಳಸುತ್ತಾರೆ. ತೆಂಗಿನ ಕಾಯಿ ಯನ್ನು (ನಾರೇಳ್) ಸಹ ಸಾಮಾನ್ಯವಾಗಿ ತಮ್ಮ ಅಡಿಗೆಯಲ್ಲಿ ಇವರು ಬಳಸುತ್ತಾರೆ.

೨. ಮಾಂಸಾಹಾರ ಅಡುಗೆಗಳು

ಹಕ್ಕಿಪಿಕ್ಕಿ ಸಮುದಾಯದವರು ಬೇಟೆಯನ್ನು ತಮ್ಮ ಬದುಕಿನ ಅವಿಭಾಜ್ಯ ಅಂಗವನ್ನಾಗಿ ಮಾಡಿಕೊಂಡು ಎಲ್ಲಾ ತರಹದ ಪ್ರಾಣಿ ಪಕ್ಷಿಗಳನ್ನು ತಮ್ಮ ಅಡಿಗೆಗೆ ಬಳಸಿಕೊಳ್ಳುತ್ತಾರೆ. ಎಷ್ಟೋ ಜನರು ಮಾಂಸದ ಊಟವಿಲ್ಲವೆಂದರೆ ತಮ್ಮ ಊಟವೇ ಅಪೂರ್ಣವೆಂದು ಭಾವಿಸುವವರು ಇದ್ದಾರೆ. ಇವರು ಆಡಿದ ಬೇಟೆಯನ್ನು ಬೇರೆಯವರಿಗೆ ಮಾರಾಟ ಮಾಡುವದಕ್ಕಿಂತ ಹೆಚ್ಚಾಗಿ ತಾವು ತಮ್ಮ ಊಟಕ್ಕಾಗಿಯೇ ಬಳಸುವುದು ಹೆಚ್ಚಿದೆ ಎಂದರೆ ತಪ್ಪಾಗದು. ಇವರು ತಿನ್ನುವಷ್ಟು ಬಗೆಬಗೆಯ ಮಾಂಸದ ಸಾರನ್ನು ಗಮನಿಸಿದರೆ, ನೋಡುಗರಿಗೆ ಆಶ್ಚರ್ಯ ಆಗದೇ ಇರದು. ಈ ರೀತಿಯ ಅವರ ಆಹಾರ ಕ್ರಮ ಆವರ ಅಲೆಮಾರಿತನ, ಆವರ ಕಾಡಿನ ಜೀವನ ಹಾಗೂ ಅವರ ಆರ್ಥಿಕ ಪರಿಸ್ಥಿತಿಯನ್ನೇ ಅವಲಂಬಿಸಿದೆ ಎಂಬುದನ್ನು ಯಾರೊಬ್ಬರೂ ಮರೆಯುವ ಹಾಗಿಲ್ಲ.

ಅನೇಕ ಪ್ರಾಣಿ ಪಕ್ಷಿಗಳ ಮಾಂಸದ ಊಟವನ್ನು ಮಾಡುತ್ತಾರೆ. ಪ್ರಾಣಿ ಪಕ್ಷಿಗಳೆಂದರೆ, ಚಿಗರೆ ಮಾಂಸ (ಹರಣ್ಣಿ ಭೊಟಿ), ಮೊಲದ ಮಾಂಸ (ದಾಂತಿನಿಬೋಟಿ), ಕಾಡು ಹಂದಿ (ಡುಕರ್‌ನಿಬೋಟಿ) ಮತ್ತಿತ್ಯಾದಿ.

ಹಕ್ಕಿಪಿಕ್ಕಿಯರು ತಮ್ಮ ದಿನನಿತ್ಯ ಜೀವನದಲ್ಲಿ ತಿನ್ನಲು ಬಳಸುವ ಪ್ರಾಣಿ ಪಕ್ಷಿಗಳ ಪಟ್ಟಿಯನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

೧. ಭೋಕಡಾನಿ ಬೋಟಿ - ಆಡಿನ ಮಾಂಸ

೨. ಮುರಗಾನಿ ಬೋಟಿ - ಕೋಳಿ ಮಾಂಸ

೩. ಮೇಂಡೋನಿ ಬೋಟಿ - ಕುರಿಯ ಮಾಂಸ.

೪. ಭೇಖೋನಿ ಬೋಟಿ - ಕೋಣದ ಮಾಂಸ.

೫. ನ್ಯೋರಿನಿ ಬೋಟಿ - ಗುಳ್ಳೇನರಿ ಮಾಂಸ.

೬. ಮುಂಗಶ್‌ನಿ ಬೋಟಿ - ಮುಂಗಸಿ ಮಾಂಸ.

೭. ಬಿಲ್ಲಾಡಾನಿ ಬೋಟಿ - ಕಾಡುಬೆಕ್ಕಿನ ಮಾಂಸ.

೮. ಧಾತಿನಿ ಬೋಟಿ - ಮೊಲದ ಮಾಂಸ.

೯. ತಿತರೋನಿ ಬೋಟಿ - ಗೌಜಲಪಕ್ಕಿಯ ಮಾಂಸ.

೧೦. ಗೇರಾಜನಿ ಬೋಟಿ - ಕಾಡು ಹಕ್ಕಿ ಮಾಂಸ. ಪುರಲಕ್ಕಿ

೧೧. ಲೋಖಿಡ್‌ನಿ ಬೋಟಿ - ಸಣ್ಣ ನರಿ, ಠಕ್ಕನರಿ ಮಾಂಸ.

೧೨. ಜರಕ್‌ನೀ ಬೋಟಿ - ಕತ್ತೆಕಿರುಬ ಮಾಂಸ.

೧೩. ಗರ್ದನಿ - ರಣಹದ್ದಿನ ಮಾಂಸ.

೧೪. ಗೋಯಿನಿ ಬೋಟಿ - ಉಡದ ಮಾಂಸ.

೧೫. ಗಿಲೋರಿನಿ ಬೋಟಿ - ಅಳಿಲಿನ ಮಾಂಸ.

೧೬. ಚಕತಾಂಡೋನಿ ಬೋಟಿ - ಸಣ್ಣಗೂಬೆ ಹಾಲಕ್ಕಿ ಮಾಂಸ.

೧೭. ಗುಗ್ಗೂನಿ ಬೋಟಿ - ಗೂಬೆ ಮಾಂಸ.

೧೮. ಥೋಳ್‌ನಿ ಬೋಟಿ - ಸೊರಕ್ಕಿ ಮಾಂಸ.

೧೯. ಕೊಂಗಾನಿ ಬೋಟಿ - ಬಿಳಿಕೊಕ್ಕರೆ ಮಾಂಸ.

೨೦. ಶಾಮ್‌ಮುರಗನಿ ಬೋಟಿ - ಕರಿತಲೆಯ ಬಾತುಕೋಳಿಮಾಂಸ.

೨೧. ಏಕಡಿನಿ ಬೋಟಿ - ಏಡಿ ಮಾಂಸ.

೨೨. ಮಾತ್ಸಲುನಿ ಬೋಟಿ - ಮೀನು ಮಾಂಸ.

೨೩. ಮಗರಮಚ್‌ನಿ ಬೋಟಿ - ಮೊಸಳೆ ಮಾಂಸ.

೨೪. ಕಾಚ್‌ರ್‌ನಿರುನಿ ಬೋಟಿ - ಆಮೆಯ ಮಾಂಸ.

೨೫. ಗೋಬ್‌ನಿ ಬೋಟಿ - ಹೆಗ್ಗಣದ ಮಾಂಸ.

೨೬. ಪಾಣುಮಾನು ಮಿತ್ಯಾನಿ ಬೋಟಿ - ನೀರ್‌ನಾಯಿ ಮಾಂಸ.

೨೭. ಲಕ್ಕಡ್‌ಪೋಡನಿ ಬೋಟಿ - ಮರಕುಟಿಕ ಪಕ್ಷಿಯ ಮಾಂಸ.

೨೮. ಪರ್‍ಯಾವೋನಿ ಬೋಟಿ - ಪಾರಿವಾಳದ ಮಾಂಸ.

೨೯. ಪಿದ್ದಿನಿ ಬೋಟಿ - ಜೋಳದ ತೆನೆಯ ಮೇಲೆ ಕೂರುವ ಚಿಕ್ಕ ಹಕ್ಕಿಯ ಮಾಂಸ.

೩೦. ಮಾಚ್ಛನಿ ಬೋಟಿ - ಮೀನಿನ ಮಾಂಸ

ಈ ರೀತಿಯಾಗಿ ಈ ಬುಡಕಟ್ಟಿನವರು ಎಲ್ಲಾ ಬಗೆಯ ಪಶು ಪಕ್ಷಿಗಳನ್ನು, ಮಾಂಸಹಾರವನ್ನಾಗಿ ಸೇವಿಸುತ್ತಿದ್ದು ಆನೆ, ಹಾವು, ಸಿಂಹ, ಕರಡಿ, ಹುಲಿ, ಕಾಗೆ, ಗರುಡ ಇತ್ಯಾದಿ ಪ್ರಾಣಿಯನ್ನು ಮಾತ್ರ ತಿಂದಿಲ್ಲವೆನ್ನುತ್ತಾರೆ.

ಹಕ್ಕಿಪಿಕ್ಕಿಯರು ತಿನ್ನುವ ಇತರೇ ತಿನಿಸುಗಳು

ಈ ಕೆಳಗೆ ವಿವರಿಸುವ ತಿನಿಸುಗಳನ್ನು ಹಕ್ಕಿಪಿಕ್ಕಿಯರು ವಿಶೇಷ ಅಡುಗೆಗಳು ಇಲ್ಲವೆ ತಿನಿಸುಗಳು ಎನ್ನಬಹುದು. ಯಾಕೆಂದರೆ ಅವರು ಕೆಲವು ಪದಾರ್ಥಗಳನ್ನು ಬೇಯಿಸದೆ ಅಂಥಹ ತಿನಿಸುಗಳಲ್ಲಿ ಕೆಲವನ್ನು ಈ ಕೆಳಗಿನಂತೆ ವಿವರಿಸಬಹುದಾಗಿದೆ.

೧ ಭಾಜಿನೋ ಪಿಟ್ಟು (ಸೊಪ್ಪಿನ ಮುದ್ದೆ): ಇದನ್ನು ಮೊದಲಿಗೆ ನೀರಿನಲ್ಲಿ ಚೆನ್ನಾಗಿ ಬೇಯಿಸುತ್ತಾರೆ. ಸಾಧ್ಯವಾದರೆ ಈರುಳ್ಳಿಯ ಚೂರುಗಳನ್ನು ಹಾಕುತ್ತಾರೆ. ಹಿಟ್ಟು ಹೆಚ್ಚು ಇತ್ತೆಂದರೆ ಅದರಿಂದ ಮುದ್ದೆ ಮಾಡುತ್ತಾರೆ. ಸ್ವಲ್ಪ ಉಪ್ಪನ್ನು ಹಾಕಿರುವ ಈ ಬಾಜಿನೋ ಪಿಟ್ಟು ಹಕ್ಕಿಪಿಕ್ಕಿಯರ ಒಂದು ವಿಶೇಷ ಅಡುಗೆಯಾಗಿದೆ. ಅವರ ಅಲೆಮಾರಿ ಜೀವನ ವ್ಯವಸ್ಥೆಯ ಮೇಲೆ ಇದು ಹೆಚ್ಚು ಪ್ರಭಾವವನ್ನು ಬೀರಿದೆ. ಸಾರು ಇಲ್ಲದೆಯೆ ಹಿಟ್ಟನ್ನು ತಿನ್ನುವ ಈ ಅಡುಗೆ ಅಷ್ಟೇ ರುಚಿಕಟ್ಟಾಗಿರುತ್ತದೆ ಮತ್ತು ಅಷ್ಟೇ ಅಧಿಕ ಪ್ರಮಾಣದ ಪೌಷ್ಟಿಕಾಂಶಗಳನ್ನು ಸಹ ಇದರಲ್ಲಿದೆ.

೨. ಗುಲ್ಲರ್‌ನೂ ಆಟೋ ಓಟ್ಟು ಕರೀನ್ ಖಾದ : ಹತ್ತಿಯ ಕಾಯಿಗಳನ್ನು ಆಯ್ದು ತಂದು ಎಲ್ಲವನ್ನು ಜಜ್ಜಿ ಒಣಗಿಸುತ್ತಾರೆ. ಆಮೇಲೆ ಒಣಗಿದ ಆ ಕಾಯಿಗಳನ್ನು ಕುಟ್ಟಿ ನಂತರ ಬೀಸೆಕಲ್ಲಿನಲ್ಲಿ ಬಿಸಿ ಮುದ್ದೆ ಇಲ್ಲವೇ ಗಂಜಿಯನ್ನು ಮಾಡಿ ಸೇವಿಸುತ್ತಾರೆ.

೩. ಖಿವಾಳಿ : ಇದು ಹಕ್ಕಿಪಿಕ್ಕಿಯರು ತಿನ್ನುವ ಒಂದು ವಿಶೇಷವಾದ ತಿನಿಸು. ಇದು ಗೋಧಿ ಅಕ್ಕಿ ಬೆಲ್ಲಗಳನ್ನು ಬೆರೆಸಿ ಸರಿಯಾಗಿ ಕಲಸಿ ಎಣ್ಣೆಯಲ್ಲಿ ಕರಿಯುತ್ತಾರೆ. ಖಿವಾಳಿ ಹಬ್ಬವೆಂದರೆ, ಅದು ಸಿಹಿ ಊಟದ ಹಬ್ಬವೇ ಆಗಿದೆ. ಇದಕ್ಕೆ ಕಜ್ಜಾಯವೆಂತಲೂ (ಕರ್ಜಿಕಾಯಿ ಎಂತಲೂ) ಕರೆಯುತ್ತಾರೆ. ಅವರವರ ಕುಲದೇವತೆಗಳಿಗಾಗಿ ಈ ಹಬ್ಬವನ್ನು ಮಾಡುತ್ತಾರೆ. ಕಡಾಯಿಯಲ್ಲಿ ಒಂಬತ್ತು ಕಜ್ಜಾಯಗಳನ್ನು ಇಟ್ಟು, ಕೆಳಗಡೆ ಉರಿಯನ್ನು ಹಾಕುತ್ತಾರೆ. ಈ ಹೊಸ ರೂಪದ ಒಲೆಯನ್ನು ಈ ತಿನಿಸು ಮಾಡಲಿಕ್ಕಾಗಿಯೇ ಮೂರು ಕಲ್ಲುಗಳನ್ನು ಹೂಡಿ ಇಟ್ಟಿರುತ್ತಾರೆ. ಈ ಒಲೆಯ ದೇವರ ಕಟ್ಟೆಯ ಮುಂದುಗಡೆಯೇ ಇದ್ದು 'ದೇವಾಯು' (ದೇವರು ಮೈ ಮೇಲೆ ಬಂದ ವ್ಯಕ್ತಿ) ಒಂಬತ್ತು ಕಜ್ಜಾಯಗಳನ್ನು ಕಡಾಯಿಯಿಂದ ತೆಗೆಯುತ್ತಾನೆ. ಈ ವ್ಯಕ್ತಿಯು ಸುಡುತ್ತಿರುವ ಎಣ್ಣೆ ಕಡಾಯಿಯಲ್ಲಿ ಯಾವುದೇ ಚಮಚೆಯ ಸಹಾಯವಿಲ್ಲದೇ ಬರಿ ಕೈಯಿಂದಲೇ ಆ ಕಜ್ಜಾಯಗಳನ್ನು ತೆಗೆಯುತ್ತಾನೆ. ವ್ಯಕ್ತಿಯ ಮೈಯಲ್ಲಿ ದೇವರು ಬಂದಿರುವುದರಿಂದ ಆ ವ್ಯಕ್ತಿಗೆ ಆ ಕ್ಷಣಕ್ಕೆ ಕೈಸುಡದೇ ಅವನು ಸುರಕ್ಷಿತನಾಗಿರುತ್ತಾನೆ. ಆದರೆ ಅದೇ ವ್ಯಕ್ತಿ ಖಾಲಿ ಸಮಯದಲ್ಲಿ (ಮೈ ಮೇಲೆ ದೇವರು ಬರದೆ ಇರುವಾಗ) ಈ ರೀತಿ ಮಾಡುವ ಆಗಿಲ್ಲ. ಅವಾಗ ಏನಾದರೂ ಅದೇ ರೀತಿಯಲ್ಲಿ ಸುಡುವ ಕಡಾಯಿಗೆ ಕೈ ಹಾಕಿದರೆ, ಅವನ ಕೈಯು ಸಂಪೂರ್ಣವಾಗಿ ಸುಟ್ಟು ಹೋಗುತ್ತದೆ. ಕಜ್ಜಾಯ ಮಾಡಿದ ಮರುದಿನ ಬೆಳಿಗ್ಗೆ ದೇವರು ಬರುತ್ತದೆಯಂತೆ ಅಪ್ಪಣೆ ಕೇಳಿದಾಗ ಆ ದೇವರು ಮುನಿಯುತ್ತದೆ. ನಂತರ ವಧಾಹೊ ಮಾಂಡವಾನು (ಮಾತನಾಡುತ್ತಾ ಇಡವುದು) ಮಾಡುತ್ತಾನೆ.

ಗುಲಗಂಜಿಯನ್ನು ಕೈಯ ಹಿಡಿಯಲ್ಲಿ ತೆಗೆದುಕೊಂಡು ಹಾಸಿಕೊಂಡ ಒಂದು ವಿಶೇಷ ಬಟ್ಟೆಯ ಪಟದ ಮೇಲೆ ಎಣಿಸುತ್ತಾ ಇಡುವ ಒಂದು ಶಾಸ್ತ್ರ ಇದಾಗಿದೆ. ಇದೆಲ್ಲಾ ಆದ ನಂತರವೇ ಖಿವಾಳಿಯನ್ನು ಎಲ್ಲರಿಗೂ ಹಂಚಿ ತಿನ್ನುತ್ತಾರೆ.

೪ ಮುಡಗಳ್ಳಿ ಹಣ್ಣು : ಇದನ್ನು ಹಕ್ಕಿಪಿಕ್ಕಿಯರು ಆಹಾರದೋಪಾದಿಯಲ್ಲಿ ತಿನ್ನುತ್ತಾರೆ. ಇದನ್ನು ತಿಂದರೆ ವಾಯಿರೋಗ ಬರುವುದಿಲ್ಲವೆಂಬುದು ಇವರ ನಂಬಿಕೆ. ಜೊತೆಗೆ ಎಷ್ಟೋ ಸಾರಿ ಆಹಾರದ ಅಭಾವದಿಂದಾಗಿ ಅನಿವಾರ್ಯವಾಗಿ ಇದನ್ನು ತಿನ್ನುತ್ತಾರೆ.

೫. ಹುಣಸೇ ಬೀಜ : ಇದನ್ನು ಒಂದು ಗರಂ ಬಿಸಿ ತಿನಿಸಿನಂತೆ ತಿನ್ನುತ್ತಾರೆ. ಈ ಹಕ್ಕಿಪಿಕ್ಕಿಯರು. ಹುಣಸೆ ಬೀಜ ಆಯ್ದು ತಂದು ಚೆನ್ನಾಗಿ ಹಂಚಿನಲ್ಲಿ ಬೀಜಗಳ ಮೇಲಿರುವ ಸಿಪ್ಪೆಯನ್ನೆಲ್ಲಾ ಬಿಟ್ಟು ಹೋಗುತ್ತದೆ. ಆಗ ಅದರೊಳಗಿನ ಬಿಳಿಯ ಹೋಳುಗಳನ್ನು ಹಸಿಯಾಗಿಯೇ ತಿನ್ನುತ್ತಾರೆ. ಇಲ್ಲವೇ ಮತ್ತೊಮ್ಮೆ ಹಂಚಿನ ಮೇಲೆ ಹಾಕಿ ಹುರಿದು ತಿನ್ನುತ್ತಾರೆ.

ಹೀಗೆ ಬಗೆಬಗೆಯ ಆಹಾರ ಪದ್ಧತಿಯನ್ನು ಹೊಂದಿರುವ ಹಕ್ಕಿಪಿಕ್ಕಿ (ಹಕ್ಕಿಪಿಕ್ಕಿ)ಯರಲ್ಲಿ ಆಹಾರದ ಬಗ್ಗೆ ಹತ್ತು ಹಲವು ನಿಯಮ ಅಥವಾ ಪದ್ಧತಿಗಳೂ ಇವೆ.

ಹಕ್ಕಿಪಿಕ್ಕಿಯರು ಅಲೆಮಾರಿಗಳು ಹಾಗೂ ಬಡವರೂ ಆಗಿರುವ ಕಾರಣ ಇವರು ಯಾವ ಆಹಾರ ಪದಾರ್ಥಗಳನ್ನು ಸಂಗ್ರಹಿಸುವುದಿಲ್ಲ. ಪುನರ್‌ವಸತಿ ಆಹಾರ ಕಾಯಂ ಆಗಿ ಉಳಿದು ಕೊಂಡಿರುವ ಊರುಗಳಲ್ಲಿ ಸಹ ಇವರೇನು ವರ್ಷಕ್ಕಾಗುವಷ್ಟು ಆಹಾರವನ್ನು ಒಟ್ಟಿಗೆ ಸಂಗ್ರಹಿಸಿಡುವುದಿಲ್ಲ. ಬಹುತೇಕ ಹಕ್ಕಿಪಿಕ್ಕಿಯರು 'ತಾಜಾ ರೋಜಗಾರಿ' ಎನ್ನುವಂತೆ ಅಂದಿನ ಅಡುಗೆಗೆ ಏನೇನು ಬೇಕೋ ಅದನ್ನು ಅಂದಂದೆ ಅಂಗಡಿಯಿಂದ ತೆಗೆದುಕೊಂಡು ಬಂದು ಬಿಡುತ್ತಾರೆ. ಹೀಗಾಗಿ ಅವರ ಆಹಾರಗಳು ತುಂಬಾ ಸರಳವಾಗಿರುತ್ತವೆ.

ಹಕ್ಕಿಪಿಕ್ಕಿಯರು ಆಹಾರಕ್ಕಾಗಿ ಬಳಸುವ ಸಾಮಗ್ರಿಗಳು

**'ಹಂಡಕಾ'** : ಎಂಬುದು ಅಡುಗೆ ಮಾಡಲು ಬಳಸುವ ಒಂದು ಮಡಿಕೆ. 'ಕುಂಡಿ' ಎಂಬುದು ಆಹಾರವನ್ನು ಒಬ್ಬೊಬ್ಬರು ತಿನ್ನಲು ಬಳಸುವ ಒಂದು ಸಾಮಗ್ರಿಯಾಗಿದೆ. ಮರದಿಂದ ಮಾಡಿದ ದೊಡ್ಡ ಹರಿವಾಣ, ಹಬ್ಬಹರಿದಿನಗಳಲ್ಲಿ ಆಯಾ ಪಂಗಡ ಹಿರಿಯರು ತಿನ್ನಲು ಬಳಸುತ್ತಿದ್ದರು. 'ಖಾಟುಕ್' ಎಂಬುದು ಹಬ್ಬದ ಊಟ ಮಾಡಲು ಬಳಸುವ ಪಾತ್ರೆ ಆಗಿದೆ. ಇದರಲ್ಲಿ ಮನೆಯವರೆಲ್ಲಾ ಸೇರಿ ಒಟ್ಟಿಗೆ ಊಟ ಮಾಡುತ್ತಾರೆ. ಸಿಲ್ವಾರ್ ಸ್ಟೀಲ್ ಅಲ್ಯುಮಿನಿಯಂನಂಥಹ ಆಧುನಿಕ ಸಾಮಗ್ರಿಗಳಿಂದ ಹಿಡಿದು ಮಡಿಕೆಯವರೆಗೆ, ಪ್ರೆಷರ್ ಕುಕ್ಕರ್‌ನಂಥಹ ಆಧುನಿಕ ಸಾಮಗ್ರಿಗಳನ್ನು ಬಳಸುತ್ತಾರೆ. ಚಟ್ನಿ, ಸಾರಿಗೇ ಖಾರ ಅರೆಯುವ ಸಲುವಾಗಿ ಗುಂಡಕಲ್ಲನ್ನು ಸಾಮುಹಿಕವಾಗಿ ಬಳಸುವುದು ಕಂಡು ಬಂತು. ಹಾಗೆಯೇ ಎಷ್ಟೋ ಮನೆಗಳಲ್ಲಿ ಆಧುನಿಕತೆಯ ಮಿಕ್ಸಿಯನ್ನು ಬಳಸುವುದು ಕಂಡುಬಂತು. ಕಟ್ಟಿಗೆಯಿಂದ ಉರಿಯುವ ಒಲೆಯಿಂದ ಹಿಡಿದು ಸೀಮೆಎಣ್ಣೆ ಸ್ಟವ್, ಇದ್ದಲಿನ ಒಲೆಗಳು, ಹಾಗೂ ಇತ್ತೀಚಿನ ಗ್ಯಾಸ್ ಸ್ಟವ್‌ಗಳು ಸಹ ಕೆಲವು ಕಡೆ ಬಳಕೆಯಾಗುತ್ತಿರುವುದು ಕಂಡುಬಂತು. ಹಾದಿಬದಿಯ ಹಲವು ಬಗೆಯ ಕುಳ್ಳು ಕಟ್ಟಿಗೆಗಳನ್ನು ಆಯ್ದು ತಂದು ಅಡುಗೆ ಮಾಡಿ ದಂತೆಯೇ ಸೀಮೆಎಣ್ಣೆ ಸ್ಟವ್‌ಗಳನ್ನು ಹಲವು ಬಗೆಯ ತಂತ್ರಗಳಿಂದ ಬೇಗ ಅಡುಗೆ ಆಗುವಂತೆ ಮಾಡಿಕೊಂಡಿರುತ್ತಾರೆ. ಅಡುಗೆ ಕೋಣೆಯಲ್ಲಿಯ ಗೋಡೆಗೆ ಹತ್ತು ಅಡಿಗಳಷ್ಟು ಎತ್ತರದಲ್ಲಿ ಪ್ಲಾಸ್ಟಿಕ್ ಕ್ಯಾನೊಂದರಲ್ಲಿ ಸೀಮೆಎಣ್ಣೆಯನ್ನು ತುಂಬಿಸಿಟ್ಟು ನೆಲದ ಮೇಲೆ ಇಟ್ಟಿರುತ್ತಾರೆ. ಇದರಿಂದ ಎಣ್ಣೆ ಒತ್ತಡ ಹೆಚ್ಚಾಗಿರುವುದರಿಂದ ಅಡುಗೆ ಬೇಗನೆ ಆಗುತ್ತದೆ.

**ಆಹಾರ ಪಾನೀಯಗಳು:** ನಿತ್ಯೋಪಯೋಗಳಾಗಿ ಬೆಳಿಗ್ಗೆ ೮-೯ ರೊಳಗೆ ಮುದ್ದೆ ಸೊಪ್ಪಿನ ಸಾರು ಅಥವಾ ಚಟ್ನಿಯೊಂದಿಗೆ ಊಟ ಮುಗಿಸುತ್ತಾರೆ. ಚಟ್ನಿಯಲ್ಲಿ ಇವರಿಗೆ ಧಿಡೀರ್ ಚಟ್ನಿಗಳು ಇಷ್ಟ. ಅದು ಟೊಮೆಟೊ, ಹಸಿಮೆಣಸಿನ ಕಾಯಿಯನ್ನು ಒಲೆಯಲ್ಲಿರುವ ಕೆಂಡದಲ್ಲಿ ಸುಟ್ಟು, ಕೈಯಿಂದ ಕಿವುಚುವುದು. ಇಲ್ಲವೇ ಒಂದು ಚಿಕ್ಕದಾದ ಪಾತ್ರೆಯಲ್ಲಿ, ಮುದ್ದೆಕೂಡಿಸುವ ಕೋಲಿನಿಂದ ಕುಟ್ಟಿ-ಕುಟ್ಟಿ ಉಪ್ಪುಬೆರೆಸಿ ಮುದ್ದೆಗಾಗಿ ತಯಾರಿಸಿಕೊಳ್ಳುತ್ತಾರೆ. ಮಧ್ಯಾಹ್ನದ ಊಟ ಎಲ್ಲರೂ ಮಾಡುವುದಿಲ್ಲ. ಮತ್ತೆ ಸಂಜೆ ೬-೭ಕ್ಕೆ ರಾತ್ರಿಯೂಟ. ಬೆಳಗ್ಗೆ ೬-೫ ಗಂಟೆಗೆ

ಬೇಟೆಗೆ ಹೊರಟು ಬೇಗ ಮರಳಿ ಬಂದರೆ, ಬೆಳಿಗ್ಗೆಯ ಅಡಿಗೆಯೊಂದಿಗೆ ಮಾಂಸದ ಸಾರು ತಯಾರಾಗುತ್ತದೆ. ಇಲ್ಲವಾದರೆ ಸಂಜೆಗೇ ಮಾಂಸದೂಟ ತಯಾರಾಗಿ ಬಿಡುತ್ತದೆ.

ಮಾಂಸದಡಿಗೆಗೆ ಬೇಟೆ ಸಿಗದಿದ್ದಾಗ ವಿವಿಧ ಸೊಪ್ಪುಗಳನ್ನೆ ಉಪಯೋಗಿಸಿ ಹುಳಿಸಾರು ಮಾಡುತ್ತಾರೆ. ಅನ್ನದೂಟ ಬಹಳ ಕಡಿಮೆ.

**ಇತರೆ ಆಹಾರ :** ಮೀನುಶಿಕಾರಿಯನ್ನು ಮಾಡುತ್ತಾರೆ. ಒಂದು ಬಗೆಯ ಸೊಪ್ಪನ್ನು ಸಾರಲ್ಲಿ ಕಿವುಚಿ ಎಸೆದರೆ, ಆ ನಿಂತ ನೀರಲ್ಲಿರುವ ಮೀನುಗಳು ಪ್ರಜ್ಞಾಶೂನ್ಯರಾಗಿ ಮೇಲೆ ತೇಲುತ್ತವೆ. ಆಗ ಅವುಗಳನ್ನು ತಂದು ಅಡಿಗೆಗೆ ಉಪಯೋಗಿಸುತ್ತಾರೆ. ಬರಗಾಲದಲ್ಲಿ ಪಾಪಸ್‌ಕಳ್ಳಿಯ ಹಣ್ಣಾದ ಕೆಂಪುಕಾಯಿಗಳನ್ನೇ ತಿಂದು ಬದುಕಿದ್ದುದಿದೆ ಎನ್ನುತ್ತಾರೆ. ಅಸ್ತಾಪನಹಳ್ಳಿ ವಾಸಿ ಚಲ್ಕಾಬ, ಶಣ್ಮಾರಿ, ಶಿವಂಗು.

**ಪಾನೀಯಗಳು:** ಹಕ್ಕಿಪಿಕ್ಕಿಯರು ಸಂಜೆಯಾಗುತ್ತಲೂ ಸೇಂದಿಯನ್ನು ಕುಡಿಯಲು ಕುಟುಂಬದ ಹಿರಿಯರೊಂದಿಗೆ ಮದುವೆಯಾದ ಗಂಡು ಹೆಣ್ಣುಗಳು ಹುಡುಕಿಕೊಂಡು ಹೋಗುವುದುಂಟು. ಇಡೀ ದಿನದ ದಣಿವು ಸಂಜೆ ಕುಡಿತ ಊಟದೊಂದಿಗೆ ಕೊನೆಗೊಳ್ಳುತ್ತದೆ. ಇತ್ತೀಚಿನವರು ಸರಾಯಿ ಬ್ರಾಂಡಿ ಬೀರುಗಳನ್ನು ಉಪಯೋಗಿಸುತ್ತಾರೆ.

**ಆಹಾರ ಪಾನೀಯಗಳ ವಿಧಿ ನಿಷೇಧಗಳು ಮತ್ತು ಸಂದರ್ಭಗಳು:** ಆಹಾರಪಾನೀಯಗಳು ಎಲ್ಲಾ ಸಾಮಾನ್ಯ ಸಂದರ್ಭಗಳಲ್ಲೂ ಉಪಯೋಗಿಸುತ್ತಾರೆ. ವಿಶೇಷ ಸಂದರ್ಭ ಎಂದರೆ ಹಬ್ಬಹರಿದಿನಗಳಲ್ಲೇ ಬಳಸಬೇಕೆಂದಿಲ್ಲ. ಅಲೆಮಾರಿ ಬುಡಕಟ್ಟು ಜನಾಂಗದ ಗಂಡು ಹೆಣ್ಣುಗಳ ಆಹಾರ ಪಾನೀಯಗಳನ್ನು ಒಟ್ಟಾರೆ ಬಳಸುತ್ತಾರೆ. ಆದರೆ ಕೆಲವು ಪಂಗಡಗಳಲ್ಲಿ ನಿಷೇಧಗಳನ್ನು ಕಾಣಬಹುದು. ಗುಜರಾತ್ಯೋ ಹೆಣ್ಣುಮಗಳು ಅಥವಾ ಸೊಸೆಯಾದವಳು ಸಾರಾಯಿ ಉಪಯೋಗಿಸುವಂತಿಲ್ಲ. ಏಕೆಂದರೆ ದೇವಿಯು ದೈತ್ಯರನ್ನು ಸಂಹರಿಸುವಾಗ ಮಧುಪಾನ ಮಾಡಿದ್ದಾಳೆಂಬ ನಂಬಿಕೆ ಹಕ್ಕಿಪಿಕ್ಕಿಯರಲ್ಲಿದೆ.

**ಆಹಾರ ತಯಾರಿಕೆ ಕ್ರಮ:** ಹಕ್ಕಿಪಿಕ್ಕಿಯರು ಆಹಾರದಲ್ಲಿ ಸಸ್ಯಾಹಾರಿ, ಮಾಂಸಹಾರ ಮತ್ತು ಸಿಹಿಯೂಟವನ್ನು ತಯಾರಿಸುತ್ತಾರೆ. ಸಸ್ಯಾಹಾರದಲ್ಲಿ ವಿವಿಧ ಬಗೆಯ ಸೊಪ್ಪಿನ ಸಾರನ್ನು ತಯಾರಿಸಿ ಮುದ್ದೆಗಳೊಂದಿಗೆ ಸೇವಿಸುತ್ತಾರೆ. ಈ ಮುದ್ದೆಗಳಲ್ಲಿ ಹಲವಾರುವಿಧಗಳಿವೆ. ೧. ಬರೀ ರಾಗಿ ಜೋಳ, ಮುಸುಕಿನ ಜೋಳದ ಹಿಟ್ಟಿನ ಮುದ್ದೆ, ನೀರನ್ನು ಚೆನ್ನಾಗಿ ಕುದಿಸಿ ಹಿಟ್ಟನ್ನು ಹಾಕಿ ಚೆನ್ನಾಗಿ ಕಲೆಸಿ ಸ್ವಲ್ಪ ತೆಳುವಿನೊಂದಿಗೆ ಮುದ್ದೆಯನ್ನು ಕಟ್ಟಿ, ಬಿಸಿಬಿಸಿಯಾಗಿ ಉಣ್ಣುವರು. ೨. ಅಕ್ಕಿಯ ನುಚ್ಚನ್ನು ಹೆಚ್ಚು ನೀರಲ್ಲಿ ಬೇಯಿಸಿ, ಸ್ವಲ್ಪ ಹಿಟ್ಟನಬು ಹಾಕಿ ತಯಾರಿಸಿದ ಮುದ್ದೆ ೩. ಸೊಪ್ಪನ್ನು ಚೆನ್ನಾಗಿ ಬೇಯಿಸಿ ಕೊಲಲ್ಲಿ ಅರೆದು ರಾಗಿ ಹಿಟ್ಟನ್ನು ಹಾಕಿ ಮಾಡಿದ ಮುದ್ದೆ. ೪. ಬರೀ ನುಚ್ಚಕ್ಕಿನ್ನೇ ಹಾಕಿ ಬೆಂದ ಮೇಲೆ ದೊಡ್ಡ ಉಂಡೆಗಳನ್ನು ಕಟ್ಟಿದ ಮುದ್ದೆ ೫. ಮುದ್ದೆಯಲ್ಲಿ ಗುಲ್ಹುರ್(ಅತ್ತಿಕಾಯಿ)ನಿಂದ ಮಾಡಿದ ಮುದ್ದೆಯಾಗುವುದುಂಟು. ಅತ್ತಿಮರದ ಹಸಿ ಕಾಯಿಗಳನ್ನು ಕಿತ್ತು ತಂದು ಚೆನ್ನಾಗಿ ಬಿಸಿಲಿನಲ್ಲಿ ಬಚ್ಚಿ ಒಣಗಿಸಿ,

ಬೀಸುವಕಲ್ಲಿನಿಂದ ಬೀಸಿ ಮುದ್ದೆಮಾಡುವುದುಂಟು. ಉಪಯೋಗಿಸಬಹುದಾದ ಎಲ್ಲಾ ಸೊಪ್ಪು ತರಕಾರಿಗಳನ್ನು ಹಸಿಯಾಗಿ ತಿನ್ನಲು ಹಾಗೂ ಪಲ್ಯ ಸಾಂಬಾರಿಗೂ ಬಳಸುತ್ತಾರೆ.

ಅನ್ನವನ್ನು ಹೆಚ್ಚಾಗಿ ಬಳಸುತ್ತಿರಲಿಲ್ಲ. ಅದು ಬರಿಹಬ್ಬಕ್ಕೆ ಮಾತ್ರ ಮೀಸಲಿರುತ್ತಿತ್ತು. ರೊಟ್ಟಿಯಡುಗೆ ಸೊಪ್ಪಿನ ಪಲ್ಯದೊಂದಿಗೆ ರಾಗಿ-ಹಿಟ್ಟು ಜೋಳದ ಹಿಟ್ಟು ಮುಸುಕಿನ ಜೋಳದ ಹಿಟ್ಟುಗಳಿಂದ ರೊಟ್ಟಿಯನ್ನು ಮಾಡಿ ಸೇವಿಸುತ್ತಾರೆ.

**ಪಕ್ಷಿಗಳ ಮಾಂಸದಡುಗೆ:** ಶಿಕಾರಿಮಾಡುವಲ್ಲಿ ಅತ್ಯಂತ ನಿಪುಣತೆ ಹೊಂದಿದ ಹಕ್ಕಿಪಿಕ್ಕಿಗಳು ಮೇಲು ಶಿಕಾರಿಗರೆಂದು ಹೆಸರಾಗಿದ್ದಾರೆ. ಸಾಮಾನ್ಯವಾಗಿ ಹಕ್ಕಿಪಿಕ್ಕಿಯರು ಬಳಸುವ ವಿವಿಧ ಬಗೆಯ ಆಹಾರ ಪದಾರ್ಥಗಳನ್ನು ಬೇರಾವ ಜನಾಂಗವೂ ಉಪಯೋಗಿಸಲಾರರು.

ಶಿಕಾರಿಗೆ ಹೋದವರಿಗೆ ತಡವಾಗಿ ಶಿಕಾರಿಯಾದರೆ ಆತನು ತನ್ನ ಹಸಿವನ್ನು ನೀಗಿಸಿಕೊಳ್ಳಲು ಚಿಕ್ಕಪ್ರಾಣಿಯನ್ನೇ, ಪಕ್ಷಿಯನ್ನೋ ಸುಟ್ಟು ತಿನ್ನುವುದುಂಟು. ಹೀಗೆ ಸುಟ್ಟು ತಿನ್ನುವ ಮಾಂಸದಲ್ಲಿ ಬಹಳ ಪೌಷ್ಟಿಕಾಂಶವೂ, ರುಚಿಕರವೂ ಇರುತ್ತದೆ.

**ಆಹಾರ ಪಾನೀಯಗಳ ರಕ್ಷಣೆ:** ಹಕ್ಕಿಪಿಕ್ಕಿಯರು ತಮ್ಮ ಜೀವಿತವನ್ನೆಲ್ಲ ಅಲೆಮಾರಿತನ ದಲ್ಲೇ ಕಳೆಯುವುದರಿಂದ ಯಾವುದನ್ನೂ ಸಂಗ್ರಹಿಸುವ ಗೋಜಿಗೆ ಹೋಗುವುದಿಲ್ಲ. ಹಾಗಾಗಿ ಅವುಗಳ ರಕ್ಷಣೆಯ ಅಗತ್ಯತೆಯ ಇಲ್ಲ, ಅಂದಿನ ಜೀವನಕ್ಕಾಗುವಷ್ಟು ದುಡಿಮೆ ಶಿಕಾರಿ ಸಿಕ್ಕರೆ ಸಾಕು, ನಾಳೆಯದಕ್ಕೆ ದೇವರಿದ್ದಾನೆ. ಕೈಕಾಲು ಕೊಟ್ಟಿದ್ದಾನಲ್ಲ? ದುಡಿದು ತಿನ್ನಲಿಕ್ಕೇನು ರೋಗ ಅಂದು ಬಿಡುತ್ತಾರೆ.

**ಆಹಾರ ಪಾನೀಯಗಳ ಆಚರಣೆ ಸಂದರ್ಭಗಳು:** ಸಾಮಾನ್ಯ ಬಳಕೆಗಿಂತ ಹೆಚ್ಚಾಗಿ ಬಳಸುವ ಸಂದರ್ಭವೆಂದರೆ ಹಬ್ಬಗಳಲ್ಲಿ, ಮಗು ಹುಟ್ಟಿ ಮೂರುದಿನದ ನಂತರ ಛಟ್ಟಿದೇವಿಯನ್ನು ಪೂಜಿಸುವಾಗ, ಹೆಣ್ಣು ಋತುಮತಿಯಾದ ನಂತರ ಮಡಿತುಂಬುವ ಸಂದರ್ಭದಲ್ಲಿ, ಮದುವೆ ಗಳಲ್ಲಿ (ವ್ಯಹ) ಕೂಡಾವಳಿ (ಪಾಟ್) ಮಗನ ಮೊದಲ ದುಡಿಮೆ ಕೈಗೆ ಬಂದಾಗ, ಹಾಗೂ ಸತ್ತಾಗ ಮಣ್ಣುಮಾಡಿದ ನಂತರ ಬಂದವರೆಲ್ಲರಿಗೂ ಮದ್ಯಪಾನದಿಂದ ಕೈತೊಳೆಸಿ, ಕುಡಿಯಲು ಕೊಡುತ್ತಾರೆ. (ತಿಥಿ) ಕೂಳನ್ನು ಹಾಕುವಾಗಲು ಯಾರು ಆಚರಣೆಯಲ್ಲಿರುತ್ತಾರೋ ಅವರೆ ಎಲ್ಲಾ ಖರ್ಚನ್ನು ಭರಿಸಬೇಕಾಗುತ್ತದೆ.

ಹಕ್ಕಿಪಿಕ್ಕಿಯರ ವೇಷ ಭೂಷಣಗಳು

**ಉಡುಗೆ:** ತುಂಬಾ ಸರಳರು ಹಕ್ಕಿಪಿಕ್ಕಿಯರಲ್ಲಿ ಉಡುಗೆಗೆ ಹಿಂದಿನವರು ಪ್ರಾಧಾನ್ಯತೆ ಕೊಟ್ಟಿಂತಿಲ್ಲ. ಗಂಡು ತಲೆಗೆ ಬಾಲದ ಪೇಟ, ಮುಂಡಾಸು ಸೊಂಟದ ಬಳಿ ಕಟ್ಟಿಕೊಂಡ ಕಾಥೋ (ಚುಟ್ಟಾ ಸೇದುವ ಸಾಮಾಗ್ರಿ, ಚಕಮುಕಿ ಕಲ್ಲು, ಬೆಂಕಿಯನ್ನು ಹೊತ್ತಿಸಲು ಬೇಕಾದ ಕಪ್ ಅಂದರೆ ಜೊಂಡನ ಮತ್ತು ಇದ್ದಿಲು ಮಿಶ್ರಿತ. ಮತ್ತು ಚಿಕ್ಕ ಆರ) ಉದ್ದನೆಯ ಲಂಗೋಟಿಯಲ್ಲೇ ಇದ್ದು ಬಿಡುತ್ತಿದ್ದ. ಕಾಲಕ್ರಮೇಣ ಸೀರೆಯೊಂದನ್ನು ಕೊಂಡರೆ ನಾಲ್ಕು ತುಂಡು ಮಾಡಿ, ಒಂದನ್ನು ಪಿಥೋಡಿಯಂತೆಯೂ ಇನೊಂದನ್ನು ತಲೆಗೆ ಮುಂಡಾಸಿನಂತೆ ಸುತ್ತಿಕೊಳ್ಳುತ್ತಿದ್ದರು. ಅದರ ನಂತರದಲ್ಲಿ ಗಂಡು ಹೆಣ್ಣಿನ ಸೀರೆಯನ್ನರಿ ತಲೆಗೆ ಸುತ್ತಿಕೊಳ್ಳು

ಬೇಕೆಂದು ಹೊಸ ದೊಡ್ಡದುಪ್ಪಟದಂಥ ಖಾಕಿ ಬಟ್ಟೆಯನ್ನು ಕೊಂಡು ಮೈಮೇಲೆ ಹೊದ್ದು ಕೊಳ್ಳುತ್ತಿದ್ದ. ಹೀಗೆ ಬರಬರುತ್ತ ಊರು ಕೇರಿಗಳಲ್ಲಿ ಬಳಸುವಂಥ ಉಡುಗೆಗಳನ್ನು ಆತನ ಮುಂದಿನ ಪೀಳಿಗೆಯವರು ಬಳಸತೊಡಗಿದು.

ಮಕ್ಕಳಲ್ಲಿ ಗಂಡುಮಗುವಿಗೆ ಮಾನಮುಚ್ಚಲು ಲಂಗೋಟಿಯನ್ನು ಹಾಕಿಬಿಟ್ಟರಾಯಿತು. ಐದು ವರ್ಷದೊಳಗಿನ ಮಕ್ಕಳಿಗೆ ಅದೂ ಇರಲಿಲ್ಲ. ನಂತರದಲ್ಲಿ ಮೇಲಂಗಿ ಲಂಗೋಟಿ ಬಂತು ಆನಂತರ ಮೇಲಂಗಿ ಚಡ್ಡಿಗಳನ್ನು ಬಳಸತೊಡಗಿದರು. ಹೆಣ್ಣುಮಗಳಿಗೂ ಇದೇ ರೀತಿ, ಐದುವರ್ಷದ ಒಳಗಿನವರಾದರೆ ಕೈಯಿಂದ ಹೊಲೆದ ಲಂಗವನ್ನು ಸೊಂಟಕ್ಕೆ ಕಟ್ಟಿಬಿಡುತ್ತಿದ್ದರು. ಐದುವರ್ಷದ ನಂತರ ಸೆರಗನ್ನು ತಲೆಯ ಮೇಲಿಂದ ಹೊದ್ದು ಮೈಮುಚ್ಚಿ ಕೊಳ್ಳಬೇಕಾಗಿತ್ತು. ನಂತರದಲ್ಲಿ ರವಿಕೆ(ಕುಪ್ಪಸ)ಗಳನ್ನು ಉಪಯೋಗಿಸಲಾರಂಭಿಸಿದರು. ಹೀಗಿರಲು ಕಾರಣ ಅವರ ಬಡ ಆರ್ಥಿಕ ಪರಿಸ್ಥಿತಿಯೇ ಕಾರಣ. ನಂತರ ಉಡುಪುಗಳನ್ನು ಬಳಸಲಾರಂಭಿಸಿದರು.

ಹೆಣ್ಣು ಗಂಡ ಕೊಟ್ಟಂತಹ ಎರಡು ಹಳೆಯ ಸೀರೆ (ಬೋರೆವಾಲ್)ಯಲ್ಲಿ ಒಂದನ್ನು ತಾನೇ ಲಂಗದಂತೆ ಹೊಲಿದುಕೊಂಡು ಇನ್ನೊಂದನ್ನು ಸೆರಗಿನಂತೆ ಮೈಗೆ ಸುತ್ತಿಕೊತ್ತಿದ್ದಳು. ನಂತರದಲ್ಲಿ ಬೇರೆ ಹೆಣ್ಣುಗಳಂತೆ ರವಿಕೆ ತೊಡಲಾರಂಭಿಸಿದಳು. ಮಕ್ಕಳ ತಾಯಿಯಾದರೆ ಸೆರಗನ್ನೇ ಜೋಗುಳದ ರೀತಿ ಕಟ್ಟಿಕೊಂಡು ಮಗುವನ್ನು ಅದರಲ್ಲಿ ಮಲಗಿಸಿಯೋ, ಕೂರಿಸಿಯೋ, ಊರೂರಲ್ಲಿ, ವ್ಯಾಪಾರಕ್ಕಾಗಿಯೋ, ಭಿಕ್ಷೆಗಾಗಿಯೋ ಹೋಗುವುದು ಸರ್ವೇ ಸಾಮಾನ್ಯವಾಗಿ ಬಿಟ್ಟಿತು. ಈಗಿನ ಹೆಣ್ಣುಮಕ್ಕಳು ಎಲ್ಲ ವಿಧದ ಉಡುಗೆಗಳನ್ನು ಧರಿಸುತ್ತಾರೆ.

ಹಕ್ಕಿಪಿಕ್ಕಿಯರಲ್ಲಿ ಉಡುಗೆ ತೊಡುಗೆ ವೇಷಭೂಷಣಗಳು ಇತರ ಬುಡಕಟ್ಟುಗಳ ರೀತಿಯಲ್ಲಿ ಒಂದೇ ನಿಗದಿತ ಚೌಕಟ್ಟಿಗೆ ಒಳಗಾಗಿರುವದಿಲ್ಲ. ಏಕೆಂದರೆ ಅವರ ಅಲೆಮಾರಿ ಜೀವನದೊಂದಿಗೆ ಅವರನ್ನು ಕಿತ್ತು ತಿನ್ನುವ ಬಡತನವೂ ಕಾರಣವಾಗಿದೆ. ಇವರಲ್ಲಿ ವಯಸ್ಸು, ಲಿಂಗ, ಮತ್ತು ಸಂದರ್ಭಗಳಿಗನುಸಾರವಾಗಿ ಅವರ ವೇಷಭೂಷಣಗಳು ಬದಲಾಗು ತ್ತಿರುತ್ತವೆ. ಇವರು ಕಾಡಿಗೆ ಬೇಟೆಗೆ ಹೋಗುವಾಗ ಗಂಡಸರು ಕೇವಲ ಕಚ್ಚೆ, (ಪಿಚ್ಚೊಡಿ) ಯನ್ನಷ್ಟೇ ಧರಿಸಿರುತ್ತಾರೆ. ಆದರೆ ಪಟ್ಟಣಗಳಿಗೆ ಹೋಗುವಾಗ, ಅವರು ಪ್ಯಾಂಟು ಹಾಗೂ ಅಂಗಿಗಳನ್ನು ಧರಿಸುತ್ತಾರೆ. ಮದುವೆ ಮತ್ತು ಇತರೇ ವಿಶೇಷ ಸಂದರ್ಭಗಳಲ್ಲಿ ಕುಡುತಾ (ಅಂಗಿ), ರುಮಾಲು, ಪಂಚೆ ಮುಂತಾದವುಗಳನ್ನು ಉಡುಗೊರೆಯಾಗಿ ಧರಿಸಿಕೊಳ್ಳುತ್ತಾರೆ.

ದೇವರನ್ನು ಪೂಜಿಸುವಾಗ ದಪ್ಪನೆಯ ಕೆಂಪು ಬಣ್ಣದ ಬಟ್ಟೆಯನ್ನು ಸ್ಕರ್ಟ್ ರೀತಿಯಲ್ಲಿ ಧರಿಸುತ್ತಾರೆ. ಇದಕ್ಕೆ ಅವರು "ದೇ....ರ್‍ನೋ" ದೇವೀನುಚರ್‍ನೋ ಎಂತಲೂ ಹೇಳುತ್ತಾರೆ. ಈ ಘಾಗರೋ ತೊಟ್ಟಿರುವಾಗ ಸೊಂಟಕ್ಕೆ ಗೆಜ್ಜೆ ಪಟ್ಟಿಯನ್ನು ಕಟ್ಟಕೊಂಡಿರುತ್ತಾರೆ. ಗಂಡಸರಿಗೆ ದೇವರ ಜಡೆ ಇರುವದರಿಂದ ಅದು ಮೇಲೆ ಕಾಣದಂತೆ ತಲೆಗೆ ಟವೆಲನ್ನು ಸುತ್ತಿಕೊಳ್ಳುತ್ತಾರೆ. ಬಾಂಬೆ ಗೋವಾ ಮತ್ತು ಇತರೇ ಕಡೆ ಪ್ರವಾಸ ಮತ್ತು ದೊಡ್ಡ ನಗರಗಳ ಸಂಪರ್ಕ ಇರುವ ಹಕ್ಕಿಪಿಕ್ಕಿಯರು Ding Dong ಚೆಡ್ಡಿಗಳನ್ನು ಹಾಗೂ Discoshirtಗಳನ್ನು

ಧರಿಸುತ್ತಾರೆ. ಜೊತೆಗೆ ಬಗೆಬಗೆಯ ಬಣ್ಣದ ಅಂಗಿಗಳನ್ನು ಹಾಗೂ ಕೇವಲ ಬನಿಯನ್‌ಗಳನ್ನು ಧರಿಸಿ ಇವರು ಇರುತ್ತಾರೆ.

ಇವರಲ್ಲಿ ಬಹುತೇಕರ ವೇಷಭೂಷಣಗಳು ರಂಗು ರಂಗಿನಿಂದ ಕೂಡಿರುವದರ ಜೊತೆಗೆ ಇವರು ಸಿನೆಮಾ ನಟನಟಿಯರನ್ನು ಅನುಕರಣೆ ಹೆಚ್ಚು ಮಾಡುತ್ತಾರೆ.

ಹಿಂದಿನ ಕಾಲದ ತೀರಾ ಬಡತನದ ಪರಿಸ್ಥಿತಿಯಲ್ಲಿ ಹಕ್ಕಿಪಿಕ್ಕಿ ಹೆಣ್ಣಿಗೆ ಒಂದು ಸೀರೆಯನ್ನು ಕೊಟ್ಟರೆ ಅದನ್ನು ಅವಳು ನಾಲ್ಕು ತುಂಡುಗಳನ್ನಾಗಿ ಮಾಡಿಕೊಂಡು ಒಂದು ತುಂಡನ್ನು (ಘಾಗ್ರೊ) ಲಂಗವನ್ನಾಗಿ ಸೊಂಟದ ಕೆಳ ಭಾಗಕ್ಕೆ, ಇನ್ನೊಂದು ತುಂಡನ್ನು ಎದೆಗೆ ಜಾಕೆಟ್ ಮೇಲೆ ಸೆರಗಾಗಿ (ಕಾಂಚಲಿ), ಮೂರನೆಯ ತುಂಡನ್ನು ಹಣೆ ಸೇರಿದಂತೆ ತಲೆಗೆ ರುಂಬಾಲು ಹಾಕಿ ಲಂಗೋಟಿಗಾಗಿ ಗಂಡು ಕಟ್ಟಿಕೊಳ್ಳುತ್ತಾನೆ. ಉಳಿದ ಕೊನೆಯ ತುಂಡನ್ನು ಮಗುವಿಗೆ ಹೋರುವ ಜೋಳಿಗೆಯನ್ನಾಗಿ ಬಳಸುತ್ತಾರೆ. ಈಗಲೂ ಬಾಣಂತಿ ಯರು ಸಹ ಇತರರ ರೀತಿ ಸೀರೆ ಕುಪ್ಪಸ ತೊಟ್ಟರೂ ಸಹ ಕೊನೆಯ ತುಂಡನ್ನು ಹಾಗೆಯೇ ಉಳಿಸಿಕೊಂಡಿರುತ್ತಾಳೆ. ಮಗುವಿಗೆ ಜೋಳಿಗೆಯಲ್ಲಿ ಹಾಕಿಕೊಂಡು ಅಲೆಯುವ ಈ ಪದ್ಧತಿಯು ಕೇವಲ ಹಕ್ಕಿಪಿಕ್ಕಿಯರಲ್ಲಿ ಮಾತ್ರವೇ ಇರದೆ ಇದು ಬಹುತೇಕ ಅಲೆಮಾರಿ ಜನರಲ್ಲಿ ಚಾಲ್ತಿಯಲ್ಲಿರುವ ಪದ್ಧತಿಯಾಗಿದೆ. ಈ ಜೋಳಿಗೆಯ ಮುಖ್ಯ ಉದ್ದೇಶವೇ ಭಾರವನ್ನು (ತಾವು ಹೋರುವ) ಕಡಿಮೆ ಮಾಡುವದಾಗಿದೆ. ಹಿಂದಿನ ದಿನಗಳಲ್ಲಿ ಹೆಣ್ಣು ಮಕ್ಕಳು ತಮ್ಮ ಲಂಗವನ್ನು ತಾವೇ ಹೊಲಿದುಕೊಳ್ಳುತ್ತಿದ್ದರು. ಎದೆಗೆ ಕೇವಲ ಜಾಕಿಟ್ ಅಷ್ಟೇ ಇರುತ್ತದೆ. ಇತ್ತೀಚಿನ ಹೆಣ್ಣು ಮಕ್ಕಳು ಮೇಲೆ ಸೆರಗನ್ನು (ದಾವಣಿ) ಹಾಕಿಕೊಳ್ಳುತ್ತಾರೆ. ಸೆರಗಿನ ವಿಷಯದಲ್ಲಿ ಹೆಣ್ಣುಮಕ್ಕಳು ಹೆಚ್ಚು ತಲೆ ಕೆಡಿಸಿಕೊಳ್ಳುವುದಿಲ್ಲ. ಇತ್ತೀಚಿನ ಹಕ್ಕಿಪಿಕ್ಕಿ ಹೆಣ್ಣು ಮಕ್ಕಳು ನೈಟಿಯನ್ನು ತುಂಬಾನೇ ಧರಿಸುತ್ತಿದ್ದಾರೆ. ಜೊತೆಗೆ ಬಣ್ಣ ಬಣ್ಣದ ಸೀರೆ ಗಳನ್ನು ಉಡುತ್ತಿದ್ದಾರೆ.

ಬಹುತೇಕ ಚಿಕ್ಕ ಮಕ್ಕಳು ಬೆತ್ತಲೆಯಾಗೇ ಇರುತ್ತವೆ. ಶಾಲೆಗೆ ಹೋಗುವ ಮಕ್ಕಳು ಮಾತ್ರ ಅಂಗಿ ಚೆಡ್ಡಿಯನ್ನು ಹಾಕಿಕೊಳ್ಳುತ್ತಾರೆ.

ಸಮಾಜ ಕಲ್ಯಾಣ ಇಲಾಖೆಯ ಗಿರಿಜನ ಉಪಯೋಜನೆ ಅಡಿಯಲ್ಲಿ (TSP) ಶಾಲಾ ಮಕ್ಕಳಿಗೆ ಪುಕ್ಕಟೆಯಾಗಿ ಉಡುಪುಗಳನ್ನು ಹಾಗೂ ಇನ್ನೂ ಕೆಲವು ಸವಲತ್ತುಗಳನ್ನು ಒದಗಿಸಲಾಗಿದೆ.

ಹಕ್ಕಿಪಿಕ್ಕಿಯರು ಉಡುಪುಗಳಲ್ಲಿ ಹೇಗೆ ಸರಳರೋ ಹಾಗೆಯೇ ಅವರು ತೊಡುವ ಆಭರಣಗಳಲ್ಲಿಯು ಅವರು ಸರಳರೇ. ಹೆಚ್ಚಿನ ಸಂಖ್ಯೆಯ ಪುರುಷರು ಆಭರಣಗಳನ್ನು ಧರಿಸುವುದಿಲ್ಲ. ಆದರೆ ಬಿಸಿ ರಕ್ತದ ಯುವಕರು ಮಾತ್ರ ಕೊರಳಿಗೆ ಮೂರು ಹವಳನ್ನು ಪೋಣಿಸಿದ ಸರವನ್ನು ಹಾಕಿಕೊಳ್ಳುತ್ತಾರೆ. ಹಾಗೆಯೇ ಹಣೆ, ಎದೆಯ ಬಲ ಮತ್ತು ಎಡ ಭಾಗಕ್ಕೆ ಕೈಯ ಎಡ ಮತ್ತು ಬಲಭಾಗಕ್ಕೆ ಹಚ್ಚೆಯನ್ನು ಹಾಕಿಸಿಕೊಳ್ಳುತ್ತಾರೆ. ಕೆಲವು ಗಂಡಸರು ತಮ್ಮ ಕಿವಿಗಳಿಗೆ 'ಅಂಠಿ' ಎಂಬ ಓಲೆಗಳನ್ನು ಹಾಗೂ 'ಅಂಗುಟಿ' ಎಂಬ

ಬೆರಳಿನ ಉಂಗುರವನ್ನು ಧರಿಸುತ್ತಾರೆ. ಇವರು ಹೆಣ್ಣು ದೇವರನ್ನು ಬೆಳ್ಳಿಯಿಂದ ತಯಾರು ಮಾಡಿರುವದರಿಂದ ಯಾವ ಹಕ್ಕಿಪಿಕ್ಕಿ ಹೆಣ್ಣು ಮಕ್ಕಳು ಅಪ್ಪಿತಪ್ಪಿಯೂ ಬೆಳ್ಳಿಯ ಆಭರಣ ಗಳನ್ನು ಸೊಂಟದ ಕೆಳಗಿನ ಅಂಗಾಂಗಗಳಿಗೆ ಧರಿಸುವದಿಲ್ಲ. ಹಾಗೇನಾದರೂ ಬೆಳ್ಳಿಯ ಆಭರಣಗಳನ್ನು ಧರಿಸಿದರೆ ಅವರ ದೇವರಿಗೇ ಅವಮಾನ ಮಾಡಿದಂತಾಗುತ್ತದೆ ಹಾಗೂ ದೇವರು ಅಂತಹವರನ್ನು ಶಿಕ್ಷೆಗೆ ಗುರಿಪಡಿಸುತ್ತಾನೆ ಎಂದು ಇವರು ನಂಬುತ್ತಾರೆ.

ಇನ್ನು ಆಭರಣಗಳ ಬಗ್ಗೆ ಹೆಂಗಸರ ವಿಷಯ ಬಂದರೆ, ಮದುವೆಯಾದ ಹೆಂಗಸರು ಕೊರಳಿಗೆ ಕಪ್ಪು ಸರವನ್ನು ಧರಿಸುತ್ತಾರೆ. ಇದಕ್ಕೆ ಅವರು ಅವರ ಹಕ್ಕಿಪಿಕ್ಕಿ ಭಾಷೆಯಲ್ಲಿ 'ಕಾಳಿಪೋತ್' ಎಂದು ಕರೆಯುತ್ತಾರೆ. ಈ ಕಾಳಿಪೋತ್ ಎಂಬುದು ಗಂಡು ಹೆಣ್ಣಿಗೆ ಮದುವೆಯ ಸಂದರ್ಭದಲ್ಲಿ ಕಟ್ಟಿದ ಒಂದು ಬಂಧನವಾಗಿರುತ್ತದೆ. ಇದು ಇವರು ಮಾಡು ತ್ತಿರುವ ಅತ್ಯಂತ ಹಳೆಯ ಪದ್ಧತಿ. ಇತ್ತೀಚಿನವರು ತಾಳಿಯನ್ನು ಕಾಳಿಪೋತ್‌ನಲ್ಲಿ ಪೋಣಿಸಿ ಕೊಳ್ಳುತ್ತಾರೆ. ಇವರು ಆಭರಣಗಳನ್ನು ಕೇವಲ ಅಲಂಕಾರಕ್ಕಾಗಿ ಧರಿಸದೇ, ತಮ್ಮನ್ನು ತಾವು ಗುರ್ತಿಸಿಕೊಳ್ಳಲು ಮತ್ತು ಮದುವೆಯ ಧಾರ್ಮಿಕ ಸಂಬಂಧಗಳ ಘನತೆಯನ್ನು ಎತ್ತಿ ಹಿಡಿಯುವ ಸಲುವಾಗಿ ಕೆಲವರು ಬಂಗಾರದ ಆಭರಣಗಳನ್ನು ಧರಿಸುತ್ತಾರೆ. ಕೆಲವು ಸಲ ಹಣದ ತೊಂದರೆಯಾದರೆ ಇವೇ ಆಭರಣಗಳನ್ನು 'ಗಿರವಿಗೆ' ಇಟ್ಟು ನಿರಾಭರಣ ಸುಂದರಿ ಯರಾಗುತ್ತಾರೆ. ಹೆಂಗಸರು ಮೂಗಿಗೆ ಟಿಕಲಿ, ಕಿವಿಗೆ ಕಾಪು, ಕಿವಿಯ ಮೇಲ್ಭಾಗಕ್ಕೆ ಕೊಪ್ಪನಾಳಿ ಎಂಬ ರಿಂಗ್, ಕೊರಳಿಗೆ ಒಂದು ಹವಳ ಹಾಗೂ ಅದರ ಆಚೆ ಬಂಗಾರದ ಗುಂಡುಗಳನ್ನು ಸೇರಿಸಿ ಮಾಡಿಕೊಂಡ ಸರವನ್ನು ಹಾಕಿಕೊಳ್ಳುತ್ತಾರೆ.

ಇಲ್ಲವೆ ಚಿಕ್ಕ ಶಂಖಗಳ ಸರವನ್ನು ಧರಿಸುತ್ತಾರೆ. ಕೈಗಳಿಗೆ ಅಪರೂಪಕ್ಕೆಂದು 'ಕಾಕಣ' ಎಂಬ ಬೆಳ್ಳಿಯ ಬಳೆಗಳನ್ನು ಧರಿಸುತ್ತಾರೆ. ಹಾಗೆಯೇ ಹಿತ್ತಾಳೆಯ ಜಡೆ ಬಿಲ್ಲೆಯನ್ನು ಧರಿಸುತ್ತಾರೆ. ಇವರಲ್ಲಿ ನಾಟಿವೈದ್ಯದ ಅನುಭವವು ಉತ್ತಮವಾಗಿರುವುದು. ಪ್ರಾಣಿ, ಪಕ್ಷಿ, ಗಿಡಮರಗಳೊಂದಿಗೆ ಮನುಷ್ಯನ ನಾನಾ ತರಹದ ರೋಗಗಳಿಗೆ ಔಷಧೋಪಚಾರ ಮಾಡುವರು.

# ೮

# ಸಾಹಿತ್ಯ ಮತ್ತು ಭಾಷೆ

## ಮೌಖಿಕ ಸಾಹಿತ್ಯ

ಜನಪದ ಸಾಹಿತ್ಯವೆನ್ನುವುದು ಆಯಾ ಸಮುದಾಯಗಳಲ್ಲಿ ಕಂಠಸ್ಥ ಸಂಪ್ರದಾಯದಲ್ಲಿಯೇ ಉಳಿದುಕೊಂಡು ಬಂದಿರುವ ಮೌಖಿಕ ಸಾಹಿತ್ಯ ತಮ್ಮ ಪಾಡನ್ನೇ ಹಾಡಾಗಿ ನೀಡಿದ ಬಾಳಿನ ನೋವು ನಲಿವುಗಳನ್ನು ಸಾಹಿತ್ಯವನ್ನಾಗಿಸಿಕೊಂಡ ಒಂದು ಅಪೂರ್ವ ಪ್ರಕಾರವಾಗಿದೆ. ತಲೆ ತಲಾಂತರದಿಂದ ಬಾಯಿಂದ ಬಾಯಿಗೆ ಬೆಳೆದುಬಂದಿರುವ ಇದು ಸಾಮಾನ್ಯ ಜನತೆಯ ವೇದ, ಗ್ರಾಮ ಸಂಸ್ಕೃತಿಯ ದರ್ಪಣ. ಹಳ್ಳಿಯ ಸರಳ ಜೀವನದ ವಿವಿಧ ಮುಖಗಳು ಅದರಲ್ಲಿ ಮಾರ್ಪೊಳೆಯುತ್ತವೆ. ಸಂಸ್ಕಾರದ ಕಷ್ಟ ಕ್ಲೇಶಗಳು, ಸುಖ ಸಂತೋಷ, ಬಂಧುಮಿತ್ರರ ವಿವಿಧ ಸಂಬಂಧಗಳು, ಜಾತಿಮತ, ಹಬ್ಬ ಹರಿದಿನ, ರೂಢಿ ಸಂಪ್ರದಾಯಗಳು ಒಟ್ಟಿನಲ್ಲಿ ಅವರ ಜೀವನವನ್ನು ರೂಪಿಸುವ ಸ್ಫೂರ್ತಿ ವಿಶೇಷಗಳು ಜಾನಪದ ವಾಙ್ಮಯದಲ್ಲಿ ವಿಪುಲ ವಾಗಿ ದೊರೆಯುತ್ತವೆ. (ಜವರೇಗೌಡ:೧೯೭೭; ೧೧೩) ಯಾವುದೇ ಸಮುದಾಯದ ಸಂಸ್ಕೃತಿ ಯನ್ನರಿಯಲು ಅದರ ಜನಪದ ಸಂಪತ್ತನ್ನು ಕೂಲಂಕೂಷವಾಗಿ ಅಭ್ಯಸಿಸಬೇಕಾದುದು ಅಗತ್ಯ. ಕಾರಣ ಇವುಗಳು ಆಯಾ ಸಮಾಜದ ಮಾನಸಿಕ ಚೈತನ್ಯದ ಪ್ರತಿಬಿಂಬಗಳಾಗಿವೆ. ಅವು ಸಾಹಿತ್ಯ ಮುಖೇನವೂ ವ್ಯಕ್ತವಾಗುತ್ತವೆ.

ಹಕ್ಕಿಪಿಕ್ಕಿ ಸಮುದಾಯದ ಜನಪದ ಸಾಹಿತ್ಯ ಯಾರೂ ಕೃಷಿ ಮಾಡದ ಕನ್ನೆ ನೆಲ. ಜನಪದ ಕಣಜವೇ ಆ ಸಮುದಾಯದ ಆಚಾರ ವಿಚಾರ, ನಡೆ ನುಡಿಗಳಲ್ಲಿ ಅಡಗಿದೆ. ಹಾಡು, ಕುಣಿತ, ವೇಷ ಮದುವೆ, ಜನನ ಮರಣ, ಹಬ್ಬ ಹರಿದಿನಗಳು ಹಾಗೂ ವಿಶಿಷ್ಟ ಸಂಸ್ಕಾರಾದಿಗಳು ಅವರ ಸಮಾಜ ಮತ್ತು ಸಂಸ್ಕೃತಿಯನ್ನು ಎತ್ತಿಹಿಡಿಯಬಲ್ಲ ಕುರುಹು ಗಳಾಗಿವೆ. ತಮ್ಮದೇ ಆದ ಪ್ರತ್ಯೇಕತೆಯನ್ನು ಕಾಯ್ದುಕೊಂಡು ಬಂದಿರುವ ಈ ಜನರಿಗೆ ಅವರದೇ ಆದ ಸಮಾಜ ಸಂಪ್ರದಾಯದ ಜೊತೆಗೆ ಸಂಸ್ಕೃತಿಯನ್ನು ಪೋಷಿಸಿಕೊಂಡು ಹೋಗುವ ಮನೋಭಾವನೆಯೂ ಇದೆ. ಹಕ್ಕಿಪಿಕ್ಕಿ ಸಮುದಾಯದ ಜನಪದ ಸಾಹಿತ್ಯ ಪ್ರಕಾರ ಗಳನ್ನು ಹೀಗೆ ವಿಂಗಡಿಸಬಹುದು.

## ಕಥೆಗಳು

ಜನಪದ ಕಥೆಗಳು ಒಂದು ಸಮುದಾಯದ ಸಾಂಸ್ಕೃತಿಕ ಇತಿಹಾಸದ ಅಧ್ಯಯನಕ್ಕೆ ನೀಡುವ ನೆರವು ಅಪಾರವಾದುದು. ಪರಂಪರಾಗತ ಕಥೆಗಳಿಗೆ ಮನೋರಂಜನೆ ಒಂದು ಮುಖವಾದರೆ ಸಾಮಾಜಿಕ, ಭಾಷಿಕ, ಚಾರಿತ್ರಿಕ, ಮನಶಾಸ್ತ್ರೀಯ ಅಹಗೂ ಮಾನವಶಾಸ್ತ್ರೀಯ ದೃಷ್ಟಿಕೋನಗಳ ಮೂಲಕ ಮನುಷ್ಯ ವರ್ಗದ ತಿಳುವಳಿಕೆ ಮತಒತಂದು ಮುಖವಾಗುತ್ತದೆ. ಎಲ್ಲ ಸಾಮಾಜಿಕ ಶಾಸ್ತ್ರಗಳಿಗೂ ಮಾತೃ ಸದೃಶವಾದ ಜಾನಪದ ಕುರಿತ ವೈಜ್ಞಾನಿಕ ಅಧ್ಯಯನದಲ್ಲಿ ಈ ಜನಪದ ಕಥೆಗಳಿಗೆ ಅಗ್ರಪ್ರಾಶಸ್ತ್ಯ ಎನ್ನುತ್ತಾರೆ. ಡಾ. ಸೋಮಶೇಖರ ಇಮ್ರಾಪುರ (೧೭೯;೯೯).

### ನರಿಕಥೆ

ಒಂದು ಊರಿನಲ್ಲಿ ಇಬ್ಬರು ಬಡ ಬ್ರಾಹ್ಮಣರು ಅಣ್ಣ ತಮ್ಮಂದಿರಿಬ್ಬರು ಬಹು ಸುಖ ಸಂತೋಷವಾಗಿ ಬಾಳುತ್ತಿದ್ದರು. ಕಾಲ ಕ್ರಮೇಣ ಬಂದಂತೆ ಅವರ ಹೆಂಡತಿಯರ ಜಗಳದಲ್ಲಿ ಅಣ್ಣ ತಮ್ಮಂದಿರು ಬೇರೆಯಾದರು. ಆದರೆ ಅವರ ಮನೆಯಲ್ಲಿದ್ದ ಆಸ್ತಿಪಾಸ್ತಿಗಳೆಲ್ಲಾ ಸಮಭಾಗವಾಗಿ ಹಂಚಿಕೊಳ್ಳುವ ಜೊತೆಯಲ್ಲಿ ಒಂದು ಎತ್ತು, ಒಂದು ಆಕಳು ಇತ್ತು. ಅಣ್ಣನಾದವನು ದಿಮ್ಮನಾಗಿರುವ ಎತ್ತನ್ನೇ ಆರಿಸಿಕೊಂಡು ತೆಗೆದುಕೊಂಡ. ತಮ್ಮನಿಗೆ ತೆಳ್ಳಗಿರುವ ಆಕಳನ್ನು ಕೊಟ್ಟ. ಹೀಗೆ ಅವರು ಎದುರು ಬದುರಾಗಿ ಜೀವನ ಸಾಗಿಸುತ್ತಿದ್ದರೂ ಸಹ ಅಣ್ಣ ತಮ್ಮಂದಿರ ಗುರುತಿಸಲ್ಲದೇ ಬಾಳುತ್ತಿದ್ದರು. ಹೀಗೆ ಎರಡು ಮೂರು ವರ್ಷ ಕಳೆದ ನಂತರ ಆಕಳಿಗೆ ಒಂದು ಕರುವಾಯಿತು. ಆ ಸಂದರ್ಭದಲ್ಲಿ ಕರುವು ತಾಯಿಯ ಹಾಲನ್ನು ಕುಡಿದು ಅಲ್ಲಲ್ಲಿ ಓಡಾಡುತ್ತಾ ಅಣ್ಣನ ಎತ್ತಿನ ಹತ್ತಿರ ಬಂದು ನಿಂತಿತು. ಆಗ ಅಣ್ಣ ನೋಡಿ ನನ್ನ ಎತ್ತು ಕರು ಹಾಕಿದೆ. ಆಗ ಊರಿನ ಜನರೆಲ್ಲರಿಗೂ ಕರೆಸಿ ತೋರಿಸಿದ. ತಮ್ಮನಾದನು ತನ್ನ ಆಕಳನ್ನು ನೋಡಿದಾಗ ಆಕಳು ಕರುವನ್ನು ಹಾಕಿ ಕಸವನ್ನು ನೆಕ್ಕುತಿತ್ತು. ಅದನ್ನು ನೋಡಿದ ತಮ್ಮ ನನ್ನ ಆಕಳು ಕರುವನ್ನು ಹಾಕಿದೆ ಎಂದು ಅಣ್ಣನ ಮುಂದೆ ಹೇಳಿದ ಆದರೆ ಎಷ್ಟೇ ತಿಳುವಳಿಕೆಯಿಂದ ಹೇಳಿದರೂ ಸಹ ಅಣ್ಣನ ಮಂಡ ಬುದ್ಧಿಗೆ ಹೊಳೆಯುತ್ತಿರಲಿಲ್ಲ. ಆ ಸಂದರ್ಭದಲ್ಲಿ ಅಲ್ಲಿಗೆ ಒಂದು ನರಿಯೂ ಬಂದು ಕಣ್ಣು ತಿಕ್ಕತೊಡಗಿತು. ಆಗ ಜನರೆಲ್ಲರೂ ಸೇರಿಕೊಂಡಿದ್ದರು. ಜನರೆಲ್ಲರೂ ಇದಕ್ಕೆ ನರಿಯಣ್ಣನ್ನೇ ಉತ್ತರಿಸಬೇಕೆಂದು ನಿರ್ಧರಿಸಿದರು. ಅಣ್ಣನಾದವನು ನರಿಯಣ್ಣನಿಗೆ ಹೇಳಿದ "ನನ್ನ ಎತ್ತು ಕರುವನ್ನು ಹಾಕಿದೆ!" ಹೀಗೆ ಅನೇಕ ಸಲ ಹೇಳಿದರೂ ನರಿಯಣ್ಣನೂ ತನ್ನ ಕಣ್ಣುಗಳನ್ನು ತಿಕ್ಕುತ್ತಲೇಯಿತ್ತು. ಇದನ್ನು ನೋಡಿದ ಅಣ್ಣನ ಮಂಡ ಬುದ್ಧಿಗೆ ಏನೂ ಹೊಳೆಯಲಿಲ್ಲ. ನರಿಯಣ್ಣ ನಿನ್ನ ಕಣ್ಣಿಗೆ ಏನಾಗಿದೆ? ಎಂದು ಪ್ರಶ್ನಿಸಿದ. ಆಗ ನರಿಯಣ್ಣನು "ಏನು ಮಾಡಲಿ ಮಂಡ ಜೀವಿ ಸಮುದ್ರಕ್ಕೆ ಬೆಂಕಿ ಹಚ್ಚಿತು. ಅದನ್ನು ಆರಿಸಲು ಹೋಗಿ ನನ್ನ ಕಣ್ಣುಗಳು ಮಬ್ಬಾಗಿವೆ. ಆದ್ದರಿಂದ ನನ್ನ ಕಣ್ಣುಗಳನ್ನು ಉಜ್ಜಿಕೊಳ್ಳುತ್ತಿದ್ದೇನೆ." ಆಗ ಅಣ್ಣನಾದವನು ಹೇಳುತ್ತಾನೆ. "ಎಲ್ಲಾದರೂ ಉಂಟೇ? ಸಮುದ್ರಕ್ಕೆ ಬೆಂಕಿ ಹಚ್ಚಿಕೊಳ್ಳುವುದೆಂದರೆ ಸುಲಭದ

ಮಾತೇ?" ಆಗ ನರಿಯಣ್ಣನೂ ಉತ್ತರ ಹೇಳುತ್ತಾನೆ. "ಎಲ್ಲಾದರೂ ಉಂಟೇ?! ಎತ್ತು ಕರುವನ್ನು ಹೆತ್ತಲು ಸಾಧ್ಯವೇ?" ಆಗ ಅರಿವಾಯಿತು. ಅಣ್ಣನ ಮಂಡ ಬುದ್ಧಿಗೆ ತಾನೇ ಸ್ವತಃ ಕರುವನ್ನು ಹಿಡಿದು ತಮ್ಮನಿಗೆ ಒಪ್ಪಿಸಿ ಮತ್ತೆ ಪುನಃ ಇಬ್ಬರೂ ಕೂಡಿ ಬಾಳತೊಡಗಿದರು. ಇದಕ್ಕೆ ನರಿಯಣ್ಣನ ಬುದ್ಧಿಗೆ ಸಾಕ್ಷಿಯಾಗಿ ಎಲ್ಲರೂ ನರಿಯಣ್ಣನನ್ನು (ಹೊಗಳುತ್ತಾ) ಹೊಗಳಿದರು. ಆಗ ನರಿಯಣ್ಣನಿಗೆ ತುಂಬಾ ಖುಷಿಯಾಯಿತು. ಮೂರು ಸಲ ಹುಕ್ಕಿ ಹುಕ್ಕಿ ಹುಕ್ಕಿಯೆಂದು  ಕೂಗಿ ತಾನು ಇರುವ ಕಡೆ ಹೊರಟು ಹೋಯಿತು.

ಕರಡಿ ಮತ್ತು ನರಿಯಣ್ಣ

ಒಂದಾನೊಂದು ಕಾಲದಲ್ಲಿ ಕರಡಿ ಮತ್ತು ನರಿಯು ಸ್ನೇಹವಾಗಿ ಬಾಳುತ್ತಿದ್ದರು. ಹೀಗೆ ಇರುತ್ತಾ "ನಮ್ಮ ಜೀವನವೂ ಸಾಕಾಗಿದೆ. ಏನಾದರೂ ಮಾಡಿ ಇಡೀ ವರ್ಷ ದುಡಿದು ಕುಳಿತು ತಿನ್ನುವಷ್ಟು ನಾವು ದುಡಿಯಬೇಕು" ಎಂದು ನರಿಯಣ್ಣನು ಹೇಳಿದ. ಅದಕ್ಕೆ ಕರಡಿ ರಾಯನು "ಏನು ಉಪಾಯ ಮಾಡೋಣಾ?" ಎಂದು ಪ್ರಶ್ನಿಸಿದ ಆಗ ನರಿಯಣ್ಣನು ಹೇಳುತ್ತಾನೆ. "ನಾವಿಬ್ಬರೂ ಸೇರಿ ವ್ಯವಸಾಯ ಮಾಡೋಣಾ" ಎಂದು ಹೇಳಿದಾಗ ಕರಡಿ ರಾಯನು ಏನು ಯೋಚಿಸಿದೇ ಒಪ್ಪಿಕೊಂಡಿತು. ಮಳೆಗಾಲ ಪ್ರಾರಂಭವಾಯಿತು. ಅದಕ್ಕೆ ತಕ್ಕ ಕೆಲಸ ಮಾಡಲು ಬೇಕಾಗುವ ಸಾಮಾಗ್ರಿಗಳನ್ನು ಜೋಡಿಸಿಕೊಂಡರು. ಕರಡಿರಾಯನು ನೇಗಿಲನ್ನು ಎಳೆದರೆ ನರಿಯಣ್ಣನು ಬಿತ್ತನೆ ಮಾಡುವುದಾಗಿ ಇಬ್ಬರೂ ಸಮಭಾಗಿಯಾಗಿ ಒಪ್ಪಿಕೊಂಡರು. ಒಂದು ದಿನ ಇಬ್ಬರೂ ಸೇರಿ ಯಾವ ಬೆಳೆ ಹಾಕಬೇಕೆಂಬ ಯೋಚನೆ ಮಾಡಿದಾಗ ಕಡ್ಲೆಕಾಯಿ ಬಿತ್ತನೆ ಮಾಡುವ ಯೋಚನೆ ಹೊಳೆಯಿತು. ಬಿತ್ತನೆಯಾಯಿತು. ಕಾಲ ಹತ್ತಿರ ಬಂತು. ನರಿಯಣ್ಣನು ಆಗ ಹೇಳುತ್ತಾನೆ. "ಕರಡಿಯಣ್ಣಾ! ನಾವು ಬೆಳೆದ ಫಸಲಿನಲ್ಲಿ ನೀನಗೆ ಮೇಲಿಂದ ಬೇಕೋ? ಅಥವಾ ಕೆಳಗಿಂದು ಬೇಕೋ?" ಎಂದು ನರಿಯಣ್ಣನು ಹೇಳಿದಾಗ ಕರಡಿರಾಯನಿಗೆ ಏನು ತೋಚದೆ ಕಾಣುವುದೆಲ್ಲಾ ಹಚ್ಚ ಹಸಿರಾಗಿ ಬೆಳೆದ ಬೆಳೆಯನ್ನು ನೋಡಿ ಸಂತೋಷಪಟ್ಟು "ನನಗೆ ಮೇಲಿನ ಫಸಲು ಇರಲೀ" ಎಂದ. ಇದಕ್ಕೆ ನರಿಯಣ್ಣನು ಆಯಿತಪ್ಪಾ! ನೀನು ಒಳ್ಳೆಯದನ್ನೇ ಆರಿಸಿಕೊಂಡಿದ್ದೀಯಾ? ನನಗೆ ಕಲ್ಲು ಸಿಗಲಿ, ಮಣ್ಣು ಸಿಗಲಿ ನಿನ್ನ ತೀರ್ಮಾನದಂತೆ ನನಗೆ ಬಂರುವ ಭಾಗದಲ್ಲಿ ಎಳೆಷ್ಟು ಕೇಳಬಾರದು. ನಿನ್ನ ಭಾಗದಲ್ಲಿ ನನಗೆ ಎಳಷ್ಟು ಬೇಡ. ಇದು ನಮ್ಮ ಕಟ್ಟಾಜ್ಞೆ!" ಎಂದು ನರಿಯಣ್ಣನು ಕಡ್ಡಾಯವಾಗಿ ನುಡಿದು ಬಿಟ್ಟಿ. ಅದಕ್ಕೆ ಕರಿಯಣ್ಣನೂ ಸಹ ಒಪ್ಪಿಕೊಂದಿತು. ಬೆಳೆ ಬಂದಾಯಿತು. ಕಡ್ಲೆಕಾಯಿಯನ್ನು ಕೀಳಲಾಯಿತು. ಸೊಪ್ಪೆಲ್ಲಾ ಕರಡಿಯ ಪಾಲಾಯಿತು. ಕಡ್ಲೆ ಕಾಯಿ ಬೆಳೆಯು ತನ್ನ ವಶಕ್ಕಾಯಿತು. ಇದನ್ನು ನೋಡಿದ ಕರಡಿರಾಯನು ತುಂಬಾ ದುಃಖಿತನಾಗಿ ಏನು ಮಾತನಾಡದೇ ಸುಮ್ಮನಿತ್ತು. ಆಗ ನರಿಯಣ್ಣನು "ಈ ವರ್ಷ ನನ್ನ ಪಾಲಾದರೆ? ಬರುವ ವರ್ಷ ನಿನ್ನದಾಗಬಹುದು". ಎಂದು ಹೇಳುತ್ತಾ ಸಮಾಧಾನ ಮಾಡಿತು. ಮತ್ತೆ ಯಥಾಪ್ರಕಾರ ಭೂಮಿಯನ್ನು ಉಳಲು ಪ್ರಾರಂಭಿಸಿತು. ಮಳೆಗಾಲ ಶುರುವಾಯಿತು. ಯಾವ ಬೆಳೆ ಹಾಕಬೇಕೆಂದು ಯೋಚಿಸಿದಾಗ ಜೋಳ ಹಾಕಬೇಕೆಂದು ನಿರ್ಧರಿಸಿದರು.

ಯಥಾ ಪ್ರಕಾರವಾಗಿ ಬೆಳೆದು ನಿಂತಾಗ ಆಗ ನರಿಯಣ್ಣನು ಹೇಳುತ್ತಾನೆ. "ನಿನಗೆ ಮೇಲೇದು ಬೇಕೋ? ಅಥವಾ ಕೆಳಗಿನದೂ ಬೇಕೋ? ಎಂದು ಹೇಳಿದಾಗ ಕರಡಿರಾಯನು ಯೋಚಿಸಿದೇ ನನಗೆ ಕೆಳಗಿನವು ಬೇಕು" ಎಂದು ಹೇಳಿತು. ಈ ಮಾತನ್ನು ಕೇಳಿದ ನರಿಯಣ್ಣನು ನಾನು ಅಂದುಕೊಂಡ ಹಾಗೆ ನಿನಗೆ ಲಾಭವಾಗಬಹುದು. ಬೆಳೆ ಬೆಳೆದು ಬಂದಾಯಿತು. ಆಗ ನರಿಯಣ್ಣನು ಬೆಳೆದ ತೆನೆಗಳೆಲ್ಲಾ ಕೊಯ್ಯಿ ಮಾಡಿಕೊಂಡ ಉಳಿದ ಸಿಪ್ಪೆ ದಂಟನ್ನು ಕರಡಿ ರಾಯನಿಗೆ ಬಿಟ್ಟುಕೊಟ್ಟ. ಇದನ್ನು ನೋಡಿದ ಕರಡಿರಾಯನಿಗೆ ಬಹು ಕೋಪಿಷ್ಟನಾಗಿ ನರಿಯಣ್ಣನ ಸಹವಾಸವೇ ಬೇಡವೆಂದು ಆ ಪ್ರಾಂತ್ಯವನ್ನೇ ಬಿಟ್ಟು ನರಿಯನ್ನು ದ್ವೇಷಿಸುತ್ತ ಕಳ್ಳ ನರಿಯೆಂದು ಮೋಸದ ನರಿಯೆಂದೂ ಹೇಳುತ್ತಾ ಹೊರಟು ಹೋಯಿತು.

**ರಾಜನ ಕಥೆ**

ಒಂದಾನೊಂದು ಕಾಲದಲ್ಲಿ ಹೇಳಿರುವುದು ಅವಾ ನಡೆದಿರುವ ಕಥೆಯೆಂದು ತಿಳಿಯ ಬಹುದು. ಒಂದು ಪ್ರಾಂತ್ಯದಲ್ಲಿ ಒಬ್ಬ ರಾಜನಾಗಿ ರಾಯಭಾರಿ ನಡೆಸುತ್ತಿದ್ದನು. ತಾನು ಯಾರನ್ನು ಮದುವೆಯಾಗದೇ ಹೀಗೆಯೇ ಇರಲು ಇಚ್ಛಿಸಿದನು. ಪ್ರಜೆಗಳೆಲ್ಲರೂ ಸೇರಿ ರಾಜನಿಗೆ ಮೊರೆಹೊಕ್ಕಿ ರಾಜನೇ ಈ ರಾಜ್ಯವನ್ನು ಮುಂದಿನ ಹೀಳಿಗೆಯನ್ನು ಬೆಳೆಸುವುದ ಕ್ಕೋಸ್ಕರ ನೀವು ಮದುವೆಯಾಗಲೇ ಬೇಕು ಎಂದು ಪ್ರಜೆಗಳೆಲ್ಲರೂ ಸೇರಿ ರಾಜನಲ್ಲಿ ಬೇಡಿಕೊಂಡರು. ಆಗ ರಾಜನು ಹೇಳುತ್ತಾನೆ. ನನಗೆ ಹೆಣ್ಣಿನ ಮೇಲೆ ನಂಬಿಕೆಯೇ ಇಲ್ಲ ಆದ್ದರಿಂದ ನಾನು ಮದುವೆಯಾಗಲಾರೇ ಎಂದನು. ಆಗ ಒಬ್ಬ ಬ್ರಾಹ್ಮಣನು ಬಂದು ಸಮಾಧಾನಕರವಾಗಿ ರಾಜನೇ ನಿನಗೆ ಬೇಕಾಗಿರುವಂತಹ ಹೆಣ್ಣನ್ನು ಪಡೆಯಬೇಕಾದರೆ ನೀನು ತಪಸ್ಸನ್ನು ಮಾಡು ಎಂದು ಹೇಳಿ ಹೊರಟು ಹೋದ. ಬ್ರಾಹ್ಮಣನು ಹೇಳಿದ ಹಾಗೆ ರಾಜನು ತಪಸ್ಸಿಗೆ ಹೊರಟ. ತಪಸ್ಸು ಫಲಿತವಾಯಿತು. ದೇವರು ಪ್ರತ್ಯೇಕ್ಷನಾಗಿ ರಾಜನೇ ನಿನಗೆ ಏನು ಬೇಕು ಎಂದು ಹೇಳಿದಾಗ ದೇವರೇ ನನಗೆ ಒಂದು ಹೆಣ್ಣನ್ನು ಮದುವೆಯಾಗಲು ಇಚ್ಛಿಸಿದ್ದೇನೆ. ಆದರೆ, ನನ್ನ ಅರ್ಧ ಶರೀರದಲ್ಲಿ ಅರ್ಧ ವಯಸ್ಸನ್ನು ಬೇರ್ಪಡಿಸಿ ಒಂದು ಹೆಣ್ಣನ್ನು ಸೃಷ್ಟಿಸು. ನಾನು ಅವಳನ್ನು ಮದುವೆಯಾಗುತ್ತೇನೆ. ಹೀಗೆಂದು ಹೇಳಿದ ತಕ್ಷಣವೇ ಅರ್ಧ ಶರೀರ, ಅರ್ಧ ಆಯಸ್ಸು ಬೇರ್ಪಟ್ಟಿಸಿ ಹೆಣ್ಣಿನ ಆಕಾರವಾಯಿತು. ಇನ್ನೂ ಮುಂದೆ ಜೀವನ ನೋಡಿ ನಾಚಿಕೆ ಪಡುತ್ತಾ, ಕೈ ಕೈ ಹಿಡಿದು ತನ್ನ ರಾಜವನ್ನೇ ಬಿಟ್ಟು ಅಲ್ಲಿಯೇ ಒಂದು ಪುಟ್ಟ ಮನೆ ಮಾಡಿಕೊಂಡನು. ಬಹುಕಾಲ ಕಳೆದರೂ ಆತನಿಗೆ ಮಕ್ಕಳೇ ಆಗಲಿಲ್ಲ. ಹೀಗಿರುವ ಸಂದರ್ಭದಲ್ಲಿ ಕುರಿಕಾಯುವನೊಬ್ಬ ಗೊಲ್ಲನು ಬಂದನು. ಆತ ನೋಡಿದ ಅಮ್ಮ ನನಗೆ ಕುಡಿಯಲು ನೀರು ಕೊಡಿ ಈ ಮಾತನ್ನು ಕೇಳಿದ ಯುವತಿಯು ನೀರನ್ನು ತಂದು ಕೊಡುವಾಗ ತನ್ನ ಗಂಡನಿಗಿಂತಲು ಬಹು ಸುಂದರವಾಗಿದ್ದನು. ಆತನನ್ನೇ ನೋಡುತ್ತ ಅಲ್ಲಿಯೇ ಮೈ ಮರೆತಳು. ಹೀಗೆ ಅನೇಕ ಸಲವು ಆತನು ಸಹ ಕುರಿಯ ಹಾಲನ್ನು ತೆಗೆದುಕೊಂಡು ಬರಲು ಶುರುವಾದ ಹೀಗೆ ಇಬ್ಬರ ಪರಿಚಯವು ಮುಂದುವರಿಯುವುದರಿಂದ ಇವರಿಬ್ಬರ ಸಂಕಲ್ಪದಂತೆ ಓಡಿ ಹೋಗಲು ನಿರ್ಧರಿಸಿದರು. ಈ ವಿಷಯ ರಾಜನಿಗೆ

ಹೋಳಿಯಲಿಲ್ಲ. ಕಾಲ ಕ್ರಮೇಣ ಒಂದು ದಿನ ನಡೆದೇ ಹೋಯಿತು. ಆಗ ರಾಜ ಬಂದು ನೋಡುತ್ತಾನೆ. ತನ್ನ ಪ್ರೇಯಸಿಯಿಲ್ಲದೇ ಕಂಗಾಲಾದ ಕಿರುಚಾಡಿದ ಕೂಗಿದ, ಬಿದ್ದು ಉಲ್ಲಾಡಿದ ತನ್ನ ಅರ್ಧ ಶರೀರದಲ್ಲಿ ಭಾಗ ಮಾಡಿದ ಪ್ರಿಯತಮೆಯೇ ಇಲ್ಲದ ಮೇಲೆ ನಾನೇನೂ ಮಾಡಲೀ ಮತ್ತೇ ಯೋಚಿಸಿದ ಅವಳು ಎಲ್ಲೇ ಇರಲಿ ಹುಡುಕಿ ನನ್ನ ಅರ್ಧ ಆಯಸ್ಸನ್ನು ಪಡೆಯಬೇಕೆಂಬುದನ್ನು ನಿರ್ಧರಿಸಿದ. ಇವರಿಬ್ಬರೂ ಬದುಕಲು ಬೇರಿ ದಾರಿಯಿಲ್ಲದೇ ಇವಳು ನಾಟ್ಯವಾಡುತ್ತಾ ಆತನು ಗಾನವನ್ನು ಹಾಡುತ್ತಾ ಪ್ರಜೆಗಳ ಮುಂದೆ ಕಾರ್ಯಕ್ರಮಗಳನ್ನು ಮಾಡುತ್ತಾ ಜೀವನ ಸಾಗುತ್ತಿದ್ದರು. ಹೀಗೆ ಕಾಲಕ್ರಮೇಣ ಕಳೆದಂತೆ ರಾಜನು ಅಲ್ಲಿ ಇಲ್ಲಿ ಹೋಗುವಂತೆ ಹುಡುಕಾಟ ಮಾಡಿ ಒಂದು ದಿನ ಸುದ್ದಿ ಕೇಳಿದ ತನ್ನ ಪ್ರೇಯಸಿಯು ನಾಟ್ಯವಾಡುವುದು ಅವನು ಗಾನ ಹಾಡುವುದು ಎಂಬ ವಿಷಯ ತಿಳಿದಂತೆ ಆ ಮನರಂಜನೆ ಕಾರ್ಯಕ್ರಮಕ್ಕೆ ಭಾಗಿಯಾದ ಗಾನ ರಾಗವು ಶುರುವಾಗಿತ್ತು. ತನ್ನ ಹೆಂಡತಿಯಾದ ನಾಟ್ಯವಾಡಲು ಪ್ರಾರಂಭಿಸಿದಳು. ಆ ಕ್ಷಣದಲ್ಲೇ ಅವರಿಬ್ಬರ ಮಧ್ಯೆ ನಿಂತು ಮಾತನಾಡಿದ ನೀನು ನನ್ನ ಹೆಂಡತಿ, ನಾನು ಏನು ತಪ್ಪು ಮಾಡಿದೆಯೆಂದು ಹೀಗೆ ಮೋಸ ಮಾಡಿಬಂದು ನನ್ನ ಅರ್ಧ ಶರೀರದಲ್ಲಿ ಭಾಗಮಾಡಿ ಅರ್ಧ ಆಯಸ್ಸನ್ನು ಧಾರೆಯರೆದು ನಿನಗೆ ಒಂದು ಹೆಣ್ಣಿನ ರೂಪವಾಗಿ ಪಡೆದು ಕೈ ಹಿಡಿದೆ. ಏಕೆ ಹೀಗೆ ಮೋಸ ಮಾಡಿದೆ ಎಂದು ಕೇಳಿದಾಗ ತನ್ನ ಪ್ರೇಯಸಿಯಾದವಳು ಹೇಳುತ್ತಾಳೆ. ಇಲ್ಲ ಇಲ್ಲ ನೀನು ಯಾರೋ ನಾನು ಯಾರೋ ನೀನು ಬಾತಿರುಕ ನನ್ನ ಘನತೆಯನ್ನು ನೀನ್ನ ವ್ಯವಸ್ಥೆಯೇನು ಇದು ಸಾಟಿಯಿಲ್ಲದ ಮಾತು ಪ್ರಜೆಗಳ ಮುಂದೆ ಹೇಳಿ ನನಗೆ ಅವಮಾನಸಿದರು ಹೋಗು ನೀನು ಹೊರಟು ಹೋಗು ಹೀಗೆ ಕಟ್ಟುನಿಟ್ಟಾಗಿ ನುಡಿದಳು. ಆಗ ರಾಜನು ಆಗಲೀ ನಿನ್ನ ಮಾತಿನಂತೆ ನನ್ನ ಕೈಯಲ್ಲಿ ನಿನ್ನ ಕೈಯಾರೆ ನೀರನ್ನು ಧಾರೆ ಎರೆದರೆ ಅಷ್ಟೇ ಸಾಕು. ನಾನು ಇಲ್ಲಿಂದ ಹೊರಟು ಹೋಗುತ್ತೇನೆ ಎಂದು ನುಡಿಯುವ ಸಂದರ್ಭದಲ್ಲಿ ನೆರೆದಿದ್ದ ಪ್ರಜೆಗಳೆಲ್ಲರ ಮುಂದೆ ಬೀಳ್ಕೊಡುವಾಗ ಆ ಪ್ರಜೆಗಳೆಲ್ಲರೂ ಸಹ ಆತನ ಮಾತಿಗೆ ಹೂಂಕರಿಸಿದರು. ನಾಟ್ಯವಾಡುತ್ತಿದ್ದಳು. ಆತನ ಪ್ರಿಯತಮನಾದ ಗಾನ ಹಾಡುತ್ತಿದ್ದನು. ಅಂತಹ ವೇಳೆಯಲ್ಲಿ ಕುಣಿಯುತ್ತಲೇ ತನ್ನ ಎರಡು ಕೈಯ ಬೊಗಸೆಯಲ್ಲಿ ನೀರನ್ನು ತುಂಬಿಕೊಂಡು ರಾಜನದವನ ಕೈಯಲ್ಲಿ ತಂದ ನೀರನ್ನು ಸುರಿದಳು. ರಾಜ ಹೇಳಿದ ನನ್ನ ಆಯಾಸು ಬಂದಿದೆ. ಇವಳ ಅಂತಿಮ ಮುಗಿದಿದೆ ನಾನು ಇಲ್ಲಿಂದ ಹೊರಟೇ! ಎಂದು ಹೇಳಿದಾಕ್ಷಣ ತನ್ನ ಹೆಂಡತಿಯಾದ ಪ್ರೇಯಸಿಯು ಹುಟ್ಟಿರುವ ಬಟ್ಟೆ ಮಾತ್ರ ಕಳಚಿ ಬಿದ್ದಿತು. ಶರೀರ ಮಾತ್ರ ಮಾಯವಾಗಿತ್ತು. ಇದನ್ನು ನೋಡಿದ ಪ್ರಜೆಗಳೆಲ್ಲರೂ ಆಶ್ಚರ್ಯವಾಗಿ ನೀನು ಯಾರು? ಎಂಬ ಕೂಗಿದ ಧ್ವನಿ ಕೂಗಿದರು. ಪೂರ್ತಿ ಶರೀರವಾಯಿತು. ಪೂರ್ತಿ ಆಯುಸ್ಸು ಬಂದಾಯಿತು. ಪ್ರಜೆಗಳೆಲ್ಲ ಮುಂದೆ ತನ್ನ ನಿಜರೂಪವು ವಿಜೃಂಭಿತಗೊಳ್ಳಿತು. ಪ್ರಜೆಗಳೆಲ್ಲರೂ ನೋಡಿ ಆಶ್ಚರ್ಯ ಚಕಿತರಾಗಿ ನಮ್ಮ ಪ್ರಭು! ನಮ್ಮ ಒಡೆಯ! ನಮ್ಮ ನಾಡಿನ ದೊರೆ! ಎಂದು ಘೋಷಿಸಿದರು. ಹೀಗೆ ಇರುವ ಸಂದರ್ಭದಲ್ಲಿ ಕುರುಬನನ್ನು ಚಿತ್ರ ಹಿಂಸೆ ಮಾಡುವಾಗ ರಾಜನು ಹೇಳಿದ

ಕೊಲ್ಲದಿರಿ! ಹಿಂಸಿಸಬೇಡಿ? ಅವನದೇನೂ ತಪ್ಪಿಲ? ಮಾಯಯೆಂಬುದು ಆಟವಾಡಿಸುತ್ತದೆ. ಮನೆ ಮಾಡಿಸುತ್ತದೆ. ಮಾಯವಾಗುತ್ತದೆ. ಇದು ಮೂರು ದಿನದ ನಮ್ಮೆಲ್ಲರ ಬದುಕುವ ಜೀವ ಇದೇ ನಮ್ಮ ನಿಮ್ಮ ಅಂತರ.

ಚಾಮುಂಡಿ ಕತೆ

ರಾಯಚೂರಿನ ಕೊಣವೇಗೌಡ ಒಂದು ಕೋಣ ಸಾಕಿದ್ದ. ಅಂದರೆ ಮಗನ್ನ ಸಾಗಿದಂಗೆ ಸಾಕಿದ್ದ. ಆವಾಗೆನಾಯ್ತು, ಹೊಳೆದಂಡೆಗೆ ಹೋಗಿ ಕುಂತಕಂಡಾಗ ಕೊಣನು ಅಡ್ಡ ನೀರಿಗೆ ನಿಂತುಬಿಡ್ತು. ಅವಾಗ ಕೆರಿಗೆ ಅಡ್ಡ ಏರಿ ಹಾಕಿದಂಗಾಗಿಬಿಡ್ತು. ಅಲ್ಲಿ ಏಳು ದೇವರ ಮೂರ್ತಿಗಳು ಚಾಮುಂಡಿ, ಕಾಳಿ, ಮಂಕಾಳಿ, ಭದ್ರಕಾಳಿ, ಅವೆಲ್ಲ ಇದ್ದವು, ಅವೆಲ್ಲ ಬರ್ತಾ ಇರುವಾಗ ನೆರಳು ಕೋಣನ ಮೇಲೆ ಬಿದ್ದು ಬಿಡ್ತು. ಅದನ್ನು ನೋಡಿ ಹೆದರಿ ಎದ್ದು ನಿಂತು ಬಿಡ್ತು. ನೋಡಿದರೆ ಇವರು 'ಥೂ ಇವನಪ್ಪನು ಬೋಸುಡನಾಡ. ಇದನ್ನು ನೋಡಿ ನಾವು ಹೆದರಿಬಿಟ್ಟೆವಲ್ಲ' ಅಂತ ಸಿಟ್ಟು ಬಂದುಬಿಡ್ತು ಇವರಿಗೆ ಅದ್ರಗೂ ಕೊನೆಗೆ ತಂಗಿ ಚಾಮುಂಡಿಗೆ ಬಹಳ ಸಿಟ್ಟು ಬಂತು. 'ನೋಡೆ ನೋಡೆ ಅಕ್ಕ ಇಂಥ ಕೆಟ್ಟ ಮಾತಾಡಬೇಕಾರೆ ಎಂಥವನಿರಬೇಕು'. ಹೇ ಬಾರೆ ಅದೇನು ಮಾತು ಮಾಡಿಕೊಂಡ್ರೆ, ಮಾಡಿಕೊಳ್ಳಿ ಹೋಗಣ ಬಾರೆ, ಇಲ್ಲ ಅಮ್ಮ ನಾ ಬರಲ್ಲ. ನೀವು ನಡಿರಿ. ನಾನು ಏನ್ಕೆತಿ ಅದ ನೋಡಿಕಂಡೆ ಬರ್‍ತೀನಿ. ಬಾಯಲ್ಲಿ ಏನು ನುಡಿದನೋ ಅದ ಮಾಡಿಕೊಂಡೆ ಬರದು ಅಂತ ಹೇಳಿದ ಮೇಲೆ ಚಾಮುಂಡಿ ರಾಯಚೂರು ಕೋಣವೇಗೌಡನ ಹತ್ತಿರ ಹೋಯಿತು. ರಾಯಚೂರು ಕೋಣವೇಗೌಡನಿಗೆ 'ಮಾವ ನಿನ್ನ ಮಗನಿಗೆ ನಾನು ಲಗಣ ಆಗ್ತೀನಿ' ಅಂತ ಹೇಳಿ ಬಿಡ್ತು. ಮಗ (ಕೋಣ) 'ಹೇಮುಂಡೆ ಏ ನೀನ್ಯಾವಳು ನನ ಮಗನಿಗೆ ಲಗಣ ಆಗಕ್ಕೆ ನೀ ಹೋಗು' ಅಂತೇಳಿ ಅಲ್ಲಿದ್ದವರು ಹೇಳಿದರು. ಈ ಮುಂಡೆಗೆ ದೂರ ಕಳುಸು ಅನ್ನಲು ಬಾಗಲಿಂದ ದೂಕಿ ಕಳಿಸಿದ್ರು. ಆ ಬಾಕಿಲಿಂದ ತಿರುಗಿ ಬಂದು ನಿಂತು ಬುಡ್ತು 'ಮಾವನ ಮಗ ರಾಯಚೂರು ಕೊಣವೇಗೌಡ ನಿನ್ನ ಏಳು ಕೋಟೆಯು ಚೆನ್ನದೆ, ಏಳು ಬಾಕುಲು ಚೆನ್ನದೆ. ಅಂದ ಮೇಲೆ ನಿನ್ನ ಮಗನಿಗೆ ನಾನು ಮದುವೆ ಆಗ್ತೀನಿ. ಅಂತೇಳಿದ್ರೆ ಮತ್ತೆ ಗೌಡಗೆ ಸಿಟ್ಟು ಬಂತು. 'ಹೇ, ಈ ಮುಂಡೆಗೆ ಕಡೆದು ತಿಪ್ಪೆ ಗುಂಡಿಗೆ ಬಿಸಾಕರಿ' ಅನ್ನಲು ಹಮಾಲಿಗಳು ಬಂದು ಕಡದು ವಗಾಸಿದ್ರು. ತಕ್ಷಣ ಈ ಅಮ್ಮ ಬಂದು 'ಮಾವ ಮಾವ ನಿನ ಮಗನಿಗೆ ಲಗಣ ಆಕ್ತೀನಿ ಅಂದರೆ ನಿನ್ನ ಆಕಳ ಗೂಟನು ಚೆನ್ನದೆ, ರಾಗಿ ಬೀಸೊ ಕಲ್ಲೂ ಚೆನ್ನದೆ ಆದ್ದರಿಂದ ನಿನ್ನ ಮಗನಿಗೆ ಲಗಣ ಆಗ್ತೀನಿ. 'ಹೇ, ಈ ಮುಂಡೆ ಹಿಂಗೆ ಹುಚ್ಚುತನ ಮಾಡ್ತಾಳೆ. ಈಕಿಗೆ ಹುಚ್ಚಾಗ್ಯೆತಲ ಹುಚ್ಚಾನೆಗೆ ಹುಲ್ಲಸುತ್ತಿ ಬಾಯಿಗೆ ಕೊಡಿ ತಿಂದು ಬಿಡಲಿ ಅಂತೇಳಲು, ಹಮಾಲಿಗಳು ಬಂದು ಹಿಡಿದು ಹುಲ್ಲದಗೆ ಕಲಸಿ ಬಾಯಿಗಿಟ್ಟರು. ಬಾಯಿಗಿಟ್ಟ ತಕ್ಷಣವೆ ದೇವರು ಅಂತ ಗಂಟಲು ಹಿಡಿದು ಬಿಡ್ತು. ಅದೇ ಮಾತಿಂದ ತಗೊಂಡು ಹೋಗಿ ಸ್ನಾನ ಮಾಡಿಸಿ ಆ ಮೇಲೆ ಬೆನ್ನಿನ ಮೇಲೆ ಕೂರಿಸಿ ಮತ್ತೂ ಬಂತು. 'ಮಾವ ಮಾವ ನಿನ ಮಗನಿಗೆ ನಾನು ಲಗಣ ಆಗ್ತೀನಿ' ಮತ್ತು ನೋಡಿದ. 'ಅಯ್ ಈ ಹುಚ್ಚು ಮುಂಡೆಗೆ

ಏನು ಏನು ಬಂತು. ಈಕಿಗೆ... ಥೂ ಮುಂಡೇದೆ ನೀನು ಏನಾರ ಮಾಡಿಕೊ ಹೋಗು ಅಂತ ನೋಡಿದಂಗೆ ಮಡುವಿಗೆ ಚಪ್ಪರ ಹಾಕಿದರು. ಚಪ್ಪರ ಹಾಕಿದ ತಕ್ಷಣ ಬೆಳಿಗ್ಗೆ ಮದಿವಿ ಮಾಡದು ಅಂತ ಬಿಟ್ಟುಬಿಟ್ಟರು. ಈಕೆಗೆ ರಾತ್ರಿ ಮದಿವಿ ಮಾಡಿಕೊಬೇಕು ಅಂತ ಗೊತ್ತಿಲ್ಲ. ಆಮೇಲೆ ತಕ್ಕೊಂಡ್ಳು, ಅಮೇಲೆ ಹರಿಶಿಣ ಕಲಸಿ ತಿರಶೂಲ ತಕ್ಕೊಂಡ್ಳು ಏಳು ಸುತ್ತು ತಿರಗಾಡಿ ಆಮೇಲೆ ಹರಿಶಿಣ ತಗಂಡು ಚಿನ್ನದ ಮೇಲ ಹೊಡೆದಾಡಿದಂಗಾಗಿ ಬಿಡ್ತು. ಹೊ ಇದೇನ ಐತಿ ಅಂತ ಅವನಿಗೆ (ಕೋಣಸಿಗೆ) ಹೆದ್ರಿಕೆ ಬರಕೆ ಶುರುವಾಯಿತು. ಆ ಮೇಲೆ ಏಳು ಸುತ್ತು ತಿರಗಾಡಿ ಆಮೇಲೆ ತಿರಶೂಲದಿಂದ ಹೊಡಿತು ನೋಡು. ಗುರುತಾಯಿತು, ಬೆನ್ನಿಗೆ ಹೊಡಿತು ನೋಡು ಗುರುತು ಮಾಡಿಕೊಂಡು ಹೋ ಇದು ಮನುಷ್ಯ ಅಲ್ಲ ಇದು ರಾಕ್ಷೇಸ ಅಂತ ಗೂಟ ಕಿತ್ಕಂಡು ಹೋಡ್ತು. ಅದರ ಜೊತಿಗೆ ಇದೂ ಹೋಡ್ತು. ಹೋಡ್ತ ಹೋಡ್ತ ಎಲ್ಲಿಗೋದ್ರು ಸಿಕ್ಕಂಗಿಲ್ಲ. ಅಷ್ಟರಗೂನು ಹಿಡಿದು ಬಿಡ್ತು. ಹಿಡ್ದು ತಿನ್ನಬೇಕಂದ್ರೆ ಅವಾಗ ಹೇಳ್ತು 'ತಿನ್ನದು ತಿಂತೀಯ ತಾಯಿ, ಈ ನನ್ನ ಚರ್ಮನಾರೆ ಮಂಡಿಗೆ ಕಳಿಸಬೇಕ, ವ್ಯಾಪಾರಕ್ಕೆ ಕಳಿಸಬೇಕ' ಅಂತ ಕೇಳ್ತು 'ಕಳುಸ್ತೀನಿ' ಅಂತ ಹೇಳ್ತು. ಆಮೇಲೆ ಎಲ್ಲಾ ಹಕ್ಕಿಗಳಿದ್ದವು, ರಾಮ ಲಕ್ಷಣನ ಜಗಳ ನೋಡ್ದ ಹಕ್ಕಿಗಳು. ಈ ರಕ್ತ ಹರಿತಾ ಇರದ್ನ ನೋಡಿಕೊಂಡು ಎಲ್ಲಾ ಹಕ್ಕಿಗೂ ರಕ್ತ ಕುಡಿತಾ ಕುಡಿತಾ ಅವುಗಳ ಮೂಗಿಗೂ ರಕ್ತ ಸಿಡೀತು. ಎಲ್ಲೆಲ್ಲಿ ಜಗಳ ನೋಡಿದೆ. ರಾಮಲಕ್ಷ್ಮಣರ ಜಗಳ ನೋಡಿದೆ. ಎಷ್ಟೆಷ್ಟು ಜಗಳ ನೋಡಿದೆ ಈ ಅಮ್ಮನ ಜಗಳದ ಮೇಲೆ ಜಗಳನೆ ಇಲ್ಲ. ಕುಡಿತ ಕುಡಿತ ನಮ್ಮ ಮಾಟಿಗೂ ಸೈತ ರಕ್ತ ತಗಲಿಬಿಡ್ತು ಅಂತೇಳಿ ಆ ಹಕ್ಕಿಗಳು ಮಾತಾಡಿಕೊಂಡವು.

ಪುರಾಣ

ಹಕ್ಕಿಪಿಕ್ಕಿಯರ ಮೂಲ ಪುರುಷನೆನ್ನಲಾದ ನತ್ತಾರನ ಮಗ ನಾಗ್ರಿಯೆಂಬುವನು ದೇವಿಯ ಪರಮಭಕ್ತನಾಗಿದ್ದನೆನ್ನಲಾಗಿದೆ. ಆತ ಅಬುಗಡದಿಂದ ಕಾಳನಾಥ ಮತ್ತು ಮೇವಾಡದಿಂದ ಭೈರುನಾಥ್ ಎಂಬುವವರನ್ನು ದೇವಿಯ (ಅಖಾಡ್) ರಥ ಎಳೆಯಲು ನೇಮಿಸಿಕೊಂಡಿದ್ದಿರಬಹುದು ಅವರನ್ನು ತನ್ನ ಮಕ್ಕಳಂತೆ ಕಾಪಾಡಿಕೊಂಡು, ದೇವಿಯನ್ನು ಭಕ್ತಿಯಿಂದ, ಪೂಜಾ ವಿಧಿ ವಿಧಾನಗಳಿಂದ ಭಜಿಸಿದರೆ ಬೇಡಿದವುಗಳನ್ನು ಕೊಡುವಳೆಂದು ಮನದಟ್ಟು ಮಾಡಿದ. ಅಂದಿನ ದಿನಗಳಲ್ಲಿ ದೈನದಲ್ಲಿ ಅಪಾರ ಭಕ್ತಿಯುಳ್ಳ ಜನ ತಮಗೆ ದಾನವನ್ನೆ ಕೊಟ್ಟು ಬಿಡುತ್ತಿದ್ದರು. ಇದರಿಂದ ವಾಗ್ರಿ ಐಕ್ಯನಾದರೂ ಆತನ ಸಾಕು ಮಕ್ಕಳಾದ ಕಾಳ್‌ನಾಥ್ ಭೈರುನಾಥರು ದೇವಿಯ ಗದ್ದುಗೆಯಲ್ಲಿ ಸಕಲ ಪೂಜಾ ವಿಧಿವಿಧಾನಗಳನ್ನೂ ಚಾಚೂ ತಪ್ಪದೆ ನಡೆಸುತ್ತಿದ್ದರು. ದೂರದೂರದವರೂ ಕೂಡ ಗದ್ದುಗೆಗೆ ಬಂದು ಪೂಜೆ ನಡೆಸಿ, ದಾನಧರ್ಮಾದಿ ಕಾರ್ಯನಡೆಸಿ ಹೋಗುತ್ತಿದ್ದರು. ಎಲ್ಲೆಲ್ಲೂ ಸುಭಿಕ್ಷಾ ವ್ಯವಸ್ಥೆಯಿತ್ತು. ಪೂಜೆಗೆ ಬರುವವರ ಪೂಜೆಗೆ ಹೋಗುವವರ ಪರಸ್ಪರ ದರ್ಶನದಿಂದಲೇ ಪುನೀತರಾದವರೆಷ್ಟೋ ಮಂದಿ, ಕೆಲವರಂತೂ ದಾನ ಧರ್ಮಾದಿಗಳಿಂದ ಪಡೆದುಕೊಂಡುದ್ದನ್ನೇ ಸಾಕಷ್ಟು ಕೂಡಿಡುವಂತವರಾಗಿದ್ದರು. ಹೀಗಾಗಿ ಕಾಳ್‌ನಾಥ್ ಭೈರುನಾಥ್ ಚೆನ್ನಾಗಿ ಬಾಳಿ ಬದುಕುಳಿದರೆನ್ನಲಾಗಿದೆ. ಹೀಗಿರುವಾಗ ಒಮ್ಮೆ

ದೇವಿಯು ಲೋಕಸಂಚಾರಕ್ಕಾಗಿ ಹೊರಡುವ ಮನಮಾಡಿದಳು. ಎಲ್ಲಿಂದಲೋ ಭಕ್ತ ಸಮೂಹಗಳ ಒಕ್ಕೊರಳ ಧ್ವನಿ ಕೇಳಿದಾಗಲೆಲ್ಲಾ ಅವರ ಕಷ್ಟ ಕಾರ್ಪಣ್ಯಗಳನ್ನು ನಿವಾರಿಸುವ ಮನವಾಗಿತ್ತು. ಕಾಳ್‌ನಾಥ್ ಭೈರ್‌ನಾಥನಿಗೆ ತನ್ನ ಹರ್ಯೋ ಹಸಿರು ರಥವನ್ನು ಸಿದ್ಧಗೊಳಿಸಲು ಹೇಳಿದಾಗ, ಅವರು ಹೋಗಿ ನೋಡಿದರೆ ಎಷ್ಟೋ ವರ್ಷಗಳಿಂದ ಮೂಲೆಸೇರಿ ಛಿಗಛಿಗಿಸುವ ರಥ ಜಂಗ್ ತುಕ್ಕು ಹಿಡಿದು ಮುಟ್ಟಿದಾಕ್ಷಣ ಕಳಚಿ ಬೀಳುತ್ತದೇನೋ ಎಂಬಂತ್ತಿತ್ತು. ಛಿನ್ನಬಿನ್ನಗೆ ಸರಿಮಾಡುವುದು ಕಷ್ಟದ ಕೆಲಸವೇನಲ್ಲ ಕಣ್ಣುಮುಚ್ಚಿ ತೆಗೆಯುವಷ್ಟರಲ್ಲಿ ಪ್ರಕೃತಿಯೇ ರೂಪವೆತ್ತಂತೆ ಫಲ ಪುಷ್ಪ ಬಳ್ಳಿ ಗಳಿಂದಲಕೃತವಾದ ಹರ್ಯೋರಥ್ ಹಸಿರು ರಥ ಸಿದ್ಧವಾಯ್ತು ಪರಿಕಳಿತ ದೇವಿಯ ರಥದ ಅಬಾಡಿಯೋ ಡಗಾವ್ ಚಕ್ರಗಳು ಸರಿಯದಾಯ್ತು. ಕಾಳ್‌ನಾಥ್ ಭೈರುನಾಥ್‌ನಿಂದ ವಿಷಯ ತಿಳಿದು ಪ್ರಿಯಂ ದೇವಿಯೇ ಕೆಳಗಿಳಿದು ಬಲಗೈನಿಂದ ಚಕ್ರ ಅಬ್ಬಾಡಿಯೋವನ್ನು ಒತ್ತಿದಾಗ ಸರಿಯಿತು. ಆದರೆ ಕೈ ತರಚಿ ಚಿಕ್ಕ ಬೊಬ್ಬೆ ಉಂಟಾಯಿತು. ಇದನ್ನು ಕಂಡು ಎಲ್ಲರಿಗೂ ಭಯ ಆವರಿಸಿತು. ದೇವಿಯಂಶ ನೆಲಕ್ಕೆ ಬಿದ್ದರೆ ಇನ್ನೇನು ಕಾದಿದೆಯೋ ಎಂದು ಹೆದರಿ ಬೆರಗುಗಳಿಂದ ನೋಡತೊಡಗಿದರು. ಜಗನ್ಮಾತೆಯು ಕರುಣಾಮಯಿಯೂ ಆದ ದೇವಿ ಅವರ ಇಂಗಿತವನ್ನರಿತು ತನ್ನಂಶ ವ್ಯರ್ಥವಾಗಿ ಬೇರಾವುದೋ ಅನಾಹುತಕ್ಕೆ ಕಾರಣವಾಗುವುದನ್ನು ತಪ್ಪಿಸಲು ಶಿಶುವಿನ ರೂಪ ಕೊಟ್ಟಳು. ಅಂಗೈಯಿಂದಾದ ಸುಂದರ ಮಗುವಿಗೆ ಪರಶುರಾಂಪೂತ್ ಎಂದು ಹೆಸರಿಟ್ಟು, ಕಾಳ್‌ನಾಥ್ ಭೈರುನಾಥ್‌ರನ್ನು ಮಾವಂದಿರಾಗಬೇಕು ಎಂದು ಪರಿಚಯಿಸುತ್ತಾಳೆ. ಅಲ್ಲಿಂದ ಮುಂದೆ ಹೊರಟ ರಥ ಹಲವು ದೇಶ ಕೋಶಗಳನ್ನು ದಾಟಿ ನಡೆಯುತ್ತದೆ. ಎಷ್ಟೋದಿನಗಳ ತಿರುಗಾಟದಲ್ಲಿ ಕಾಳ್‌ನಾಥ್ ಭೈರುನಾಥ್‌ರಿಗೆ ಮಾನವ ಸಹಜವಾದ ತೃಷೆ ಬಾಯಾರಿತು ಪಕ್ಕದಲ್ಲೆ ಸುಂದರ ಕೊಳವಿರುವ ಸೂಚನೆ ಅಲ್ಲಿಂದ ಬರುತ್ತಿರುವ ಸುಗಂಧ ಪರಿಮಳದಿಂದ ಭಾಸವಾಗಿತ್ತು. ಆದಕ್ಕಾಗಿ ದೇವಿ ಯಣತಿ ಪಡೆದರು. ದೇವಿಗೇಕೋ ಅನುಮಾನವಾಗಿ ಕತ್ತಿ ತಲವಾರನ್ನು ಕೊಟ್ಟು ಏನಾದರೂ ಸಂಕಟ ಒದಗಿದರೆ ನನ್ನ ಹೆಸರು ಹೇಳಿ ಇದರಿಂದ ನಿವಾರಿಸಿಕೊಳ್ಳಿ ಎಂದು ಕೊಡುತ್ತಾಳೆ. ದುಷ್ಟಮಹಂಕಾಳಿಯು ಬೆಳೆಸಿದ್ದ ಅಮೃತವಾಡಿ ಎಂಥವರನ್ನು ತನ್ನೆಡೆಗೆ ಆಕರ್ಷಿಸಿತ್ತಿತ್ತು. ಅಲ್ಲಿಗೆ ಹೋದ ಋಷಿಗಳಾಗಲಿ ಋಷಿಕುಮಾರರಾಗಲೀ ಹಿಂದಿರುಗುತ್ತಿರಲಿಲ್ಲ. ಎಲ್ಲರೂ ಅಲ್ಲಿ ಕಾವಲು ಕಾಯುವ ಪಹರೆಯವರಿಂದ ಹತರಾಗುತ್ತಿದ್ದರು. ಮಹಂಕಾಳಿಯೆಂಬ ದೈತ್ಯ ರಕ್ಕಸ ಪಶು ಪಕ್ಷಿಗಳ ಬೇಟೆಗಾಗಿಯೇ ಅಮೃತವಾಡಿ ಬೆಳೆಸಿದ್ದ ಅದರ ಕಾವಲಿಗಾಗಿ ಅನೇಕ ಪಹರೆಯವರನ್ನು ನೇಮಿಸಿದ್ದ. ಹಿಂದಿರುಗಿ ಬಾರದವರಿಗಾಗಿ ರೋಧಿಸುತ್ತ ದುಷ್ಟನನ್ನು ಸಂಹರಿಸುವಂತೆ ಆರ್ತರಾಗಿ ಮೊರೆಯಿಡುವ ದನಿಯೇ ದೇವಿಗೆ ಕೇಳಿಸುತ್ತಿದ್ದದ್ದು. ಅಮೃತವಾಡಿ ತಲುಪಿದ ಕಾಳ್‌ನಾಥ್ ಭೈರುನಾಥ್‌ರಿಗೆ ಯಾರೂ ಕಾಣಲಿಲ್ಲ. ಎಲ್ಲ ಅವಿತು ಕುಳಿತಿದ್ದರು. ಕಾರಣ ಅವರ ಎತ್ತರದ ಧೃಢಕಾಯ ನಿಲುವು ಕೈಯಲ್ಲಿ ಝಳಿಸುವ ತಲವಾರನ್ನು ಕಂಡು ಇಷ್ಟು ಸುಂದರವಾದ ಅಮೃತವಾಡಿ ಅಮೃತವನಗೆ ಕಾವಲಿರಲಾರದೆಂದೆನಿಸಿ ಯಾರಾದ್ದೀರಿ ದಯವಿಟ್ಟು ಬನ್ನಿ ನಮಗೆ ಹಸಿವು ಬಾಯಾರಿದೆ ಮೂರು ಸಲ ಕೂಗಿದರು ಯಾರು ಉತ್ತರಿಸಲಿಲ್ಲ.

ಕಾಣಿಸಿಕೊಳ್ಳಲಿಲ್ಲ. ಪಾಂಚ್ ಪಥ್ಯಾ ಐದು ಅಶುರೂಪಿಗಳನ್ನು ಕಟ್ಟೆಯ ಮೇಲಿಟ್ಟು ನೀರು ಕುಡಿದರು. ದಣಿವಾರಿದ ಮೇಲೆ ಹಣ್ಣು ತಿನ್ನಲು ಮುಂದಾದರೂ ಗಿಡಮರದಲ್ಲಿರಬಹುದಾದ ಹಣ್ಣುಗಳು ಮೊದಲೇ ಹಣ್ಣಾಗಿದ್ದರಿಂದ ಕೈ ಹಾಕಿ ಒಂದು ಕೀಳುವುದರೊಳಗೆ ನೂರಾರು ಪುತಪುತನೆ ಉದುರಿ ವನದಲ್ಲೆಲ್ಲಾ ಚೆಲ್ಲಾಪಿಲ್ಲಿಯಾಗಿ ಕಾಣತೊಡಗಿತು. ಇನ್ನೇನು ಹೊರಡು ವಷ್ಟರಲ್ಲಿ ಸುತ್ತವರಿದ ದೈತ್ಯಕಾವಲಿನವರು ಹಿಡಿಯಿರಿ ಬಿಡಬೇಡಿ ಇವತ್ತು ನಮ್ಮೊಡೆಯನಿಗೆ ಒಳ್ಳೆಯ ಬೇಟೆ ನುಗ್ಗಿಬಂದರು. ಎಷ್ಟೇ ದಾದಿಯರೂ ಅವರ ಸಂಖ್ಯೆ ಬರುತ್ತಲೇ ಹೋಯಿತು. ದೇವಿಯು ತಮ್ಮನ್ನು ಎಚ್ಚರಿಸಿ ಕೊಟ್ಟ ತಲವಾರಿನ ನೆನಪಾಗಲೇಯಿಲ್ಲದ್ದರಿಂದ ಅವರು ಸೋಲನ್ನನುಭವಿಸಬೇಕಾಯ್ತು. ಹರಿದ ಕೋಡಿ ರಕ್ತದಿಂದಾಗಿ ದೇವಿಯ ರಥದ ಚಕ್ರಕ್ಕೆ ಢಕ್ಕ ಡಿಕ್ಕಿ ತಗುಲಿದಾಗ ಮುಂದೆ ಬರುತ್ತಿದ್ದ ಕಾಳ್‌ನಾಥ್ ಭೈರುನಾಥ್‌ರಿಗೆ ಇದೇನಿದು ರಕ್ತದ ಕೋಡಿ ಏನಾಯಿತು ಎಂದಾಗ ಮಿರಕ್ಕಿಬೂರದಿನೊ ಉಕಾಳ್ಯಾನೊ ಸಾಣ ಮಿರಿಮಿರಿ ಸೋನಿಮಳೆ ಜೋರಾಗಿ ಸುರಿದು ಹರಿದು ಬರುವಾಗ ಕೆಸರನ್ನು ಸೇರಿ ಕೆಂಪಾಗಿ ಹರಿದು ಬಂದದೆಯಷ್ಟೇ ಎನ್ನುತ್ತಾರೆ. ಉಳಿದುಳಿದವರಲ್ಲಿ ತಮ್ಮೊಡೆಯ ಮಹಂಕಾಳಿ ಯಲ್ಲಿಗೆ ಸುದ್ದಿ ಮುಟ್ಟಿಸಲು ಓಡಿದರೆ ಇನ್ನುಳಿದವರು ಎಡೆಬಿಡದೆ ಬೆನ್ನಟ್ಟಿ ಬರುವುದನ್ನು ಕಂಡು ದೇವಿಯೇ ಅವರನ್ನು ತಾನು ನೋಡಿಕೊಳ್ಳುವುದಗಿ ಹೇಳಿ ಪರಶುರಾಂ ಪೂತ್ ನನ್ನ ಅಲ್ಲಿಯೇ ಬಿಟ್ಟು, ದಂಡನ್ನೆಲ್ಲಾ ಬಿರುಗಾಳಿಯಲ್ಲಿ ಅಟ್ಟಿಸಿಕೊಂಡು ಹೋಗುತ್ತಾಳೆ. ಎಷ್ಟು ವರ್ಷಗಳು ಕಳೆದರೂ ದೇವಿಯ ಆಗಮನವಾಗಲಿಲ್ಲ, ರಥದ ಬಳಿ ಭರ್ಕನಷ್ಟೆ ಉಳಿಯುತ್ತಾನೆ. ದೇವಿಯನ್ನರಸುತ್ತಾ ಕಾಳ್‌ನಾಥ್, ಭೈರ್‌ನಾಥ್‌ರು ದಿಕ್ಕಿಗೊಬ್ಬರು ನಡೆಯುತ್ತಾರೆ. ಪರಶುರಾಂಪೂತ್ ಗುಜರಾತ್‌ಕಡೆ ನಡೆದು, ಅಲ್ಲೇ ಬೆಳೆದು ದೇವಶುಭಳನ್ನು ಮದುವೆಯಾಗಿ ಜಂಬು ಜಂಬರ್ನೆನಲ್ಲಿ ನೆಲೆಸುತ್ತಾನೆ. ಈಗಿರುವ ಜಮ್ಮೂ, ಕಾಶ್ಮೀರವೆ ಆಗಿನ ಜಂಬೂ ಜಂಬುರ್ನೆ ಇರಬಹುದು. ನಂತರ ಅವರಿಂದಾದ ವಂಶಾವಳಿಗಳಿಗೆ ಗುಜರಾತ್‌ವಾಳರೆಂದೇ ಕರೆವುದನ್ನು ಕಾಣಬಹುದು. ಆ ವಂಶದವರಲ್ಲಿ ನೂರಾರು ಆಪ್ತ ಪಂಗಡಗಳಾಗಿ ಇರುವುದನ್ನು ಈಗಲೂ ಕಾಣಬಹುದು. ಕಾಳ್‌ನಾಥ್ ಭೈರುನಾಥ್‌ರು ದೀರ್ಘಾಯ್ಯುಷ್ಯಗಳಾಗಿದ್ದರೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ. ಪೌರಾಣಿಕ ಯುಗದಲ್ಲಿ ದೇವಿಯೊಂದಿಗಿದ್ದವರು ಮುಂದೆ ಮದುವೆಯಾಗಿ ದೇವಿಯನ್ನು ಪೂಜಿಸುವ ಸಂತಾನ ಪಡೆವಲ್ಲಿ ಸಫಲರಾದರೆಂಬ ಹಿನ್ನೆಲೆಯನ್ನು ಅವರ ಮುಂದೆ ವಂಶಾವಳಿ ಬೆಳೆದು ಬಂದಿರುವದನ್ನು ಜನಜನಿತವಾಗಿ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಹರಿದು ಬಂದ ಮೌಖಿಕ ಸಾಹಿತ್ಯವನ್ನು ಹೇಳುವ ಹಿರಿದಲೆಗಳ ಸಾಕ್ಷಿಯಿರುವುದನ್ನು ಈಗಲೂ ಕಾಣಬಹುದು.

### ಲಾವಣಿಗಳು

ಜನಪದ ಸಾಹಿತ್ಯದಲ್ಲಿ ಲಾವಣಿ ಪ್ರಮುಖ ಪ್ರಕಾರಗಳಲ್ಲೊಂದಾಗಿದೆ. ಜನಪದ ಗೀತೆಗಳಂತೆ ಲಾವಣಿಗಳು ಸಹ ಅನಕ್ಷರಸ್ಥ ಸಮಾಜದಲ್ಲಿ ಹುಟ್ಟಿ ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದಿರುತ್ತದೆ. ಸಂಪ್ರದಾಯಗಳನ್ನು ಪಾಲಿಸುವ ಜನರೇ ಅವುಗಳ ವಾಹಕರು. ಹಕ್ಕಿಪಿಕ್ಕಿಯರು

ಲಾವಣಿಗಳನ್ನು ಗೀದ್ ಎಂದು ಕರೆದುಕೊಳ್ಳುತ್ತಾರೆ. ಹಿಂದಿಯ ಗೀತಾದಿಂದ ಬಂದಿದೆ. ಹಾಡು ಮತ್ತು ಲಾವಣಿಗಳ ನಡುವಿನ ವ್ಯತ್ಯಾಸ ಅರಿಯದ ಅವರು ಗೀತರೂಪದ ಎಲ್ಲಾ ಪ್ರಕಾರಗಳಿಗೂ ಗೀದ್ ಎನ್ನುತ್ತಾರೆ. ಸಂಪ್ರದಾಯಿಕ ವಾದ್ಯಗಳಾದ ಡೆಚ್ಕು, ಧಾಕ್, ತಂಬಡಿ ವಾಖಿಳಿ ಕೊಳಲು ಕಂಚಿನ ಗಂಗಾಳ, ತಾಳಗಳನ್ನು ಬಳಸಿ ಲಾವಣಿಗಳನ್ನು ಹಾಡುತ್ತಾರೆ. ಹೆಚ್ಚಾಗಿ ಹಬ್ಬ, ಹಂದಿನ, ಮದುವೆಗಳಲ್ಲಿ ಪುರುಷರು ಮಹಿಳೆಯರು ಹಾಡುವದಿದೆ. ಹಬ್ಬಗಳಲ್ಲಿ ಪುರುಷರು ಲಾವಣಿ ಹಾಡುವಾಗ ಕಥೆಯಲ್ಲಿ ಅರ್ಥವಾಗದ ಜಟಿಲ ಭಾಗಗಳನ್ನು ಸರಳವಾಗಿ ಬಿಡಿಸಿ ಶ್ರೋತೃಗಳಿಗೆ ಸುಲಭವಾಗಿ ಅರ್ಥವಾಗುವಂತೆ ವಿವರಣೆ ನೀಡುತ್ತಾ ಮತ್ತೆ ಮುಂದಿನ ಭಾಗವನ್ನು ಹಾಡುತ್ತಾರೆ.

ಮೇವಾಡೋಪವರಲ್ಲಿ ಗುರು ಕಳಗಳ್ ಕಥೆಯನ್ನು, ಗುಜರಾತ್ಯೋರಲ್ಲಿ ಗುರುಬಿಚ್ಯೋ ಕಥೆಯನ್ನೂ, ಕಾಳವಾಳರಲ್ಲಿ ಗುರುಲಾಲೂ ಜಗ್ಮಣ್ ಕಥೆ ಪವಾರ್‌ಗಳಲ್ಲಿ ಗುರು ಉ ಬಾರ್‍ಯೋ ಕಥೆಯನ್ನು ಎಲ್ಲಿಲ್ಲದ ಉತ್ಸಾಹದೊಂದಿಗೆ ಲಾವಣಿಗಳಲ್ಲಿ ಹಾಡುತ್ತಾರೆ.

**ಐತಿಹ್ಯಗಳು**

ಹಕ್ಕಿಪಿಕ್ಕಿಗರಲ್ಲಿ ಸಾಕಷ್ಟು ನೈಜ ಘಟನೆಗಳ ಐತಿಹ್ಯಗಳು ಕಂಠಸ್ತವಾಗಿಯೆ ತಲೆಮಾರಿನಿಂದ ತಲೆಮಾರಿಗೆ ಹರಿದುಬಂದಿದೆ. ಅವುಗಳಲ್ಲಿ ಒಂದೆರಡನ್ನು ಹೇಳುವ ಪ್ರಯತ್ನ ಮಾಡಲಾಗಿದೆ. ಹಕ್ಕಿಪಿಕ್ಕಿ ಸಮುದಾಯದಲ್ಲಿ ನಿಜವಾದ ನಡೆದ ನೈಜ ಹಾಗೂ ಸತ್ಯ ಘಟನೆ.

ಐತಿಹ್ಯ ೧. ಒಂದು ದಿನ ಸಿದ್ಧ ಬೇಟೆಯಾಡಲು ಹೋದಾಗ ಎರಡು ಕೌಜನ ಹಕ್ಕಿ ನೋಡಿದ. ಆ ಸ್ಥಳದಲ್ಲಿ ಲಂಬಾಣಿ ಹೆಂಗಸನ್ನುಸುಟ್ಟಿದ ಬೂದಿ ಗುಡ್ಡೆಯಿತ್ತು. ಅದನ್ನು ಪರಿಗಣಿಸದೇ ಮೊದಲು ಆ ಕೌಜನ ಹಕ್ಕಿಯನ್ನು ಹಿಡಿಯಬೇಕೆಂಬ ಆತುರದಲ್ಲಿದ್ದ. ಮಗ್ರಿ ಬಲೆ ಹಾಕಲು ಬೋನು ಬಲೆ ಮುಂದಾದ ನಂತರ ನೋಡುತ್ತಿದ್ದಂತೆಯೇ ಆ ಎರಡು ಕೌಜನ ಹಕ್ಕಿ ಮಾಯವಾಯಿತು. ಆ ಸ್ಥಳದಲ್ಲಿ ಎಷ್ಟು ಹುಡುಕಿದರೂ ಕಾಣಲಿಲ್ಲ. ಬೇಜಾರಾಗಿ ಥೂ ಇದೆಂಥಾ ಕೌಜನ ಹಕ್ಕಿ ಎಲ್ಲಿ ಹೋಯಿತು ಎಂದು ಹೇಳಿ ಹಿಂತಿರುಗಿ ತನ್ನ ತಾಂಡೇಯ ಕಡೆಗೆ ಹೊರಟಾಗ ಮತ್ತೊಮ್ಮೆ ತಿರುಗಿ ನೋಡಿದಾಗ ಆ ಎರಡು ಕೌಜನ ಹಕ್ಕಿಯೂ ಮೊದಲಿನ ಸ್ಥಳದಲ್ಲಿಯೇ ಕಾಣಿಸಿತು. ಆಗ ಸಿದ್ಧ ನಾನು ಎಷ್ಟೂ ಹುಡುಕಿದರೂ ಕಾಣಲಿಲ್ಲವಲ್ಲ ಏನಿದು ಆಶ್ಚರ್ಯ ಅಂತ ಹೇಳಿ ಮನದಲ್ಲೆ ನೆನೆದು ಮನದಲ್ಲೆ ಅಂದು ಕೊಳ್ಳುತ್ತಾ ಬಲೆಯನ್ನು ಬಿಚ್ಚಿ ಹಾಕಿದ. ಸ್ವಲ್ಪ ದೂರದಲ್ಲಿ ಹೋಗಿ ಆ ಹಕ್ಕಿಯನ್ನು ಓಡಿಸಿದ ಬಲೆಯಲ್ಲಿ ಹೋಗಿ ಆ ಎರಡು ಪಕ್ಕಿಯು ಮತ್ತೆ ಮಾಯವಾಯಿತು. ಹೀಗೆ ಅನೇಕ ಸಲವಾದರೂ ಅರ್ಥವಾಗದೇ ಅಥವಾ ದೇವರನ್ನು ನೆನೆಯದೇ ಆ ಹಕ್ಕಿಯನ್ನು ಹಿಡಿಯಲು ಮಾತ್ರ ಗುರಿಯನ್ನು ಇಟ್ಟುಕೊಂಡಿದ್ದ. ಕೊನೆಯ ಸಲ ಹೇಗೋ ಹಾಗೋ ಮಾಡಿ ಆ ಹಕ್ಕಿಯನ್ನು ಬಲೆಯಲ್ಲಿ ಬೀಳಿಸಿದ. ಆದರೆ ಆ ಹಕ್ಕಿಯು ಆಗಿರದೇ ಅಲ್ಲಿ ಸುಟ್ಟಿದ ಲಂಬಾಣಿ ಹೆಂಗಸಿನ ಬೂದಿಯ ಮೇಲೆ ಕಾಲಿಟ್ಟು ಆ ಹಕ್ಕಿಯನ್ನು ಹಿಡಿದ. ಆ ತಕ್ಷಣವೇ ಅಶರೀರವಾಣಿಯಂತೆ ಮಾತು ಕೇಳಿಸಿತು. ನನ್ನನ್ನು ಬಿಟ್ಟು ಬಿಡು ನಾನು ಮೊದಲೇ ಸತ್ತು ಮೋಕ್ಷವಿಲ್ಲದೇ ಪರದಾಡುತ್ತಿದ್ದೇನೆ. ಇನ್ನೊಂದು ಸಲ ಸಾಯಿಸದೇ ನನ್ನನ್ನು ಬಿಟ್ಟುಬಿಡು ಎಂದು ಶರೀರವಾಣಿ ನುಡಿದು

ಸುಮ್ಮನಾಯಿತು. ಇಂತಹ ಸಂದರ್ಭದಲ್ಲಿ ಸುಮಾರು ೯ ತಾಸಿನ ರಾತ್ರಿಯಾಗಿರಬಹುದು. ಯಾವ ಗಮನವಿಲ್ಲದೇ ಆ ಎರಡು ಕೌಜನ ಹಕ್ಕಿಯನ್ನು ಸಾಯಿಸಿ ಬಿಟ್ಟ. ನಂತರ ತಾಂಡೆಗೆ ಹೋದಾಗ ತನ್ನ ಹೆಂಡತಿಯಾದ ಶುಕ್ಕುಲ್ ರಾಗಿ ಮುದ್ದೆ ಮಾಡಿ ಇಟ್ಟಿದಳು. ಈ ಎರಡು ಕೌಜನ ಹಕ್ಕಿಯ ಪುಕ್ಕ ತೆರೆದು ಕೊಟ್ಟನು. ಅದನ್ನು ಸಾರು ಮಾಡಿ ಊಟ ಬಡಿಸಿದಳು. ಆಗ ನಡೆದ ಘಟನೆಗಳನ್ನು ವಿವರಿಸಿದ. ಕೆಲವರು ನಂಬಿದರು, ಕೆಲವರು ನಂಬಲಿಲ್ಲ. ಆ ಘಳಿಗೆಯಲ್ಲೆ ಮೊದಲ ಗುಕ್ಕನ್ನು ಉಣ್ಣುವಾಗ ಆ ಗುಕ್ಕಿನ ಜೊತೆಯಲ್ಲಿ ಹೊಟ್ಟೆಯೊಳಗೆ ಪ್ರೇತಾತ್ಮವಾಗಿ ಸೇರಿಕೊಂಡಳು. ನಂತರ ಬೆಳಿಗ್ಗೆ ಮೌನ ರೂಪವಾಗಿ ಯಾರ ಜೊತೆಯು ಮಾತನಾಡದೇ ಸುಮ್ಮನಿರುತ್ತಿದ್ದ. ಹೀಗೆ ಎಷ್ಟೋ ದಿನ ಕಳೆದರೂ ಊಟ ನೀರು ಯಾವುದು ಇರಲಿಲ್ಲ. ಆದರೆ ಪ್ರತಿ ಮಧ್ಯರಾತ್ರಿಯಾದ ನಂತರ ಅವು ಹೊರಗಡೆ ಬಂದು ಆತನನ್ನು ಅವ ಮನಸ್ಸಿಗೆ ಬಂದ ಜಾಗದಲ್ಲೇ ಕರೆದುಕೊಂಡು ಹೋಗುತ್ತಿದ್ದಳು. ಇಡೀ ರಾತ್ರಿ ಆಟವಾಡಿಸಿ ಓಡಾಡಿಸಿ ತನಗೆ ಬಂದ ಆಸೆಯನ್ನು ತೀರಿಸಿ ಬೆಳಗಿನ ಜಾವ ಆದ ನಂತರ ಮತ್ತೆ ಪುನಃ ಆತನಲ್ಲಿ ಸೇರಿಕೊಳ್ಳುತ್ತಿದದಳು. ಹೀಗೆ ಅನೇಕ ದಿನ ತಿಂಗಳು ಕಳೆಯಿತು. ತಮ್ಮ ಕುಲದೇವತೆಗಳಿಗೂ ಹಬ್ಬ ಮಾಡಿದರೂ ನಂಬಿ ಪ್ರಯೋಜನವಾಗಿಲಿಲ್ಲ. ಒಂದು ಬ್ರಾಹ್ಮಣನಲ್ಲಿಗೆ ಹೋಗಿ ತಾಯ್ತ ಕಟ್ಟಿಸಿದರು. ಮತ್ತೆ ಚಿನನದ ಸೂಜಿಯಿಂದ ಸುಟ್ಟು ಲವು ಕೀಲುಗಳ ನಡುವೆ ಬರೆ ಹಾಕಿದರು. ಮತ್ತೆ ತದನಂತರ ಒಂದು ತೊಡ್ಡ ಮಡಕೆಯಲ್ಲಿ ಆರು ಏಳು ಕೆ.ಜಿ. ಒಣ ಮೆಣಸಿನಕಾಯಿ ಹಾಕಿ ಬೆಂಕಿಯಕೆಂಡದ ಮೇಲೆ ಹಾಕಿ ಆತನನ್ನು ಮುಂದೆ ಕೂರಿಸಿ ದ್ವಟ್ಟಿಯನ್ನು ಹೊದಿಸಿದರು. ಹೀಗೆ ಮಾಡುವಾಗ ಕೆಮ್ಮಿ ಕೆಮ್ಮಿ ಸುಸ್ತಾಗಿ ಕಣ್ಣು ಕೆಂಪಾಗಿ ಮೂಗಿನಲ್ಲಿ ರಕ್ತ ಬಂದು ಸುಸ್ತಾದನು. ಎಷ್ಟು ಮಾಡಿದರೂ ಪ್ರಯೋಜನವಾಗಲಿಲ್ಲ. ಮೊದಲಿನಂತೆ ಬಿಡುತ್ತಿದ್ದರೆ ಬಹುಶಃ ಬದುಕುತ್ತಿದ್ದರೇನೋ ಏಕೆಂದರೆ ಪ್ರತಿ ರಾತ್ರಿಯು ಆತನ್ನು ಕರೆದುಕೊಂಡು ಹೋಗಿ ಆಟವಾಡಿ ಕರೆದುಕೊಂಡು ಬರುತ್ತಿದ್ದಳು. ಇದಲ್ಲದೆ ಮತ್ತೇ ಬಂಗಾರದ ಸೂಜಿಯಿಂದ ಸುಟ್ಟಿ ಬರೆ ಹಾಕಿರುವುದರಿಂದ ಅವಳು ಮತ್ತೆ ಹೊರಗೆ ಬಾರದೇ ಹಾಗಾಯಿತೇನೋ ಅಂದು ಕೊಳ್ಳಬಹುದು. ಆಗ ಶುಕ್ಕುಲ್ ನಾಲ್ಕು ಇತಂಗಳ ಬಸುರಿಯಿದ್ದಾಗ ಸಿದ್ದ ತೀರಿಕೊಂಡ ಅನ್ನ ನೀರು ಇಲ್ಲದೇ ಕೊರಗಿ ತೀರಿಕೊಂಡ ಇವರ ವಂಶಾವಳಿಯು ಈಗಲೂ ಅಸ್ತಾಪನಹಳ್ಳಿಲ್ಲಿ ಅಲ್ಲದೇ ಶಿವಮೊಗ್ಗ ನರದಲ್ಲಿ ವಾಸವಾಗಿದ್ದಾರೆ. ಇದು ಸತ್ಯವಾಗಿ ನಡೆದಿರುವ ಘಟನೆಯಾಗಿದೆ.

ಸಿದ್ದ + ಶುಕ್ಕುಲ್

↓

ರಾಮೇಗೌಡ + ಸಂಪಿ + ಸಾರ್ಥಿ

↓

ಸುಶೀಲಪ್ಪ ಆರ್ + ಕುಮುದು ಬಿ — ಹೊಸ ಸ್ವೆನ + ಸಾಲ್ಪಾ

ಸುಶೀಲಪ್ಪ ಆರ್ + ಕುಮುದು ಬಿ → ಯುಗೇಶ್, ಭೊವನ್

ಹೊಸ ಸ್ವೆನ + ಸಾಲ್ಪಾ → ಯೋಗಿನಾಥ, ಯೋಗರಾಜ್

ಐತಿಹ್ಯ ೨. ಬಕ್ಷಿಯೆಂಬ ವ್ಯಕ್ತಿಯು ಪ್ರಾಣಿ ಪಕ್ಷಿಯನ್ನು ಹಿಡಿಯುವುದರಲ್ಲಿ ಶೂರನಿದ್ದನು. ಪ್ರಾಣಿ ಪಕ್ಷಿಗಳನ್ನು ಕೊಲ್ಲುವುದಕ್ಕೆ ಹಿಂಜರಿಯುತ್ತಿರಲಿಲ್ಲ. ಕರುಣೆಯೇ ಆತನಲ್ಲಿ ಇರಲಿಲ್ಲ. ಕಾಲ ಕ್ರಮೇಳವಾಗಿ ಬರಗಾಲದ ಕೊನೆಯ ಹಂತ ಹಾಗಾಗಿ ಹೆಂಡತಿ ಮರಿಮಕ್ಕಳನ್ನು ಸಾಕಲು ಪ್ರಾಣಿ-ಪಕ್ಷಿಗಳ ಮಾಂಸಗಳನ್ನು ಆಹಾರವನ್ನಾಗಿ ಜೀವನ ಸಾಗಿಸುತ್ತಿದ್ದರು. ತದನಂತರ ಆತನಿಗೆ ವಯಸ್ಸಾಯಿತು. ಆತನಿಗೆ ೭೦, ೮೦ರ ನಡುವಿನ ಅಂತರದಲ್ಲಿ ಸಾವು-ನೋವು ಆರಂಭವಾಯಿತು. ಒಂದು ದಿನ ಜೀವ ಹೋಯಿತು. ಎಲ್ಲರೂ ಆತನನ್ನು ನೋಡಿ ರೋಧಿಸಿದರು. ನಂತರ ಗುಂಡಿಯನ್ನು ಆಗೆದು ಬಂದರು. ಹಕ್ಕಿಪಿಕ್ಕಿಯರ ಶಾಸ್ತ್ರ ತಕ್ಕಂತೆ ಆ ಹೆಣವನ್ನು ಬಂದೇ ಬೊಂಬಿಗೆ ಕಟ್ಟಿ, ಹೊಳಲು ಗುಂಡಿಯ ಹತ್ತಿರ ಹೋದಾಗ ಬಕ್ಷಿಯ ಜೀವ ಬಂದಿತು. ಎಲ್ಲರೂ ಆಶ್ಚರ್ಯ ಪಡುವುದರಲ್ಲದೆ, ಕೆಲವು ಜನರು ಹೆದರಿ ಆ ಹೆಣವನ್ನು ಬಿಟ್ಟಿದರು. ತರುವಾಯ ಆ ಗುಂಡಿಯಲ್ಲಿ ಒಂದು ಕೋಳಿ ಮರಿಯನ್ನು ತಂದು ಮಣ್ಣು ಮಾಡಿ ಜೀವಿತನಾದ ಬಕ್ಷಿಯನ್ನು ಕರೆದುಕೊಂಡು ಹೋದರು. ಇಂತಹ ದುರ್ಘಟನೆ ಎಷ್ಟೋ ಸಲವಾದಾಗ ಜನರಲ್ಲಿ ಭಯವುಂಟಾಯಿತು. ಕೊನೆಯ ಹಂತದಲ್ಲಿ ಇದೇ ರೀತಿ ಇಂತಹ ದುರ್ಘಟನೆ ನಡೆದಾಗ ಮತ್ತೆ ಜೀವ ಬರಬಹುದೆಂಬ ಶಂಕೆಯಲ್ಲಿ ಆತನನ್ನು ಮಣ್ಣು ಮಾಡಿಯೇ ಬಿಟ್ಟರು. ಮೂರನೇ ದಿನದಲ್ಲಿ ತನ್ನ ತಿಥಿಯ ದಿವಸ ಭೂತವಾಗಿ ಜನರ ಮುಂದೆ ಆಗೋಚರವಾಗಿ ಮಾತನಾಡಲು ಪ್ರಾರಂಭಿಸಿದ. ಜನರ ಮನದಲ್ಲಿ ಭಯ ಭೀತಿ ಹೆಚ್ಚಾಗಿ ಗುಂಪು ಗುಂಪಾಗಿರುವ ಜನಗಳು ಬೇರೆ ಬೇರೆ ದಿಕ್ಕುಗಳಲ್ಲಿ ಹೋಗಲು ಪ್ರಾರಂಭಿಸಿದರು. ಆದರೆ ತನ್ನ ಮಗ ನರಗಯ್ಯ ಯಾವುದೇ ವಿಧದಿಂದಲೂ ಹೆದರಲಿಲ್ಲ. ತನ್ನ ತಾಂಡದ ಜೊತೆಯಲ್ಲೇ ಬಕ್ಷಿ ಭೂತನಾಗಿ ಬೆನ್ನುಹತ್ತಿದ. ಇದಲ್ಲದೇ ಇವರ ಆಕಳನ್ನು ಅಥವಾ ಎತ್ತನ್ನು ಹಿಡಿದು ಬೇಟೆ ಹೋಗುತ್ತಿದ್ದ. ಬೇಟೆಯಾಡಿದ ಪ್ರಾಣಿ-ಪಕ್ಷಿಗಳನ್ನು ತಾನೇ ನಿಜರೂಪವಾಗಿ ಮಾರುತ್ತಿದ್ದ ಪಾಶ ಬಲೆಯಾಗಲಿ, ಮಗ್ರಿಯಾಗಲಿ (ಬೋನಿನ ಬಲೆ), ನೋಡು ನೋಡುತ್ತಿದ್ದಂತೆ ಮಾಯವಾಗುತ್ತಿತ್ತು. ಇದಲ್ಲದೆ ಆ ತಾಂಡದಲ್ಲಿ ಮಯ್ಯಾಯೆಂಬ ವ್ಯಕ್ತಿಯನ್ನು ಸಾಯಿಸಿ ಜೊತೆ ಮಾಡಿಕೊಂಡ. ಇವರಿಬ್ಬರ ಜೋಡಿಯು ಸೇರಿಕೊಂಡರೆ ಆ ರಾತ್ರಿಯಲ್ಲೇ ಪಂಚಾಯಿತಿ ಮಾಡಿ ತಾಂಡವರೆಲ್ಲಾ ಕೇಳುವ ಹಾಗೆ ಮಾತನಾಡುತ್ತಿದ್ದರು. ದಿನವು ಕಳೆಯಿತು. ತಿಂಗಳು ಹೋಯಿತು. ವರುಷ ಮುಗಿಯಿತು. ನಂತರ ತನ್ನ ಭಾವನಾದ ಕಾಳಿವಾಳರ ಕಶುಂಬರ್‌ನ ಹೆಂಡತಿ ಅಮ್ಮು ಎಂಬುವವಳನ್ನು ಕಾಡಿಸತೊಡಗಿದನು ಆ ಹೆಂಗಸು ಹೆದರಿ ಎಲ್ಲರ ಮುಂದೆ ಹೇಳತೊಡಗಿದಳು. ಬಕ್ಷಿ ಬಂದು ನನಗೆ ಕಾಡಿಸುತ್ತಾನೆ, ಪೀಡಿಸುತ್ತಾನೆ ಎಂದು ಹೇಳಿ ಹೇಳುತ್ತಾ ಒಂದು ದಿನ ಕೆಟ್ಟ ದುರ್ಘಟನೆ ನಡೆದೇ ಹೋಯಿತು. ಆತನು ಭೂತವಾದರು ಅಮ್ಮುವನ್ನು ಬಿಡಲಿಲ್ಲ. ಸಂಭೋಗಿಸಿ ಸಾಯಿಸಿ ಸೇರಿಸಿಕೊಂಡ ಅಂದರೆ ತನ್ನವಳಾಗಿಸಿಕೊಂಡ. ಮತ್ತೆ ಪುನಃ ಆ ತಾಂಡವನ್ನು ಬಿಡಲಿಲ್ಲ. ಅವರು ಎಲ್ಲಿಯೇ ಹೋದರು ಜೊತೆಯಲ್ಲೇ ಇರುವರು. ಹೀಗಿರುವಾಗ ತನ್ನ ಮಗನೇ ಆಗಲಿ ನರಗಯ್ಯನು ಚಿಂತಿಸುತ್ತಾ ಇವರನ್ನು ಬೇರ್ಪಡಿಸುವುದು ಹೇಗೆ ಎಂದು ಯೋಚಿಸಿದಾಗ ಒಬ್ಬ ಬ್ರಾಹ್ಮಣನು ಹೇಳಿದ "ನೀವು ನದಿಯನ್ನು ದಾಟಿದರೆ ಆ ಭೂತಗಳು ನಿಮ್ಮ ಜೊತೆ ಬರಲಾರರು" ಎಂದು ಹೇಳಿದರು. ಆದೇ ಪ್ರಕಾರ ಮಾಡಬೇಕೆಂದು ಮನದಲ್ಲೆ ತೀರ್ಮಾನಿಸಿ

ರಾತ್ರಿಯಾಗುತ್ತಲೇ ಬಕ್ಷಿ ಬಂದು "ನೀವೆಲ್ಲರೂ ನದಿ ದಾಟಿದರೆ, ನಾವು ಮೂವರು ಸೇರಿ ಹೊನ್ನಾಳಿ ಸೇತುವೆ ಮಾರ್ಗವಾಗಿ ನಿಮ್ಮ ಜೊತೆಯಲ್ಲೇ ಬರುತ್ತೇವೆ". ಮಧ್ಯರಾತ್ರಿಯ ಈ ಮಾತನ್ನು ಕೇಳಿದ ನರಗಯ್ಯ ಮತ್ತು ತಾಂಡದವರು ಇನ್ನಷ್ಟು ಹೆದರ ತೊಡಗಿದರು. ಬೆಳಗಾಗುತ್ತಲೆ ತಮ್ಮ ತಾಂಡದವರೆಲ್ಲರೂ ಸೇರಿ ನದಿಯನ್ನು ದಾಟಿದರು. ತುಂಗಾ ಭದ್ರಾನದಿ ಹೊಳಲೂರು ಸಮೀಪ ದಾಟಿ ಕೊಡಮಗ್ಗೆ ಹೋದರು. ಅಂದಿನಿಂದ ಬಕ್ಷಿಯಾಗಲಿ, ಮಯ್ಯಾಯಾಗಲಿ, ಅಮ್ಮುಯಾಗಲಿ ಇವರ ತಾಂಡೆಯ ಕಡೆ ಸುಳಿವು ಸಹ ಬರಲಿಲ್ಲ. ಬಹುಶಃ ಅವರ ಆಯಸ್ಸು ಮುಗಿದಿರಬಹುದೆಂಬ ನಂಬಿಕೆ ಅಥವಾ ಅವರ ಕೊನೆಯ ಆಸೆ ಮುಗಿದಿರಬಹುದು. ಇದು ನಿಜವಾಗಿ ನಡೆದಿರುವ ಕಥೆಯಾಗಿದೆ. ಈಗಲೂ ಸಹ ಹೇಳುವವರು ಇದ್ದಾರೆ. ಇವರ ವಂಶಸ್ಥರು ಅಸ್ತಾಪನಹಳ್ಳಿಯಲ್ಲಿ ವಾಸಿಸುತ್ತಿದ್ದಾರೆ.

ಬಕ್ಷಿ
↓
ನರಗಯ್ಯ

| ↓ | ↓ | ↓ |
|---|---|---|
| ಮಾಂಚಾರು | ಮುರ್‌ಗ್ಯಪ್ಪ | ರಾಮಸ್ವಾಮಿ |
| ↓ | ↓ | ↓ |
| ಆನಂದು | ಶೇಖರ್ | ಮಗ |
| ↓ | ↓ | |
| ರಾಜ್‌ಕುಮಾರ್ | ಮಗ | |

ಆಟದ ಹಾಡುಗಳು

೧. ಕಾಡುಕೋಳಿ ಜೋಡಿ ನವಲು
ವಾಗಲಮ್ಮ ವಾಂಗಲೆ ಡಿಯಾಲಮ್ಮ
ಸಣ್ಣಸೂಜಿ ದಪ್ಪಪಟಣ
ವಾಂಗಲಮ್ಮ ವಾಂಗಲೆ ಡಿಯಾಲಮ್ಮ
ಮ್ಯಾಲೆ ಚಪ್ಪರ ಕೆಳಿಕೆ ಬಕರ
ವಾಂಗಲಮ್ಮ ವಾಂಗಲೆ ಡಿಯಾಲಮ್ಮ

೨. ಏಕ್‌ದೊ ಪಿತುವಾ ಪೀಪಲ್‌ಕಾ ಪಿತುವ
ಬಟುವಾ ಉಡು ಉಡುಜಾ
ಅಡಿ ಬಾಲಂರೇ ಜೋಬನ
ಬಟ್‌ವಾ ಉಡು ಉಡು ಜಾ
ನದಿಕೀ ಕಿನಾರೆ ಡೇರಾ ಬಿಚುವಾ
ಪಾಯಲ್ ಉಡು ಉಡು ಜಾ

೩. ಧೋಳು ಧೋಳುವಾದಳೊ
ಅಪಣೆ ಕಾರು ಪಾಣಿಮಾ
ಗಂಬಳ ಖೇಲಿಯೆ
ಬಿಳಿ ಬಿಳಿ ಮೋಡ ನಾವೆಲ್ಲರೂ ಸೇರಿ ಮಳೆಯಲ್ಲಿ ಆಟ ಆಡೋಣ.

೪. ಝುಂಗಳಮ ತಿತರೊ ವಾಕ್‌ತೊತೊ
ಕೇಬರ ಕುಂಯ್ಯ ಕರತೀತಿ
ಕಾಡಿನ ಹಕ್ಕಿ ಕೂಗುತಾ ಇತ್ತು ಸೋರಕ್ಕಿ ಕುಯ್ಯೊ ಅಂತಿತ್ತು

೫. ಚ್ಯಾಲಿಬಾಯ್
ಚ್ಯಾಲಿಬಾಯ್
ಬೀರೇ ಪೀಯಾಸ್ ಕಿ ಬ್ರ್ಯಾಂಡಿ ಪಿಯ್ಯೆಸ್
ಪಾವೇ ಖಾಸಕೀ ತೂ ಬಾಜಿ ತೂಖಾಸ್ ಕೀ
ದೇವಿಕೊಯಿತೀನ್ ತಾರಾಕನಾ ಜಮೀನ್ ಕೊಯಿನಿ
ತರಗನಾ ಆಸ್ತೀನ್ ಕ್ಯೊಯಿಂತೆ ಮೆ ಕಿಂಮೆ ನಂಬು
ಕಿಂ ಕರ್‌ಶೂ ಅಪನು ಚೋಡು ಉಯ್ಯಿಗುತೊ
ನಡಿರಿ ಅಕ್ಕ
ನಡಿರಿ ಅಕ್ಕ ಬೀರು ಕುಡಿಯಣ ಬನ್ನಿ
ಬ್ರ್ಯಾಂದಿ ಕುಡಿಯಣ ಬನ್ನಿ
ಸೊಪ್ಪು ತಿಂತೀರಾ ಮಾಂಸಾ ತಿಂತೀರಾ
ನಿಮ್ಮತ್ರ ದೇವರೂ ಇಲ್ಲ ಜಮೀನೂ ಇಲ್ಲ
ನಿನ್ನಾತ್ರ ಆಸ್ತಿ ಇಲ್ಲವಲ್ಲಾ
ನಿನ್ನ ಹೇಗೆ ನಂಬಲಿ
ನಾವು ಜೊತೆಯಾದರೆ ಏನು ಮಾಡೋದು

೬. ಕಾಳು ಕಾಳು ವಾದಳೊ ಹಾಯುನಿಲಾಬಿ
ಠಂಡು ಠಂಡು ವಾಯರೊ ವಾಗ್‌ಯೊವಿಲಾಬಿ
ಪಾಣಿಮಾ ಅಪಣ ಖಾರ ಜುಂಜರಕೇಲಿಯೆ
ಹಾಖ್ತಿ ಹಾಖ್ತಿ ಹೊಯ್ ಖೇಲ್ತ ಹೋಯ್
ಕರೆ ಕರೆ ಮೋಡ ಬಂದುಬಿಡ್ತು
ತಂಪಿನಗಾಳಿ ಬೀಸಿತು
ನೀರಿನಲ್ಲಿ ನಾವು ನೀವು ಸೇರಿ
ಆಟ ಆಡೋಣ ಬನ್ನಿರಿ

೭. ಲಾಲ್‌ದೋರೆ ಮೆಟ್ಟು ಪಳ್ಯಾಮ್
ದಾತಿಬೇಟೋಸ್ನ ಚಿರಮಿಲಾಗಳ್ಳ
ದಾತಿಊಠೋವ ಹೋಳಿ ಓಪಾಯ
ಬಂಡೋಶ್‌ಕಂಗಲಿ
ಇವನೆ ಇವನೆ ಮೊಲ ಕುಂತಕಂಡಿತ್ತೆ
ಬಲೆ ತಗಂಡುಬಾ. ಬಲೆ ಸರಿಮಾಡು ಬಲೆ ಹಾಕನ.
ಎದ್ದು ಹೋಗಿಬಿಡ್ತು ಮೊಲದ ತೊಲ್ನ ತಿನ್ನು

ಮದುವೆ ಪದ

೮. ಹರಸಮಂಡ ಲೇತಲ್ನೆ
ಸೊಪಾರಿಕೆ ಜಲ್ನೆ
ಬಯಿ ನಿಕಲಾ ಸಂರಗತಕು
ಮಾಯಿರೆ ಧಾತಲಂಗಯೆ

ಮಲಗೋ ಪದ

೯. ಸರಾಕೊ ಬುಲಾಯಿ
ಪಲ್ಲಂಕೊ ಸುಲಾಯಿ
ಸಾಸು ಉಠುಕೊ ಸವಾರಿ
ಸಸರ್ ಠಾಂಗ್ ಪಸಾರೆ
ಸರಾಕೊ ಬುಲಾಯಿ
ಪಲ್ಲಂಕೊ ಸುಲಾಯಿ
ಪರ್‍ಮೆಮೊಕಾ ಪೂತು
ಕ್ಯಾಶಿಮ್ಯಾರೆ ಚೂತು

ಹಬ್ಬದ ಹಾಡು

೧೦. ಚಾಲೋರೆ ಪರಬತ ಊಪರ್ ಯೇ ಬಾಯಿ ಚಾಲೋರೆ
ಚಾಲೋತೊ ಚಾಲೊ ಪರಬತ ಊಪರ್ ||
ಕಾಟೋರೆ ಚಂದಣ್‌ಜೀನ ಥಾಮೇ ಕಾಟೋ
ಭಾಂದೋರೆ ಗಗನಿ ಝೋಲೋ
ಚಡೆ ಬೈಠೆ ದಾದಾಜಿ ಪೀರಾನೋ ಝೂಂಡೇ ಓ... ಹಿಂದೋಳಾಯೇ ||
ಚಡೆ ಬೈಠಿರೇ ಜೋಗಮಾಯಾನೋ ಝೂಂಡೇ ಓ... ಹಿಂದೋಳಾಯೇ
ಚಡೆ ಬೈಠಿರೇ ದುರ್ಗಾಶಮಾತಾ ಝೂಂಡೇ ಓ... ಹಿಂದೋಳಾಯೇ
ಚಡೆ ಬೈಠಿರೇ ಚಿತ್ತೋಡ್‌ಗಡ್‌ಮಾತಾನು ಝೂಂಡೇ ಓ... ಹಿಂದೋಳಾಯೇ
ಚಡೆ ಬೈಠಿರೇ ಭವಾನಿ ಭಕ್ತರಣ್ ನ್ನೊ ಝೂಂಡೇ ಓ... ಹಿಂದೋಳಾಯೇ

ಅರ್ಥ: ದೇವ ದೇವಿಯರಲ್ಲ ಅವರವರ ಗಡ್ ಪರಬತ = ಪರ್ವತಗಳನ್ನು ಆರಿಸಿಕೊಳ್ಳಲು ನಿರ್ಧರಿಸಿದರು. ಆಗ ಚಂದಣ್ = ಗಂಧದ ಮರದ ಕೊಂಬೆಗೆ ಗಗನಿ ಝೋಯೊ = ಆಗಸದೆತ್ತರದ ಚೋಕಾಲಿ ನಿರ್ಮಿಸಿದರು. ಮೊದಲು ದಾದಾಜಿ, ಚೋಗಮಾಯಾ ದೇವಿ, ದುರ್ಗಾದೇವಿ, ಚಿತ್ತೋಡ್‌ಗಡದ ಸಾಕೋಡ್ ಹಾಗೂ ತುಳಜಾ ಭವಾನಿದೇವಿಯರು ಆ ಚೋಕಾಲಿಯ ಮೂಲಕ ಅವರವರ ಗಡ ತಲುಪಿದರು. (ಶಿವಂಗಿ ಮುಡ್ಡವ್ವ, ಜಾಪಿನ್; ಅಸ್ತಾಪನಹಳ್ಳಿ)

೧೧. ಹಾರೆ ಲಾಯಿರೇ ದೋಂಗಾರೆ ಉಪರ್
ಏನವಾಗಜಾಯೆ ಲಾಯಿ ಮಾರೊ ಜೀಮಣ ಹಾರೊ
ಋಷಿಗಯೊ, ಮಾನಾವರೇಪುನ ಸಾಯ ಬಜಾಯ
ಡೋಲ್‌ನಾಯೆ
ಹಾರೆ ಲಾಯಿರೇ ಸುಳಾತೂ ಭೂಂಚೇ
ಏನವಾಗಜಾಯೆ

೧೨. ಉದುಬತ್ತಿ ಜಲಾಲೆ ಹಾಸನಕೇವ್ರಡಾ
ಮಾತಾಕೆ ನಾಮ್ ಬಾಯ್ ಇಂಗಲಾದೇರಿ
ಸೋಲಾಪುರಿಸಿ ಆಯಿರಿ ಮಾತಾ ಸದ್ವರ್ ಸವಾನಿ
ಮಾತಕೇ ನಾಮ್ ಬಾಯ್ ಇಂಗಲಾದೇರಿ
ತೊಳಜಾಪುರ್‌ಸಿ ಆಯಿರಿ ಮಾತಾ ಸದ್ದರ್ ಸವಾನಿ
ಮಾತಕೇ ನಾಮ್ ಬಾಯ್ ಇಂಗಲಾದೇರಿ
ಚಾವಂಡಿಗಡಸಿ ಆಯಿರಿ ಮಾತಾ ಸದ್ದರ್ ಸವಾನಿ
ಮಾತಾಕೇ ನಾಮ್ ಬಾಯ್ ಇಂಗಲಾದೇರಿ
ಮಹವರ್‌ಗಡಸಿ ಆಡಿರಿ ಮಾತಾ ಸದ್ದರ್ ಸವಾನಿ
ಮಾತಾಕೇ ನಾಮ್ ಬಾಯ್ ಇಂಗಲಾದೇರಿ

೧೩. ಚಂಬುಮಾಂಗ ದಾನಮಾ ಜೇಜೇ ಭೋಲೋ ಜೈ ಭವಾನಿ
ಸೌಂಭೇಸೆ ಗಂಗ್ ಸಾನುಮಾ ಜೇಜೇ ಭೋಲೊ ಜೈಭವಾನಿ
ಸೌಭಕರೇ ಗಂಗ್ ಸಾನಮಾ ಜೇಜೇ ಭೋಲೊ ಜೈಭವಾನಿ
ಸೌಮೋಂಡು ಗಂಗ್ ಸಾನಮಾ ಜೇಜೇ ಭೋಲೊ ಜೈಭವಾನಿ
ಜಡಿಯರಿ ಬಾಲನಾ ಘಾಟಿಮಾ ಜೇಜೇ ಭೋಲೊ ಜೈಭವಾನಿ

ಶವಸಂಸ್ಕಾರದ ಹಾಡು

೧೪. ರಾಜ ಚಾಲರೇ ಶಿಕಾರಿಕೊ, ಸಾತೊಪಾಚೂ ಹರನಿ ಮಾರನಿಕೂ
ಸಾಮು ಸುಂದರಿ ಬೇಟಿ ಗೋದುಮೆ ಧನಿಯ ರಾಜೆ ಕರೆನ
ಬೇಟೆಂಕ ರಾಜೆಮೆ ಭೂತೊಂಕ ರಾಜ್

ಧನಿಯಕ ರಾಜ್‌ಮೆ ಧನಿಯ ಮುನಿಯ
ಹನುಮ ಚಾಲರೆ ಶಿಕಾರ್‌ಕೋ, ಧನಿಯ ರಾಜ್ ಕರೋರೆ
ಅರೆ ಬೀಬಿ ರೊವರೆ ರಂಗುಮಹಲುಮೆ
ಬಾಂದಿರೊವರೆ ಧರವಾಜೆ, ಧನಿಯ ರಾಜ್ ಕರೂರೆ ತುಮೆ
ಲಡೆನ ಆಯೇ ಮುಗಲಯಿಕಿ ಚಾಮನಜಿಕೆ ಪೂಚೆ
ಅರೆ ಗೊದುಮೆ ಸಾಪೆಬ ಜಡುಪೆ... ಎಂಗಿನಯ
ಅರೆ ಗೊದುಮಗೆ ಲಾಲೇನ ಕೆಂಪ್ ಕರೂರೆ ಜಡುದೆ

ಅರ್ಥ: ಗಂಡ ಇದ್ದಾಗ ಆತ ಮಾಡುತ್ತಿದ್ದ ಶಿಕಾರಿ, ಮೊಗಲರೊಂದಿಗೆ ಜಗಳಕ್ಕೆ ಹೋಗಿ ಮಡಿದಿದ್ದನ್ನು ನೆನೆಸುತ್ತಾಳೆ. ಹಾಗೆ ಮಗನ ಕಾಲದ ಜೀವನವನ್ನು ಭೂತೊಂಕ ರಾಜ್‌ಗೆ ಹೋಲಿಸಿ ರೋಧಿಸುತ್ತಾಳೆ. (ಶಣ್‌ಮರಿ ಗುಜರಾತೋ, ಅಸ್ವಾಪನಹಳ್ಳಿ)

**ಆಟದ ಹಾಡು**

೧೫. ಪೂಪು ಪಳೆಂಪು
ಪಟ್ನಾರೆಗೆ ಕೊಳೆಂದೆ
ಅಟಟ ಪಾಣೆ
ಖುಷಾಲಕೆ ದುಮ್ಮಿ
ತಾಳಂಗೆ ಪೂಂ ಪೂಂ ಪಶ್

೧೬. ಅಟ್ಟೆಬ್ಬೆ
ಬೆಲ್ಲದಚ್ಚು
ಯಾವ ಬೆಲ್ಲ
ಕಪ್ಪು ಬೆಲ್ಲ
ಯಾವ ಕಪ್ಪು
ಮಡಕೆ ಕಪ್ಪು
ಯಾವ ಮಡಕೆ
ಅನ್ನ ಮಡಕೆ
ಯಾವ ಅನ್ನ
ತಿನ್ನೊ ಅನ್ನ
ಯಾವ ತಿನ್ನೊ
ಏಟು ತಿನ್ನೊ
ಯಾವ ಏಟು
ಕೋಲು ಏಟು

ಯಾವ ಕೋಲು

ಗಾಂಧಿ ಕೋಲು

ಯಾವ ಗಾಂಧಿ

ಮಹಾತ್ಮಗಾಂಧಿ

ಪುಶ್ನೋ೯ (ಒಗಟುಗಳು)

೧. ಖಿಡಾ ಬಲ್ಲಾಪರ್ ಟಾಂಗ್‌ಚೀರಿ ಪಡೀಸ್
ಮೈದಾನದಾಗೆ ಕಾಲು ತೆರೆದು ಬಿದ್ದಿದ್ದಾಳೆ
*ಮಗರಿ (ಪುರಲಕ್ಕಿ ಬಲೆ)*

೨. ಖಿಡಾ ಬಲ್ಲಾಪರ್ ಗೋಲೊ ರಡತ್ತೊ ವಳವಾಸ್
ಮೈದಾನದಾಗೆ ಉರುಳುತ್ತಾ ಬರುತ್ತಿದೆ.
*ಕವೀಶ್ (ಬೆಲ್ಲದ ಕಾಯಿ)*

೩. ಮೈದಾನ್‌ಮೊ ಟೋಪಿ ಲಗಾಡಿ ಬೇಟೊ
ಮೈದಾನದಲ್ಲಿ ಯಾರೊ ಟೋಪಿ ಹಾಕಿ ಕುಳಿತಿದ್ದಾರೆ
*ಗಾಜ್ (ಹಣಬೆ)*

೪. ಏಕ್ ಶೀಶ್‌ಮಾ ದೊ ರಂಗ್ ಕಾ ಪಾವಿ
ಒಂದೇ ಸೀಸೆಯಲ್ಲಿ ಎರಡು ಬಣ್ಣದ ನೀರು
*ಮೊಟ್ಟೆ*

೫. ಗದ್ದೆಮಾ ಪಾಣಿ
ಪಾಣಿಮಾ ಝಾಡ್
ಝಾಡ್‌ಮಾ ಆಗ್
ಗದ್ದೆಯಲ್ಲಿ ನೀರು ನೀರಿನಲ್ಲಿ ಬೇರು ಬೇರಿನಲ್ಲಿ ಬೆಂಕಿ
*ಲಾಟೀನು*

೬. ಕೈಚೆ ಡೋರಿ
ಚಮ ಕೇ ತಾರಾ
*ಪತ್ರಿ*

೭. ಮಾದಂತ್ರಿ ಬಾಪ್ ಜೀತ್ರ
ಉಸ್‌ಕಾ ಪೇಟ್ ಕಾ ಬಚ್ಚ,
ಮಾನಿಕ್ ಟುಕುಡಾ
ತಾಯಿ ಹಲ್ಲಿನವಳು ತಂದೆ ಜುಟ್ಟಿನವನು ಮಗ ಮುತ್ತಿನಂಥವನು
*ಹಲಸಿನ ಹಣ್ಣು (ಸ್ವಾದೆ, ತೊಳೆ, ಮುಳ್ಳು)*

೮. ಬಾನಾ ರುಮಾಲ್ ಭಾನ್ ತಾ ಕೊವನಿ

ಆಯನ ಚಾದ್ರಿ ಪುಂಗಳಿ ಕರ್ತೆ ಕೊವಾನಿ
ಚೀ ಯಾನ ಪೈಶಾ ಗಣತಾ ಕೊವಾನಿ
ತಂದೆಗೆ ಪೇಟ ಕಟ್ಟಲು ಆಗುವುದಿಲ್ಲ
ತಾಯಿಗೆ ಚಾಪೆ ಮಡಿಸಲು ಗೊತ್ತಿಲ
ಮಗನಿಗೆ ದುಡ್ಡು ಎಣಿಸಲಾಗುವುದಿಲ್ಲ
*(ವಾದಳು, ಜಮೀನ್, ತಾರೊ) ಆಕಾಶ, ಭೂಮಿ, ನಕ್ಷತ್ರ*

೯. ಸೌಸೂದಿ
ಸೌ ಉಲ್ಬಿ
ನೂರು ಸೀದಾ
ನೂರು ಉಲ್ಟಾ
*ಕಾಳು ಪಂಚ್ (ಕರಿಹೆಂಚು)*

೧೦. ಧೋಳೊ ಗೋಡೊ
ಜಾಬ್ರೊ ಪೆಂಡೊ
ಬಿಳಿ ಕುದುರೆ ಹಸಿರುಬಾಲ
*ಮೂಳೊ (ಮೂಲಂಗಿ)*

೧೧. ಕಾಳು ಆದ್ಮಿ
ಧೋಳೊ ಧಾತ್
ಕರಿ ಮನುಷ್ಯ ಬಿಳೀ ಹಲ್ಲು
*ಬವಾಳಿಯಸೂ ಜಾಡ್ (ಜಾಲಿಮರ)*

೧೨. ನಾನೂ ಗರಮಾ
ನಾನಿ ಬೀಗ
ಚಿಕ್ಕಮನಿಗೆ ಚಿನ್ನದ ಬೀಗ
*ಟಿಕಲಿ (ಮೂಗಿನ ನತ್ತು)*

೧೩. ಏಕ್ ಮಹಲಮಾ
ಏಕಸ್ ಜಟ್ಟಿ
ಒಂದು ಮನೆಗೆ ಒಬ್ಬನೆ ಜಟ್ಟಿ
*ಖ್ಯಾರೆಗಾಯ್ (ಬಸವನಹುಳು)*

೧೪. ಗುಂಗುಡಿ ಹೋಡಿ ಪಡೋರೇಸ್ ಕೋಣ್
ಕಂಬಳಿ ಹೊದ್ದು ಮಲಗಿರುವವರು ಯಾರು
*ಭೋಪ್ಪು (ಕುಂಬಳಕಾಯಿ)*

೧೫. ವಾಕ್ಕು ಸೊಕ್ಕು ಕಡಮ ಭಿಂಗು

*ಖಿಂದಾರು (ಗೌಜಹಕ್ಕಿಯ ಬಲೆ)*

೧೬. ಅಡಿಕ್ಕು ಉಪ್ಪರ್ ಬೋಟಿ ಮಹಿ

ಅಡಿಕ್ಕು ಉಪ್ಪರ್ ಖೇಖ್

ಬೋಟೀನು ಮಯಿ ಪಾಣಿ

ಮೂಳೆ ಮೇಲೆ ಮಾಂಸ ಮೂಳೆ ಮೇಲೆ

ಕೂದಲು ಮಾಂಸದ ಒಳಗೆ ನೀರು

*ನಾರೇಳ್ (ತೆಂಗಿನ ಕಾಯಿ)*

೧೭. ಏಕ್ ಖೊಳಮ್

ಏಕ್ ಡೊಕುಳೊ

ಒಂದು ಕೆರೇಲಿ ಒಂದೇ ಮೀನು

*ಜೀಬ್ (ನಾಲಗೆ)*

೧೮. ಏಕ್ ರಾಜಾ

ಏಕ್ ಬಾವಡಿಕನಗಯೊ

ಖುದ್ದು ಚಡ್ಡಿ ಕಾಡೆವೊ

ಪಡಿಗಯತೆ ಆಯೊ ಖೊಯನಿ ಪಾತ್ಸೊ

ಒಬ್ಬ ರಾಜಾ ಒಂದು ಬಾವಿ ಹತ್ತಿರ ಹೋಗಿದ್ದ

ಬಟ್ಟೆನೆಲ್ಲ ಬಿಚ್ಚಾಕಿ ಬಾವೀಲಿ ಬಿದ್ದ ವಾಪಸ್ಸು ಎದ್ದು

ಬರಲೇ ಇಲ್ಲ

*ಕೇಳು (ಬಾಳೆಹಣ್ಣು)*

೧೯. ಏಕ್ ಜಣೋ ಬೇಟೊ

ಏಕ್ ಮಾಡಿಸ್ಸಿವಳಿ ಅವ್ತಿತೀ

ಯೊ ಮಾಡ್‌ಕಾಖನ್ ಬೇಸಿಗಿ

ಮಾಡ್ಕು ಬೊಲೂ ಕರ್ತುತೂ ಬೇಖ್ ಜರಾ

ಮಾಡ್ಸಿ ಬೋಲೂ ಕರ್ತೀತಿ ಬಶ್‌ಬಶ್

ಮಾಡ್ಕು ಬೋಲೂ ಕರ್ ತೂ ತೂ ಉಯ್‌ಗೂ ಉಯ್‌ಗೂ

ಒಬ್ಬ ಮನುಷ್ಯ ಕುಂತಿದ್ದ ಅವನ ಹತ್ತಿರ ಒಬ್ಬಳು ಹೆಂಗಸು ಬರುತ್ತಿದ್ದಳು

ಅವನ ಹತ್ತಿರ ಬಂದು ಕುಂತಿದ್ದಳು ಅವಳು ಸಾಕು ಸಾಕು ಎಂದಳು

ಇವನು ಆಯ್ತು ಆಯ್ತು ಎಂದನು

*ಚೂಡಿಯಾ (ಬಳೆ)*

೨೦. ಬಜಾರ್ ತೂ ಲಾಯಿತೊ ಗರೇ
ವಹಾಡಿ ತೊ ರೋವಾಲಗಾನು
ಸಂತೆಯಿಂದ ಮನೆಗೆ ತರೋದು
ಮುಂದೆ ಇಟ್ಟುಕೊಂಡು ಅಳೋದು
*ಕಾಂದೊ (ಈರುಳ್ಳಿ)*

೨೧. ಅಟ್ಟಿದ್ಮೊ ಉಪ್ಪರ್ ಅಟ್ಟಿನಲುಪ್ಪರ್
ನ್ಹಾನೂ ಲಕ್ಷ್ಮೀ
ಅಟ್ಟದ ಮೇಲೆ ಪುಟ್ಟ ಲಕ್ಷ್ಮೀ
*ಟೀಕು (ಕುಂಕುಮ)*

೨೨. ಖಿರೀನ್ ಖ್ರುಕ್ಕಯಿನ್
ಲೀಗೊತೊ ಬಜ್ಹಾರ್‌ಮಾ
ಎಕ್ಕಸ್ ಗಡೀಮಾ ಯೇಚ್ಚಯಿಬಾವಾನು
ಮಾಡಿ ಒಣಗಿಸಿ
ಸಂತೆಗೆ ತಗೊಂಡೋದರೆ
ಜಲ್ದಿ ಮಾರಾಟವಾಗುತ್ತದೆ.
*ಮಾಠೀನೂ ಹಂಡಿಕಿ (ಮಡಕೆ)*

೨೩. ಏಕ್ ಗೌಂನ್ ಪೋಣ್ಹಾಕಿದಿನ್
ಠೊಕರೊ ಬರೀನ್ ಹೋಳಿಗೆ ಕರೀನ್
ಅಕ್ಕಾ ಆದ್ಮಿನಾ ಖಿಡ್ಯೆನ್ ಬಸಂ ಉಜ್ಯೆನ್ ಉಬ್ರುಸ್
ಒಂದು ಗೋದಿಗೆ ಒಡೆದು ಹಾಕಿ
ಕುಕ್ಕೆ ತುಂಬ ಹೋಳಿಗೆ ಮಾಡಿ
ಎಲ್ಲರಿಗೂ ತಿನ್ನಿಸಿ ಮತ್ತೂ ಉಳಿಯುತ್ತದೆ
*ಆಗನ್‌ದಟ್ಬೊ (ಬೆಂಕಿಪೊಟ್ಟಣ)*

೨೪. ಮಾರಾಖೇಡೇಚ ಏಕ್ ಆದ್ಮಿ ಕದೇಬಿರೇಸ್
ನನ್ನ ಜೊತೆ ಯಾವಾಗಲೂ ಒಬ್ಬ ಇದ್ದೇ ಇರುತ್ತಾನೆ
*ಸ್ಹಾಳಿ (ನೆರಳು)*

೨೫. ಗಾಗ್ರೊ ಖಾಡಿ ನಾಕೀನ್
ಶೀಟೂ ತರದೀನ್ ದಾಣಖಾಡಿನ್ ಖಾವಾನೂ
ಲಂಗ ಬಿಚ್ಚಿ ಶಾಟ ತರದಿ
ಕಾಳೆಲ್ಲ ತಗದು ತಿನ್ನುವುದು
*ಮಕ್ಕೊ (ಜೋಳ)*

೨೬. ಕಾಕೂನಿ ಗಾಂಡಮಾ
ಜಮ್ಮೆನೂ ಚಿಷ್ಣೂ
*ಬೀಗ*

೨೭. ಏಕ್ ಗಾಯಿ ಕೆಲ್ಸು ನಾಖಾನಾ ಅಗಾಡಿ
ದೂದ್ ದೇನು
ಹಸು ಕರು ಹಾಕುವ ಮುಂಚೆ ಹಾಲು ಕೊಡುತ್ತದೆ
*ಖಾಟೋ (ಕಬ್ಬು)*

೨೮. ಏಕ್ ಚೌಕ್‌ಮಾ ತೀನ್ ಮೂರ್ತಿ
ಯೊ ಮಹಾತ್ಮಾಗಾಂಧಿ, ಇಂದಿರಾಗಾಂದಿ,
ಜವಹರಲಾಲ್ ನೆಹರೂನೂ ಗೋಂಬೆಥೂ
ಯೊ ತೀನ್‌ನಾ ಗಲೇಂಡಾಮಾ ಫೂಲ್‌ನೇಹಾರ್ ತೀ
ಮೇಂಡೂ ಖಾತೊಖಾತೊ ಆಯಿನ್ ಇಂದ್ರಗಾಂಧಿ ಅಬು
ಜವಹರಲಾಲ್ ನೆಹರೂನಾ ಗಲೆಂಡಾಮಾನು ಫ್ರೂಲ್ ಕೈಯಿಂದು
ಮಹಾತ್ಮಾಗಾಂಧಿನಾ ಗಲೆಂಡಾಮಾನೂ ಕೆಯಿಕಾದೂನಿ ಶಾನಾ ಖಾಚೆ
ಒಂದು ಚೌಕದಲ್ಲಿ ಮೂರು ಮೂರ್ತಿಗಳಿದ್ದವು
ಮಹಾತ್ಮಗಾಂಧಿ ಇಂದಿರಾಗಾಂಧಿ ಜವಹರಲಾಲ್ ನೆಹರೂಗಳವು
ಅವರ ಕತ್ತಿನಲ್ಲಿ ಮೂರು ಹಾರಗಳಿದ್ದವು
ಒಂದು ಕುರಿ ಮೇಯುತ್ತ ಬಂದು ಇಂದಿರಾಗಾಂಧಿ
ಜವಹರಲಾಲ್ ನೆಹರೂ ಕೊರಳಿನ ಹೂವಿನ ಹಾರವನ್ನು ತಿಂದು ಹಾಕಿತು,
ಮಹಾತ್ಮಾ ಗಾಂಧಿಯ ಕತ್ತಿನ ಹಾರವನ್ನು ಏಕೆ ತಿನ್ನಲಿಲ್ಲ.
***ಶಾನಖಾಜೆಕತೊ ಇನ ಹಾತ್‌ಮ ಲಾಕ್ಡಿ ಛೆ***
***(ಯಾಕೆಂದರೆ ಅವನ ಕೈಲಿ ಕೋಲಿತ್ತು)***

೨೯. ಏಕ್ ಅಮ್ಮಾನಾ ಏಕ್ ಚಿಯ್ಯೊತೊ
ಅಮ್ಮಾ ಪಾಣಿ ಭರ್ಲಿನ್ ಆವಾನಿ ಟೇಂಪರ್
ಪಟ್ಟಿಕಯಿಗಯಿ ತದೇ ಚೀಯ್ಯೊ ಉಠಾಳನಿ ಟೇಂಪರ್
ಅಮ್ಮಾನೆ ಚಿಯಾ ತರಾಖಾನೆ ಚಿಮೇಕೊಯಿನ್ತೆ
ಜಗೋದರಿನ್ ಉಠಾಡ್
*ಉಟ್‌ಲಿಅಮ್ಮಾ (ಎದ್ದೇಳಮ್ಮ)*

೩೦. ಏಕ್ ಪಹಡ್ಕೊ ಘಾಖ್ ವಹಡಾನೂ
ವೀಖ್ ಆದ್ಮೀನೂ ಮುಡಿಕ್ಯೊ ಖತ್ರಾನೂ
ಬೇ ಆದ್ಮಿ ಪಳ್ಳಿ ಬಾವಾನೂ

ಒಂದು ಬೆಟ್ಟದ ಹುಲ್ಲನ್ನು ಕತ್ತರಿಸುವುದು
ಇಪ್ಪತ್ತು ಜನರ ತಲೆ ಕಡಿಯುವುದು
ಇಬ್ಬರಾಳು ಒಬ್ಬನಿಗೆ ಹೊತ್ತುಕೊಂಡು ಹೋಗುವುದು
*ಬೇಜ್‌ಕತ್ರಾನೂ, ನಬ್ಬಿರ್‌ವಾಡಾನೂ, ಚಪ್ಪಲ್‌ಗಲ್ಲಿ ಜಾವಾನೂ*
*(ತಲೆಕಟಿಂಗ್ ಉಗುರು ಕತ್ತರಿಸುವುದು, ಚಪ್ಪಲಿ ಹಾಕಿಕೊಂಡು*
*ಹೋಗುವುದು)*

೩೧. ಆಪಣೆ ರಾಂಡ್ ಅಕ್ಕೀ ಟೇಮ್
ಶಾತ್‌ಬೋಲ್ ತ್ಯೊದೇಸ್
ಪಣಕೀ ಏಕ್ ಟೇಮ್ ಏಕ್ ಶಾಚೊ ಕೊಯಿದೇನಿ
ನಮ್ಮ ಹೆಂಡರು ಎಲ್ಲಾ ಟೇಮು
ಏನು ಬೇಕಾದರೂ ಕೊಡುತ್ತಾರೆ
ಒಂದು ಟೇಮು ಮಾತ್ರ ಒಂದು ವಸ್ತು ಕೊಡುವುದಿಲ್ಲ
*ಜಾಂದೂ ದೇಯಿಕೊಯಿನಿ ಅಪಣ ಮರ್‍ಯಾತೊ*
*(ನಾವು ಸತ್ತಾಗ ಭುಜ ಕೊಡೋದಿಲ್ಲ)*

೩೨. ಬಹರ್ ಮಿಠ್ಠೊ ಮಹೀ ಪಿಕ್ಕೊ
ಬಹರ್ ಪಿಕ್ಕೊ ಮಹೀ ಮಿಠ್ಠೊ
ಅಕ್ಕೊ ಮಿಠ್ಠೊ
ಹೊರಗಡೆ ಸಿಹಿ ಒಳಗಡೆ ಸಪ್ಪೆ
ಮೇಲೆ ಸಪ್ಪೆ ಒಳಗಡೆ ಸಿಹಿ
ಪೂರಾ ಸಿಹಿ
*ಪೇಂಡ್‌ಖಜೂರ್, ಕೇಳೊ, ಗೋಳ್ (ಖರ್ಜೂರ, ಬಾಳೆಹಣ್ಣು, ಬೆಲ್ಲ)*

೩೩. ಏಕ್ ರಾಜಾ ಏಕ್ ಟೇಮ್ ಖಿಡುತ್ ತೊ
ಕಾಡಿಯೊತೊ ಬಿಜ್ಜಕ್ ಟೇಮ್ ಪೆಹರಾಖೊಯಿನಿ
ಒಬ್ಬ ರಾಜ ಒಂದು ಸಲ ಷರ್ಟ್ ಬಿಚ್ಚಾಕಿದರೆ
ಇನ್ನೊಂದು ಸಲ ಇಕ್ಕೊಳಕ್ಕಿಲ್ಲ
*ಖ್ವಾಪ್ (ಹಾವು ಪೊರೆ ಬಿಡೋದು)* ನಿ ಜ್ವಾಳಿ

೩೪. ಏಕ್ ರಾಜಾ ಅರಮನೆ ಭಾಂದೇತೊ
ಇನಿ ಪೀಠ್ನೋ ಪರಸ್ ಪಳ್ಳಿ
ಚಲೆ ಇಂಡಾನೊ
ಒಬ್ಬ ರಾಜಾ ಅರಮನೆ ಕಟ್ಟಿದರೆ
ತನ್ನ ಬೆನ್ನ ಮೇಲೇನೆ ಹೊತ್ತುಕೊಂಡಿರುತ್ತಾನೆ
*ಖಾರೇಗಾಯ್ (ಬಸವನಹುಳು)*

೩೫. ಏಕ್ ದೇವ್‌ನಾ ಕಾಡಿಪೆಹರಾನಾ ಖೊಯಿನಿ
ಏಕ್‌ದೇವ್‌ನಾ ಟೀಕು ಲಗಾಡೆನಾ ಖೊಯಿನಿ
ಏಕ್ ದೇವ್‌ನಾ ಭೋಲಿ ಧೊವಾನಾ ಖೊಯಿನಿ
ಒಂದು ದೇವರಿಗೆ ಸೀರೆ ಉಡಸಲಿಕ್ಕಾಗಲ್ಲ
ಒಂದು ದೇವರಿಗೆ ಕುಂಕುಮ ಹಾಕಕ್ಕಾಗಲ್ಲ
ಒಂದು ದೇವರಿಗೆ ತಿಕ ತೊಳಿಯಕ್ಕಾಗಲ್ಲ
***ಆಗ್, ಪಾಣಿ ಆಬ್ (ಬೆಂಕಿ ನದಿ, ಆಕಾಶ)***

೩೬. ಬಾನಾ ರುಂಬಾಲ್ ಬಾಂದಾನಾ ಖೊಯಿವಹಿನೀ
ಅಮ್ಮಾನಾ ಖಾಡಿಪೆಹರಾನಾ ಖೊಯಿವಹಿನೀ
ಚೀಯಾನಾ ಪೈಸಾಗಣಾನಾ ಖೊಯಿವಹಿನೀ
ತಂದೆಗೆ ಪೇಟ ಕಟ್ಟಕ್ಕಾಗಕ್ಕಿಲ್ಲ
ತಾಯಿಗೆ ಸೀರೆ ಉಡಕ್ಕಾಗಕ್ಕಿಲ್ಲ
ಮಗನಿಗೆ ಹಣ ಎಣಿಸುವುದಕ್ಕೆ ಬರುವುದಿಲ್ಲ
***ಮಾರಗ್, ವಾದುಳು, ಶುಕ್ಕರ್ (ದಾರಿ, ಮೋಡ, ನಕ್ಷತ್ರ)***

೩೭. ಭಾತಿಮಾ ಡೋಳಾ
ಎದೆಯಲ್ಲಿ ಕಣ್ಣು
***ಖೇಖಡೊ (ಏಡಿ)***

**ಗಾದೆಗಳು**

ಜಾನಪದ ಭಾಷಿಕ ಬಗೆಯಲ್ಲಿ ಗಾದೆಗೆ ಮಹತ್ವದ ಸ್ಥಾನವಿದೆ. ತಲೆಮಾರಿಂದ ತಲೆಮಾರಿಗೆ ಹರಿದು ಬರುವ ಸತ್ವಯುತ, ಅತ್ಯಂತ ಕಲಾತ್ಮಕ, ಮೌಖಿಕವಾದ ಜೀವನಾನುಭವಗಳನ್ನು ಒಳಗೊಂಡಿರುತ್ತದೆ ಹಾಗಾಗಿ ಜಾನಪದದಲ್ಲಿ ಗಾದೆಗಳನ್ನು 'ವಿಶ್ವಕೋಶ'ಗಳೆನ್ನುತ್ತಾರೆ. ಹಿಂದಿ ಶಬ್ದದ 'ಕಹಾವತ್' ಆಂಗ್ಲೊ ಭಾಷೆಯ Proverb ಪದಕ್ಕೆ ಪೂರಕವಾಗಿ ಹಕ್ಕಿಪಿಕ್ಕಿಯರಲ್ಲಿ 'ಕಾವತ್' ಅಥವಾ 'ಬೋಲಿ'ಗಳಿವೆ.

೧. ಪಾಪ್ ಮರಾಸ್, ಧರಂ ಜೀವಾಸ್ (ಪಾಪಕ್ಕೆ ಸಾವು ಪುಣ್ಯಕ್ಕೆ ಉಳಿವು) ಯಾರೇ ಆಗಲಿ ಕದ್ದುಮುಚ್ಚಿ ಪಾಪ ಮಾಡಿದರೆ, ದಾನ ಧರ್ಮಗಳಲ್ಲಿ ಶ್ರದ್ಧೆಯಿಲ್ಲದಿದ್ದರೆ, ಮೋಸ ಮಾಡಿ ಜೀವಿಸುತ್ತಿದ್ದಾರೆ. ಈ ಮಾತು ಅನ್ವಯಿಸುತ್ತದೆ.

೨. ಉಪ್ಪರ್ ಮಿಠ್ಠು, ಮಹೀಖಾಟು (ಮೇಲೆ ಸಿಹಿ, ಒಳಗೆ ಹುಳಿ) ಬಾಯಲ್ಲಿ ಬೆಲ್ಲ ಹೊಟ್ಟೆಯಲ್ಲಿ ವಿಷ ಎಂಬರ್ಥ ಬರುತ್ತದೆ.

೩. ಮಹಿ ಖೈನ್, ಪಾಧರ್ ಹಾತ್ ಧೋವಾವಾಳೋ (ಒಳಗೆ ಉಂಡು, ಹೊರಗೆ ಕೈ ತೋಳಿವವನು) ನಂಬಿಸಿ ಮೋಸ ಮಾಡುವವನು, ಮನೆಯ ವಿಚಾರಗಳನ್ನು ಚಾವಡಿಯಲ್ಲಿ ಬಯಲಿಗೆಳೆವವನು.

೪. ಜೆನು ಖೈನ್, ತಿನಾಸ್ಸರ್ ರಿಕ್ರು ಫ್ರೋಡಾವಾಳೋ (ಅವರದ್ದೆ ತಿಂದು ಅವರ ತಲೆಯ ಮೇಲೆ ಮಡಕೆ ಹೊಡೆಯುವವ) ಉಂಡ ಮನೆಗೆರಡು ಬಗೆವವ.

೫. ಮಾರೊ ರೂಪ್, ಜಮೀನ್ನ ದಿದೀ, ಜಮೀನ್ನೊ ರೂಪ್ ಮೇಲಿಧೀ (ನನ್ನ ರೂಪ ನೆಲಕ್ಕಿತ್ತು, ನೆಲದ ರೂಪ ನಾನು ತಗೊಂಡೆ) ಅಂದರೆ ತಾವು ಹಿಂದೆಲ್ಲ ಕಷ್ಟಪಟ್ಟು ಮಕ್ಕಳು ಸಾಕಿದ್ದು, ದೇವರ ಹಬ್ಬಗಳನ್ನು ಆಚರಿಸುವಾಗ ಪಟ್ಟ ಗೋಳನ್ನು ವ್ಯಕ್ತಪಡಿಸುವಾಗ ಈ ಮಾತು ಬರುತ್ತದೆ.

೬. ಜಿವಾವಾಳೋಭಿ ದಾದಾಜೀಸ್, ಮಾರಾವಾಳೋಭಿ ದಾದಾಜೀಸ್ (ಬದುಕಿಸುವವನೂ ದಾದಾಜಿಯೇ (ಈಶ್ವರ) ಸಾಯಿಸುವವನು ದಾದಾಜಿಯೇ) ಎಲ್ಲ ಭಾರವನ್ನು ದೇವರ ಮೇಲೆ ಕಷ್ಟ ಸುಖ ಬಂದಾಗ ಹೊರಿಸುವುದು.

೭. ಖೇಲ್ ನೀ ಆವಾಳಾನ ಢಗಲೀ ವಾಕೀ (ಆಡಲಿಕ್ಕೆ ಬಂದವಳಿಗೆ ಜಗಲಿ ಡೊಂಕು) ಕುಣಿಯಲಾರದವಳಿಗೆ ನೆಲ ಡೊಂಕು.

ನುಡಿಗಟ್ಟುಗಳು

ಹಕ್ಕಿಪಿಕ್ಕಿಯರಲ್ಲಿ ಭಾಷೆಯ ನುಡಿಗಟ್ಟುಗಳು ಲಿಪಿಕ ಭಾಷೆಯಲ್ಲಿರುವ ಎಲ್ಲ ಬಗೆಯ ಜನಪದ ಪ್ರಕಾರಗಳನ್ನು ಹಕ್ಕಿಪಿಕ್ಕಿ ಸಮುದಾಯದ ಭಾಷೆಯಲ್ಲಿ ಕಾಣಬಹುದು.

೧. ಉಪ್ಪರ್ ಚಢಾವಾನು (ಮೇಲಿಕ್ಕೇರಿಸು) ಹೊಗಳು
೨. ಮಶ್ಕಾಮಾರ್ (ಬೆಣ್ಣೆಹಚ್ಚು) ಮಸ್ಕಾಹೊಡಿ, ನಯವಂಚಕ
೩. ಆಗ್ ನಾಖಾವಾಳೊ (ಬೆಂಕಿ ಹಚ್ಚುವವ) ಜಗಳಗಂಟ, ಚಾಡಿಖೋರಾ
೪. ಮಾಥಾಪರ್‌ಲ್ಯು ಬೋಝ್ಯೂೕ ಉತ್‌ರೀಗೋ (ತಲೆಯಭಾರ ಇಳಿಯಿತು) ಜವಬ್ದಾರಿ ಕಳಿಯಿತು.
೫. ಛಾತಿಪರ್ ಬೇಶ್ (ಎದೆಮೇಲೆ ಕೂರು) ಜರೂರು ಕೆಲಸ ಮಾಡಿಸು; ಗಡಿಬಿಡಿ ಮಾಡು
೬. ಬೇ ಜೀಬ್‌ವಾಳೋ (ಎರಡು ನಾಲಿಗೆಯವನು) ನುಡಿದಂತೆ ನಡೆಯದವನು
೭. ಫಾಟಾ ಮೊಹಡಾನು (ಹರಕು ಬಾಯಿಯವನು) ಬೊಗಳೆ ಬಿಡುವವ, ಚಾಡಿಕೋರ
೮. ನಾಕ್‌ನ ಜೀಬ್ ಲಗಾಡ (ಮೂಗಿಗೆ ನಾಲಿಗೆಯನ್ನು ತಾಗಿಸು) ಸತ್ಯವನ್ನು ಹೇಳು
೯. ಘಾವ್‌ಪರ್ ದಾವ್ ಕಾಡ್ (ಗಾಯದ ಮೇಲೆ ಸೇಡು ತೆಗೆ) ಹಳೆಯದನ್ನು ಕೆದಕು.
೧೦. ಮಾಥು ಫೋರೋವಾಳೊ (ತಲೆ ಹೊಡೆಯುವವನು) ಮೋಸಮಾಡುವವನು
೧೧. ದೋಳಾಮ ಧೂಳನಾಕ್ (ಮೋಸ ಮಾಡು) ಕಣ್ಣಲ್ಲಿ ಮಣ್ಣು ಹಾಕು
೧೨. ಆಡೋ ಗೋಡೋ ಘಾಲ್ (ಅಡ್ಡಗಾಲು ಹಾಕು) ಕೆಲಸದ ಮಧ್ಯೆ ಮೂಗು ತೂರಿಸು
೧೩. ನಾಕ್ ಚೆಢ್ಯನ್ ವಾತೆಕರ್ (ಮೂಗೇರಿಸಿ ಮಾತನಾಡು) ಸತ್ಯವಂತನಾಗು
೧೪. ಹಾತ್‌ಧ್ಯೊನ್ ಪೀಮೋಪಡ್ಯೋ (ಕೈ ತೊಳೆದು ಬೆನ್ನು ಹತ್ತು) ದುಂಬಾಲ ಬೀಳು
೧೫. ಛಾತೀಪರ್ ಕೇಶ್‌ವಾಳೋ (ಧೈರ್ಯವಂತ) ಎದೆಗಾರಿಕೆ
೧೬. ವಿತ್ಯೋಚಾಟ್ಯೋ (ಕೈಲಾಗದವನು) ಎಂಜಲು ನೆಕ್ಕುವವನು

೧೭. ಕಾನು ಬಡ್ಕೈಖೋರ್ (ಬಡಾಯಿ ಮಾಡಿಕೊಳ್ಳುವವ) ತನಗೆ ತಾನೇ ಬಡಾಯಿಕೊಚ್ಚಿ ಕೊಳ್ಳುವವನು

೧೮. ವಾತೆ ವಘಾರ್ (ಮಾತಿನ ಒಗ್ಗರಣೆ) ಒಣಜಂಭ

೧೯. ಡೋಳೋಕಾಡ್ (ಕಣ್ಣು ತೆಗೆ) ಕಣ್ಣಿಡು

೨೦. ಮುತ್ತರ್‌ಮ ಮಾತ್ಸೂಲ ಖಿಂವ್ (ಉಚ್ಚೆಯಲ್ಲಿ ಮೀನು ಹಿಡಿ) ಅಲ್ಲಲ್ಲೆ ಸುತ್ತಿ ಹೊಟ್ಟೆ ತುಂಬಿಸುವುದು.

೨೧. ವಾತ್ ವಾತ್‌ಮಾ (ಮಾತು ಮಾತಿನಲ್ಲಿ) ಮಾತು ಮಾತಲ್ಲಿ ಹಿಡಿಯುವುದು

೨೨. ಹ್ಯಾ ಪಾದೀತೋ ಹಿಜ್ಜ ಪೋ (ಇಲ್ಲಿ ಹೂಸಿದರೆ ಅಲ್ಲಿ ವಾಸನೆ) ಯಾವುದೇ ಗುಪ್ತ ವಿಷಯಗಳು ಬಹಳ ಬೇಗ ಹರಡುವುದು.

೨೩. ಝೂಟಿಬೋಲೀನ್ ಜಿವ್ನ್ಯ ಕರಾವಾಳೋ (ಸುಳ್ಳು ಹೇಳಿ ಜೀವಿಸುವವ ಆಶ್ವಾಸನೆ ನೀಡುವವ) ಮರಳು ಮಾಡುವವ.

೨೪. ಮಳ್ಳ್ಯು ಲಗಾಡ್ (ಕೊಳೆತದ್ದನ್ನು ಹಚ್ಚು) ಬೆನ್ನು ಹತ್ತುವುದು, ಹಿಂದೆ ಬೀಳು.

## ಭಾಷೆ

ಪ್ರತಿಯೊಂದು ಭಾಷೆಯನ್ನು ಅನೇಕ ಪಂಗಡ ಹಾಗೂ ಜಾತಿಗಳು ಬಳಸುತ್ತಿವೆ. ಹಾಗೆಯೇ ವಾಗ್ರಿಭಾಷೆಯನ್ನು ಹಕ್ಕಿಪಿಕ್ಕಿಯರು ಬಳಸುತ್ತಿದ್ದಾರೆ. ಒಂದು ಭಾಷೆಯ ಸಹಾಯದಿಂದಲೇ ತಮ್ಮಲ್ಲಿರುವ ಸುಖ-ದುಃಖ, ಆಶೆ-ಆಕಾಂಕ್ಷೆಗಳನ್ನು ಬೇರೆಯವರೊಂದಿಗೆ ಹಂಚಿಕೊಳ್ಳಲು ಸಾಧ್ಯವಾಗುತ್ತದೆ. ಭೂಮಿ ಮೇಲಿನ ಸಕಲಕೋಟಿ ಪ್ರಾಣಿಗಳಲ್ಲಿ ಮನುಷ್ಯವೆಂಬುದೊಂದೇ ಮಾತನಾಡುವ ಪ್ರಾಣಿಯಾಗಿದೆ. ಬೇರೆ ಪ್ರಾಣಿ ಪಕ್ಷಿಗಳು ಕೇವಲ ಶಬ್ದ ಮಾಡುತ್ತವೆ (ಒದರುತ್ತವೆ) ಮಾತು ಅಥವಾ ಭಾಷೆಯೆಂಬುದು ದೇವರು ಮನುಷ್ಯನಿಗೆ ಕೊಟ್ಟ ಒಂದು ದೊಡ್ಡ ವರದಾನವಾಗಿದೆ.

ಭಾರತದ ಸಂವಿಧಾನದಲ್ಲಿ ಮನ್ನಣೆ ಪಡೆದ ೧೭ ಬೇರೆ ಬೇರೆ ಭಾಷೆಗಳಿಗೆಲ್ಲಾ ತಮ್ಮದೇ ಆದ ಲಿಪಿ ಇವೆ. ಆದರೆ ಹಕ್ಕಿಪಿಕ್ಕಿಯರು ಆಡುವ ಮಾತಿಗೆ ಯಾವುದೇ ಲಿಪಿ ಇಲ್ಲ. ಇಲ್ಲಿ ಕೇವಲ ಮಾತು ಮಾತ್ರ ಇದೆ. ಆದರೆ ಆ ಮಾತಿಗೆ ಬರವಣಿಗೆ ಇಲ್ಲ.

ಮನುಷ್ಯ ಮಾತನಾಡುವ ಮಾತಿನಿಂದಲೇ ಇವನು ಇನ್ನುಳಿದ ಪ್ರಾಣಿಗಳಿಗಿಂತ ಭಿನ್ನವಾಗಿ 'ಶ್ರೇಷ್ಠ ಪ್ರಾಣಿ' ಎನಿಸಿಕೊಂಡಿದ್ದಾನೆ.

ಹಕ್ಕಿಪಿಕ್ಕಿಯರ ಭಾಷೆ 'ವಾಗ್ರಿ' ಆಗಿದೆ. ಇದನ್ನು ಅವರು ವಾಗರಿಯೋ ಎಂದು ಹೇಳುತ್ತಾರೆ. ತಮ್ಮ ಭಾಷೆಯ ಇತಿಹಾಸವನ್ನಾಗಲಿ ಅಥವಾ ಅದು ಎಷ್ಟು ವರ್ಷಗಳಿಂದ ಚಾಲ್ತಿಯಲ್ಲಿದೆ ಎಂಬುದರ ಬಗ್ಗೆಯಾಗಲಿ ಯಾವೊಬ್ಬ ಹಕ್ಕಿಪಿಕ್ಕಿಯರ ಬಳಿಯು ಯಾವುದೇ ಮಾಹಿತಿಯಾಗಲಿ ಅಥವಾ ದಾಖಲೆಯಾಗಲಿ ಇಲ್ಲ. ಈ ವಾಗ್ರಿ ಭಾಷೆಯು ಅನೇಕ ಪ್ರಾದೇಶಿಕ ಭಾಷೆಗಳ ಮಿಶ್ರಣವಾಗಿದೆ. ಇವರು ತಮಿಳು, ತೆಲಗು, ಗುಜರಾತಿ, ಮರಾಠಿ, ಹಿಂದಿ, ಉರ್ದು, ಈ ರೀತಿಯಾಗಿ ಅನೇಕ ಭಾಷೆಗಳನ್ನು ಮಿಶ್ರಮಾಡಿ ಒಂದು ರೀತಿಯ ಮಿಶ್ರಣ

ಭಾಷೆಯಂತೆ ಮಾತನಾಡುತ್ತಾರೆ. ಇವರು ಇಡುವ ಹೆಸರುಗಳನ್ನು ನೋಡಿದರೆ ಇವರ ಭಾಷೆಯಲ್ಲಿ ಇಂಗ್ಲೀಷ್ ಸಹ ಸೇರಿದೆ ಅಂತ ಹೇಳಬಹುದು.

ಮೈಸೂರು, ಬೆಂಗಳೂರು ಕಡೆಯಲ್ಲಿಯ ಹಕ್ಕಿಪಿಕ್ಕಿಯರ ಹೆಸರುಗಳು, Division, Lawyer, Express, Inspector, Chamcham ಎಂತೆಲ್ಲಾ ಇವೆ.

ಇವರು ಬಹುತೇಕ ಪ್ರಾದೇಶಿಕ ಭಾಷೆಗಳ ಮಿಶ್ರಣ ಮಾಡಿ ಮಾತಾಡುವದರ ಜೊತೆಗೆ ಇವರು ಯಾವ ರಾಜ್ಯದಲ್ಲಿ ಜೀವನ ಮಾಡುತ್ತಾರೋ ಆ ರಾಜ್ಯದ ಸ್ಥಳೀಯ ಭಾಷೆಯನ್ನು ಚೆನ್ನಾಗಿ ಬಲ್ಲವರಾಗಿರುತ್ತಾರೆ. ಉದಾಹರಣೆಗೆ ಹೇಳಬೇಕಾದರೆ, ಕರ್ನಾಟಕದಲ್ಲಿ ವಾಸಿಸುತ್ತಿರುವ ಎಲ್ಲಾ ಹಕ್ಕಿಪಿಕ್ಕಿಯರು ಕನ್ನಡ ಭಾಷೆಯನ್ನು ನಿರರ್ಗಳವಾಗಿ ಮಾತನಾಡುತ್ತಾರೆ. ಕೆಲವೇ ಕೆಲವರು ಮಾತ್ರ ಅಸ್ಪಷ್ಟವಾದ ಕನ್ನಡವನ್ನು ಮಾತನಾಡುತ್ತಾರೆ. ವ್ಯಾಪಾರದ ಕಾರಣದಿಂದಾಗಿ ಉತ್ತರ ಭಾರತದ ಇರುವವರು ಕನ್ನಡವನ್ನು ಕಷ್ಟಪಟ್ಟು ಅಸ್ಪಷ್ಟವಾಗಿ ಮಾತನಾಡುತ್ತಾರೆ. ಮತ್ತೇ ಕೆಲವರು ತಮಗೆ ಕನ್ನಡವೇ ಬರೋದಿಲ್ಲವೇನೋ ಎಂಬುವಷ್ಟರ ಮಟ್ಟಿಗೆ ಅಸ್ಪಷ್ಟವಾಗಿ ಮಾತನಾಡುತ್ತಾರೆ.

ಇವರು ಅನೇಕ ಭಾಷೆಗಳ ಪ್ರದೇಶಗಳಲ್ಲಿ ಅಲೆಮಾರಿಗಳಾಗಿರುವುದರಿಂದ ಅಕ್ಷರಸ್ಥರಾಗಲಿ ಅಥವಾ ಅನಕ್ಷರಸ್ಥರಾಗಲಿ ೨-೩ ಭಾಷೆಗಳನ್ನು ನಿರರ್ಗಳವಾಗಿ ಮಾತನಾಡುತ್ತಾರೆ. ಅವರು ತಮ್ಮ ಭಾವನೆ, ಯೋಚನೆ ಮತ್ತು ಅನುಭವಗಳನ್ನು ತಮ್ಮ ವಾಗ್ರಿ ಭಾಷೆಯಲ್ಲಿ ಹೇಳಿಕೊಂಡಷ್ಟು (ಹಂಚಿಕೊಂಡಷ್ಟು) ನಿರರ್ಗಳವಾಗಿ ಕನ್ನಡದಲ್ಲಿ ಹಂಚಿಕೊಳ್ಳಲಾರರು. ಅವರು ಹಿಂದೂಸ್ಥಾನಿಯನ್ನು ತಮ್ಮ ಭಾಷೆಯ ನಂತರದ ಸ್ಥಾನದಲ್ಲಿ ಬಳಸುವ ಶಕ್ತಿಯಿದ್ದರೆ ಅವರು ಕನ್ನಡವನ್ನೇ ಹೆಚ್ಚಾಗಿ ಬಳಸುತ್ತಿದ್ದರು. ಹಕ್ಕಿಪಿಕ್ಕಿಯರು ಸಾಮಾನ್ಯವಾಗಿ ಉತ್ತರದ ಭಾಷೆಗಳಿಗಿಂತ ದಕ್ಷಿಣದ ಭಾಷೆಗಳನ್ನೇ ಅವರು ಹೆಚ್ಚಾಗಿ ಬಳಸುತ್ತಾರೆ. ಇದಕ್ಕೆ ಕಾರಣ ಸ್ಪಷ್ಟವಾಗಿದೆ ಹಕ್ಕಿಪಿಕ್ಕಿಯರಲ್ಲಿ ಬಹಳಷ್ಟು ಅಲೆಮಾರಿಗಳಿರುವದಲ್ಲದೇ ಅವರ ಬದುಕು ದಕ್ಷಿಣ ಭಾರತಕ್ಕೆ ಹೆಚ್ಚು ಸೀಮಿತವಾಗಿದ್ದಾರೆ. ಈ ಸಮುದಾಯವು ಒಂದು ಬಹುಭಾಷಿಯ ಸಮುದಾಯವಾಗಿದ್ದರೂ ಸಹ ವಾಗ್ರಿ, ಹಿಂದೂಸ್ತಾನಿ, ಹಾಗೂ ಕನ್ನಡ ಭಾಷೆಗಳು ಇವರ ಪ್ರಮುಖ ಭಾಷೆಗಳಾಗಿವೆ. ಇವರಾಡುವ ಕನ್ನಡದ ಉಚ್ಚಾರವು ಸಹ ವಾಗ್ರಿ ಭಾಷೆಯನ್ನೇ ಅವಲಂಬಿಸಿರುತ್ತದೆ ಸಾಮಾನ್ಯವಾಗಿ 'ದ' ಕಾರವು 'ಡ' ಕಾರವಾಗಿರುತ್ತದೆ. ಒಟ್ಟಿನಲ್ಲಿ ಹಕ್ಕಿಪಿಕ್ಕಿಯರು ಬಹುಭಾಷಾಪ್ರಿಯರು.

ಇವರಾಡುವ ವಾಗ್ರಿ ಭಾಷೆಯಲ್ಲಿ ಕನ್ನಡದ ಪದಗಳು, ವಾಕ್ಯಗಳ ರಚನೆಗಳು ಬಹುವಾಗಿ ಪ್ರಭಾವ ಬೀರಿವೆ. ಇದರಿಂದಾಗಿ ಇವರ ಭಾಷೆ ಇತರರಿಗೆ ಅರ್ಥವಾಗದೆ ಇರುವ ಕಾರಣ ಇವರು ಯಾವುದೋ ಗುಪ್ತ ಭಾಷೆ ಮಾತನಾಡುತ್ತಿದ್ದಾರೆಂದು ಇವರು ಯಾರೋ ಕಳ್ಳರೇ ಇರಬೇಕು ಅದಕ್ಕಾಗಿ ಈ ರೀತಿಯಾಗಿ ಮಾತನಾಡುತ್ತಿದ್ದಾರೆಂದು ಅನೇಕ ಕಡೆ ಅನೇಕ ರೀತಿಯ ಅನಾಹುತಗಳು ಆದ ನಿದರ್ಶನಗಳು ಸಾಕಷ್ಟಿವೆ.

ಬ್ರಿಟಿಷರ ಆಡಳಿತದ ಅವಧಿಯಲ್ಲಿ ಇವರನ್ನು ಕ್ರಿಮಿನಲ್ ಬುಡಕಟ್ಟು ಎಂದು ಕರೆಯುತ್ತಿದ್ದರಿಂದ ಈಗಲೂ ಅನೇಕರು ಹಾಗೂ ಪೋಲಿಸನವರು ಇವರನ್ನು ಅಪರಾಧಿಗಳ ಸಮಾಜ ವೆಂತಲೇ ಕರೆಯುತ್ತಿರುವುದು ಶೋಚನೀಯ. ಇಂಥಹ ಒಂದು ಬುಡಕಟ್ಟನ್ನು ಅಧ್ಯಯನ (ಸಂಶೋಧನೆ) ಅಷ್ಟೇನು ಸುಲಭದ ಕೆಲಸವೇನೂ ಅಲ್ಲ. ಅಲ್ಲದೇ ಈಗಾಗಲೇ ತಿಳಿಸಿರುವಂತೆ ಇವರು ಬಹಳಷ್ಟು ಸಂಶಯದ ಜನರು ತಮಗೆ ನಂಬಿಕೆ ಬರದ ಹೊರತು ಬೇರೆಯವರೊಂದಿಗೆ ಸುಲಭವಾಗಿ ಬೆರೆಯುವುದು ಇಲ್ಲ, ಮಾತನ್ನೂ ಆಡುವುದಿಲ್ಲ. ಒಳ್ಳೇ ಬಟ್ಟೆ ಹಾಕಿಕೊಂಡು ಇವರ ಥಾಂಡಕ್ಕೆ ಹೋದರೆ ಅವರು ಖಂಡಿತವಾಗಿಯು ಅಂಥಹ ವ್ಯಕ್ತಿಯನ್ನು ಯಾರೋ ಪೋಲೀಸಿನವನೆಂತಲ್ಲೇ ಅಥವಾ ಅಬಕಾರಿ ಇಲಾಖೆಯವನೆಂತಲೋ ಅಥವಾ ಗುಪ್ತಚಾರ ಇಲಾಖೇಯವನೆಂತಲೋ ಎಂದು ಅನುಮಾನಿಸುತ್ತಾರೆ. ಈ ಸಂದರ್ಭ ಪಾರ್ಧಿಗಳಲ್ಲಿ ಹೆಚ್ಚು. ಆದರೆ ಹಕ್ಕಿಪಿಕ್ಕಿಗಳಲ್ಲಿ ಈ ಸಮಸ್ಯೆಯಿಲ್ಲ. ಬಹಳ ಬೇಗ ಸ್ಪಂದಿಸಿ ಕೇಳಿದ ಪ್ರಶ್ನೆಗಳಿಗೆ ಸಂಶೋಧಕನೊಂದಿಗೆ ಮಾತನಾಡದೇ ಅವರ ಮೇಲೆ ಹಲ್ಲೆ ಮಾಡಲೂ ಹೇಸುವುದಿಲ್ಲ. ಕಾರಣ ಸಂಶೋಧಕನಾದವನು ಒಬ್ಬ ಪರಿಚಿತರೊಂದಿಗಾಗಲಿ ಅಥವಾ ಈ ಸಮುದಾಯದ ಮುಖಂಡನೊಂದಿಗಾಗಲಿ ಕ್ಷೇತ್ರ ಕಾರ್ಯಕ್ಕೆ ಹೋಗಬೇಕು. ಆದರೆ ಈ ಅನುಕೂಲ ಪ್ರತಿಸಲ ಮತ್ತು ಪ್ರತಿ ಊರಿನಲ್ಲಿ ಸಿಗುವುದಿಲ್ಲ. ಆ ಕಾರಣಕ್ಕಾಗಿ ಇವರೊಂದಿಗೆ ಒಂದು ಉತ್ತಮ ಬಾಂಧವ್ಯ ಬೆಳೆಸುವ ನಿಟ್ಟಿನಲ್ಲಿ ಹಾಗೂ ಇವರೊಂದಿಗೆ ಬೆರೆತು ಸಂಪೂರ್ಣ ವಾಗಿ ಮಾಹಿತಿಯನ್ನು ಪಡೆಯುವ ನಿಟ್ಟಿನಲ್ಲಿ ಸಂಶೋಧಕನಾದವನ್ನು ಇವರಾಡುವ ವಾಗ್ರಿ ಭಾಷೆಯನ್ನು ಅರ್ಥಮಾಡಿಕೊಂಡವನಾಗಿರಬೇಕು. ಇವರಾಡುವ ವಾಗ್ರಿ ಭಾಷೆಯ ವಾಕ್ಯಗಳಲ್ಲಿ ಕೆಲವೇ ಕೆಲವುಗಳನ್ನು ಈ ಕೆಳಗೆ ನಮೂದಿಸಿದೆ.

೧. ಪಗೆ ಪಡುಸ್ ಎಂದರೆ

*ನಾನು ನಿಮಗೆ ಕೈಮುಗಿಯುತ್ತೇನೆ ಅಥವಾ ನಮಸ್ಕಾರ ಎಂದರ್ಥ.*

೨. ತಾರು ನಾಂ ಶಾತ್? ಎಂದರೆ

*ನಿನ್ನ ಹೆಸರೇನು? ಅಂತ.*

೩. ಥಾನ್ ಖಾಧೋ? ಅಂದರೆ

*ಊಟ ಮಾಡಿದ್ದೀರಾ? ಎಂದರ್ಥ.*

೪. ರೋಟೊ ಖಾದೋ: ಕೀ ಬೋಟಿ ಖಾದೊ?

*ಅಂದರೆ ರೋಟಿ ಊಟ ಮಾಡಿದ್ದೀರಾ? ಅಥವಾ ಮಾಂಸದ ಊಟ ಮಾಡಿದ್ದೀರಾ? ಎಂದರ್ಥ.*

೫. ಮೇ ಆವಾನಿ ಟೇಂ, ತು ಕಿಜ್ಞಾ ಗಯೋಥೋ?

*ಅಂದರೆ ನಾನು ನಿಮ್ಮಲ್ಲಿಗೆ ಬಂದಾಗ ನೀವು ಎಲ್ಲಿಗೆ ಹೋಗಿದ್ದಿರಿ? ಎಂದರ್ಥ.*

ಕೋಷ್ಟಕ ೮.೧ ಹಕ್ಕಿಪಿಕ್ಕಿಯರು ಬಳಸುವ ವಾಗ್ರಿ ಭಾಷೆಯ ತುಣುಕುಗಳು

| ವಾಗ್ರಿ | ಕನ್ನಡ | ವಾಗ್ರಿ | ಕನ್ನಡ |
|---|---|---|---|
| ದನ್ | ಹಗಲು | ಪಕ್ಕೊ | ಹಣ್ಣು |
| ಶುಕ್ಕರ್ | ನಕ್ಷತ್ರ | ಫೂಲ್ | ಹೂವು |
| ರ್‍ಹಾತ್ | ಕತ್ತಲು | ಚೋಟಿ | ಜಡೆ |
| ಉಜಾಳು | ಬೆಳಕು | ತಡಕೋ | ಬಿಸಿಲು |
| ಪಾಣಿ | ನೀರು | ಛಾಳೋ | ನೆರಳು |
| ವಾದಳೋ | ಮೋಡ | ಐನೊ | ಕನ್ನಡಿ |
| ಪಡದೊ | ಪರದೆ | ಹೀಕಡ್ | ಆಕಡೆ |
| ಘರ್ | ಮನೆ | ಹೈಕಡ್ | ಈಕಡೆ |
| ಬಾಕಲ್ | ಬಾಗಿಲು | ಖಾಮಣೆ | ಮುಂದೆ |
| ಖೊಖಿಡು | ಚಪ್ಪಲಿ | ಪಾತ್ಸಳ್ | ಹಿಂದೆ |
| ಚಾದ್ದರಿ | ಹಾಸಿಗೆ (ಚಾಪೆ) | ವಾಹಿರೋ | ಗಾಳಿ |
| ಒಗ್ಗಿ | ಬೇಗನೆ | ಚಂದರ್‌ಮೊ | ಚಂದ್ರಮಾಮ |
| ಉಖಾನ್ | ಸಾರು | ಸೂರಜ್ | ಸೂರ್ಯ |
| ಧಾನ್ | ಅನ್ನ | ಕೊಳ್ಳಿಯೋ | ಹೆಂಡತಿಯನ್ನು ಕರೆಯಲು ಬಳಸುವ ಪದ. |
| ದಬ್ಬಾ | ಬಾಣಂತಿ | | |
| ಖಾಳಾ | ಭಾವ | | |
| ಪಾಂದಡು | ಎಲೆ | ಕೊಳ್ಳಾಯೋ | ಗಂಡನನ್ನು ಕರೆಯಲು ಬಳಸುವ ಪದ. |
| ಜಾಡಿ | ದಪ್ಪ | | |
| ಬೋಲ್ | ಹೇಳು. | | |
| ಬಾವಣ್ | ರಾಂಡ್, ಶೀತ್ ಇವೆಲ್ಲವು ಹೆಂಡತಿಗೆ ಕರೆಯುವ ಬೇರೆ ಬೇರೆ ನಮೂನೆಗಳು. | ಬಾವರಿ | ಗಂಡನಿಗೆ ಗೌರವ ಸೂಚಕವಾಗಿ ಕರೆಯುವ ಶಬ್ದ |
| | | ಬೋಡ್ನು | ಸಾದೆ |
| ಕಚ್ಚು | ಕಾಯಿ | ಭೆಂಖ್ಯೊ | ಕೋಣ |
| ಉಡುಪುಗಳು | | | |
| ಕುಡುತು | ಅಂಗಿ | ಪಂಚಿ | ಪಂಚೆ |
| ಕಾರ್ಝುಳಿ | ಕುಪ್ಪಸ | ಖಾಡಿ | ಸೀರೆ |

| ವಾಗ್ರಿ | ಕನ್ನಡ | ವಾಗ್ರಿ | ಕನ್ನಡ |
|---|---|---|---|
| ಘಾಗ್ರೊ | ಲಂಗ | ಚೌಕೋ | ಕರಚಿಫ಼ು |
| ಮೋಚಲ್ದಿ | ಕಾಲು ಚೀಲ | | |

ಸರ್ವನಾಮಗಳು ಮತ್ತು ಸಂಬಂಧ ವಾಚಕಗಳು

| | | | |
|---|---|---|---|
| ಯೋ | ಅವನು/ಅವಳು | ನಾನು ಬೈ (ಚೊಟಬೈ) | ತಮ್ಮ |
| ಯೋ | ಚೊಕರಿ/ಚೊಕರು | ಮೊಟಿ ಬೆಹನ್(ಬಾಯ್) | ಅಕ್ಕ |
| ಐರಿತೆ | ಇವಳು | ನಾನಿ (ಚೋಟಿ) ಬೆಹನ್ | ತಂಗಿ |
| ಐರೊತೆ | ಇವನು | ಚ್ಕಿಯೋ | ಮಗ |
| ಅಪಣೆಬಾರು | ಇವರು | ಚ್ಕೋರಿ | ಮಗಳು |
| ಬಾ | ಅಪ್ಪ | ಫ್ಯುಯ್ಬಿ | ಅತ್ತೆ |
| ಆಯಾ | ಅಮ್ಮ | ವಹೂ | ಸೊಸೆ |
| ವೋಟುಬ್ಬೈ | ದೊಡ್ಡಣ್ಣ. | ಖಾಳಿ | ನಾದಿನಿ |
| ಭೋಜಯಿ | ಅತ್ತಿಗೆ | ಮೊಡಬ್ಯೋ | ಅನ್ಯಜಾತಿ- |
| ಮಾಡರೆ | ಅನ್ಯಜಾತಿ ಹೆಣ್ಣು | | ಗಂಡು |

ಮನೆ, ಅಡಿಗೆ ಸಾಮಗ್ರಿಗಳ ಪಟ್ಟಿ

| | | | |
|---|---|---|---|
| ಹಂಡೋ | ಹಂಡೆವು | ಡೋಯೋ | ಸೌಟು |
| ಡಕ್ಕನು | ಮುಚ್ಚಳ | ಧಾನ್‌ಹಂಡಕು | ಅನ್ನದ ಪಾತ್ರೆ |
| ಮೀಳ್ಳಿ | ಬಟ್ಟಲು | ಥಾಳಿ | ತಟ್ಟೆ |
| ಡೋಯಿ | ಲೋಟ | ಕೇಳಿ | ಬಿಂದಿಗೆ |
| ಹಿಟ್ಪ್ಕಿಕರಾನು | ಡಾಂಡು ಮುದ್ದೆ | ಲಾಕಡಾ | ಸೌಧೆ |
| ಲಾಕಡು | ಮಾಡುವ ಕೋಲು | ಕಢ್ಯೆ | ಕಡಾಯಿ |
| ಡೋಯೋ | ಸೌಟು | ರೋಟಾನುಡಬ್ಬೋ | ರೊಟ್ಟಿಡಬ್ಬಿ |
| ಥಾಳ್ | ಹರಿವಾಣ | ಕುರ್ಚಿ | ಕುರ್ಚಿ |
| ಝೂದರಿ | ಚಾಪೆ | ಡೋಯ್ | ಚಮಚ |
| ಝೂಳನಿ | ಜರುಡಿ | ಖಿಫೋಡಿ | ದುಪ್ಪಟ |
| ಬೀಗನಿಕೀಲಿ | ಬೀಗದಕ್ಕೈ | ಚಿಮಟೋ | ಚಿಮುಟ |
| ಝುತ್ತರಿ | ಕೊಡೆ | ಝೂಡು | ಪೊರಕೆ |
| ಝಿಝುರ್ಝೋ | ಉಯ್ಯಾಲೆ | ಟೋಕರಿ | ಬುಟ್ಟಿ |
| ಟೆಬಲ್ | ಮೇಜು | ಕಾಂಗಷಿ | ಹಣಿಗೆ,ಬಾಚಣಿಕೆ |
| ಪಿಟಾರೋ | ಪೆಟ್ಟಿಗೆ | ಥಕ್ಕಣ್ | ಮುಚ್ಚಳ |
| ಶಿರಾಣಿ | ದಿಂಬು | ಪಲ್ಲಂಗ್ | ಮಂಚ |

| ವಾಗ್ರಿ | ಕನ್ನಡ | ವಾಗ್ರಿ | ಕನ್ನಡ |
|---|---|---|---|
| ಮಿಳ್ಳಿ | ಬಟ್ಟಲು | ತಾಂತ್ | ತಂತಿ |
| ಬೀಗ | ಬೀಗ | ರೇಜರಿ | ತಿಜೋರಿ |
| ಚುಲ್ಹೋ | ಒಲೆ | ಪಿತ್ತಳಿ | ತಟ್ಟೆ |
| ಐನೋ | ಕನ್ನಡಿ | ಅಗ್‌ನೊಡಬ್ಬೊ | ಕಡ್ಡಿಪೆಟ್ಟಿಗೆ |
| ಮುಠ್ಠಿನಿಪಿತ್ತಳಿ | ಹಿಡಿತಟ್ಟೆ | ದಾತ್‌ನಿಕಾಡಿ | ಹಲ್ಲುಕಡ್ಡಿ |
| ನಳ್ | ನಲ್ಲಿ | ಟೋಟ್‌ಳಿ | ಪಲ್ಲಕ್ಕಿ |
| ಥೂಕ್‌ದಾಣಿ | ಉಗುಳುಪಾತ್ರೆ | ಹಂಡಕು | ಗಡಿಗೆ |
| ಫೂಟ್‌ದಾಣಿ | ಹೂದಾನಿ | ಲಡಕಾನಿ ಗಾಡಿ | ಮಕ್ಕಳ ಗಾಡಿ |
| **ವಾದ್ಯಗಳು** | | | |
| ಘಾಟೋ | ಗಂಟೆ | ತಾತ್‌ನೋ ವಾಜು | ತಂತಿವಾದ್ಯ |
| ಝುಂಜರಿ | ಝುಲ್ಲರಿ | ತಾಳ | ಮದ್ದಲೆ |
| ಮರಧಂಗ್ | ಮೃದಂಗ | ಟಿಮ್‌ಟಿ | ಟಿಮಟೆ |
| ತಬಲ | ತಬಲ | ಶಂಖ್ | ಶಂಖ |
| ಮ್ಹೋಡಾನು | ಬಾಯಿವಾದ್ಯ | ನಗಾರ್ | ನಗಾರಿ |
| ಪಾಜಾನುಫೂಕಣೋ | ಕಹಳೆ | ಪೀಯನ್ | ಪಿಯಾನೋ |
| ಪೀಟೀಲ್ | ಪಿಟೀಲು | ಶೀಟಿ | ಸಿಳ್ಳೆ |
| **ಆಭರಣ** | | | |
| ಡಾಬ್ | ಡಾಬು | ಗೋಡಾನು ಕಾಕಣು | ಕಾಲ್ಕಡಗ |
| ಮಾಣಿಕ್ಯ | ಮಾಣಿಕ್ | ಹಾರ್ | ಮಾಲೆ |
| ಹವಳ್ | ಹವ್‌ಳ | ಮೋತಿ | ಮುತ್ತು |
| ಗಲ್ಹೆಂಡಾನುಹಾರ್ | ಕಂಠಹಾರ | ವಿರ್‌ಧ್ಯೋ | ಕಾಲುಂಗರ |
| ಅಂಗುಟಿ | ಉಂಗುರ | ಕಾಕಣು | ಕಡಗ |
| ಖಾಕಳಿ | ಸರ | ಕಾಪ್ | ಬೆಂಡೋಲೆ |
| ಭೆಯಕಾನು | ಮುರವು | ವರ್‌ಗೊ | ಮುಕರ |
| ರೂಪ್ರ | ಬೆಳ್ಳಿ | ಧರಾನು | ಹಿಡಿಕೆ |
| ಚುಡಿಯಾ | ಬಳೆ | ಖಿರಪ್ | ನಗಗಳು |
| ಪಾಥಿ | ಬೈತಲೆಬಟ್ಟು | ಬೋಲಾಕ್ | ಬುಲಾಕು |
| **ಶರೀರದ ಅಂಗಗಳು, ರೋಗಗಳು** | | | |
| ಮುಡಿಕ್ಕು | ತಲೆ | ಕಂಬರ್ | ಸೊಂಟ |
| ಡೋಳೋ | ಕಣ್ಣು | ಪೇಟ್ | ಹೊಟ್ಟೆ |

| ವಾಗ್ರಿ | ಕನ್ನಡ | ವಾಗ್ರಿ | ಕನ್ನಡ |
|---|---|---|---|
| ನಾಕ್ | ಮೂಗು | ಛಥಿ | ಎದೆ |
| ಕಾನ್ | ಕಿವಿ | ಪೀಠ್ | ಬೆನ್ನು |
| ಹಾತ್ | ಕೈ | ಘುಕಣ | ಮೊಣಕೈ |
| ಗೊಡೊ | ಕಾಲು | ಹಥೇಳಿ | ಅಂಗೈ |
| ಜಾಂಗ್ | ತೊಡೆ | ಖಿಯಾಲ್ | ಮತಿಭ್ರಮಣೆ |
| ಪೀಪ್ | ಕೀವು | ಬಿಳಿಸೆರಗು | ಥೋಳುಮುಟ್ |
| ಪಿಳ್ಯಾಕಂ | ಪ್ಲೇಗ್ | ಗುಳ್ಳೆ | ಗುಂಬಡು |
| ಮೋಳೆನೊ ರೋಗ್ | ಮೂಲವ್ಯಾದಿ | ಮಿಟ್ಟುಮುತ್ತ | ಸಿಹಿಮೂತ್ರ |
| ಗುರ್ | ಹುಣ್ಣು | ಭೀಚಾನು | ಬಿಗಿಹಿಡಿತ |
| ಮುತ್ತರ್ | ಮೂತ್ರ | ಬಿಮಾರಿ | ರೋಗ |
| ಕೋಪಚ್ಯುನಿ | ಅಜೀರ್ಣ | ಅಂಧು | ಕುರುಡು |
| ಪೇಟ್‌ಚಾಲಾನು | ಅತಿಸಾರ | ಆನ್‌ಜು | ಕಣ್ಣೀರು |
| ದರದ್ | ಹುಳುಕಡ್ಡಿ | ಉಬಾಷ | ಆಕಳಿಸು |
| ನಹಾರ್ | ನರ | ಚೊಟ್ಲಿ | ಜುಟ್ಟು |
| ತಾಳು | ಹಣೆ | ಲ್ಹೊಯ್ | ರಕ್ತ |
| ಧಡ್ | ಮುಂಡ | ಹಥೇಳಿ | ಅಂಗೈ |
| ಖುಕ್ಕು | ಹೃದಯ | ಹಾತ್ | ಕೈ |
| ಹಡ್‌ಕ್ಯೊ | ಮುಳೆ | ಮಚ್ಚರ್‌ನು ತಾವ್ | ಡೆಂಗಿಜ್ವರ |
| ಮೋಟೀದೇವಿ | ಸಿಡುಬು | ರಣ್‌ತಾವ್ | ಶೀತಜ್ವರ |
| ದಮ್ | ಶ್ವಾಸ | ಫುಲಾನು | ಊತ |
| ಹೆಬ್‌ಕಿ | ಬಿಕ್ಕಳಿಕೆ | ಲಜತ್‌ಮರಾನು | ರುಚಿನಾಶ |
| ಅಛ್ಯೋ | ಆರೋಗ್ಯವಂತ | ಲಂಗ್ಡೋ | ಕುಂಟ |
| ಘೆಂದಲ್ಯಾ | ಬೊಚ್ಚುಮ್ಮೆ | ಛೀಕಾನು | ಸೀನುವುದು |
| ಶರಧಿ | ನೆಗಡಿ | ರಣ್‌ತಾವ್ | ಚಳಿಜ್ವರ |
| ರಣ್ | ಚಳಿ | ಥೂಕ್ | ಉಗುಳು |
| ಧಂ | ಉಬ್ಬಸ | ಇಜಾ | ನೋವು |
| ಗೂ | ಮಲ | ದಿವಾನು | ಮಾನಸಿಕ ಉನ್ಮಾದ |
| ನಿಂದರ್ | ನಿದ್ರೆ | ಪಶುನೋ | ಬೆವರು |
| ದಿವಾನು | ಹುಚ್ಚು | ಬಾರಿಕ್, ಪಾತಳು | ತೆಳ್ಳಗಿರುವುದು |
| ಪಿಂಬೋಲ್ಡೊ | ಕಫ್ | ಥೋಪ್ರು | ಗೂನುಬೆನ್ನು |

| ವಾಗ್ರಿ | ಕನ್ನಡ | ವಾಗ್ರಿ | ಕನ್ನಡ |
|---|---|---|---|
| ಖಿರಪ್‌ಖೋಡ್ | ತೊನ್ನು | ಕೀಡೋ | ಹುಳು |
| ಮಿಜಾಳ್ | ತುರಿತ | ಖಿರಜ್ | ಕಜ್ಜಿ |
| ಖಾಪ್ | ಕೆಮ್ಮು | ಖಿರ್‌ಖಿರಾಟಿ | ಗಂಟಲುಕೆರೆತ |
| ಗಡ್ಡೊ | ಗಡ್ಡೆ | ಫ್ರೋಡೋ | ಗಾಯ |
| ಭೋಲೀಟೇಕರ್ | ಬೊಕ್ಕತಲೆ | ಪೇಟ್‌ಪಡಾನು | ಗರ್ಭಪಾತ |
| ನಾಕ್‌ನ ಚಿಲ್ಲು | ಹೊಳ್ಳೆ | ಮುಂಡ್ | ಶಿರ |
| ನಾಕ್ | ಮೂಗು | ರಗ್ಗ | ನಾಡಿ |
| ಬೊಂಬಿ | ಹೊಕ್ಕಳು | ಪೀಟ್ | ಬೆನ್ನು |
| ಬೋಟಿನುಗಡ್ಡೊ | ಮೀನಖಂಡ | ಪಿತ್ತ್ | ಪಿತ್ತ |
| ಪಂಜೊ | ಪಾದ | ಫೆಪ್ಪುಡು | ಶ್ವಾಸಕೋಶ |
| ಬಿಖ್ | ಕೂದಲು | ಗಾಂಡ್ | ಯೋನಿ |
| ಡೊಬೊ | ಹುಬ್ಬು | ವಸೆಡು | ಬತೀಶಿ |
| ಮುಠಿ | ಮುಷ್ಟಿ | ಬಾಕು | ಬಾಯಿ |
| ವ್ಹೋಜುಡು | ಉದರ | ಪೇಟ್ | ಹೊಟ್ಟೆ |
| ಭೋಲಿ | ಗುದ | ಟಾಂಗ್ | ತೊಡೆ |
| ತಿಲ್ಲಿ | ಮೂತ್ರಕೋಶ | ಮೊಹೊಡು | ಮುಖ |
| ಛಾತಿ | ಎದೆ | ಬೊಚೆ | ಮೊಲೆ |
| ಕಲ್ಲು | ದವಡೆ | ಜೀಬ್ | ನಾಲಿಗೆ |
| ಪಗ್‌ತೇಳಿ | ಅಂಗಾಲು | ಮುಶೇಣಿ | ಮುಸುಡಿ |
| ದಾಂತ್ | ಹಲ್ಲು | ಗುದ್ದರ್ | ಮೆದಳು |
| ನಖಿರ್ | ಉಗುರು | ಟಚೋಕನ್ಯೋ | ಕೀಲು |
| ಅಕ್ಕಲ್‌ಢಾಡ್ | ಬುದ್ದಿಹಲ್ಲು | ಗೋಡಾನುಅಂಗಳಿ | ಕಾಲ್ಬೆರಳು |
| ಹಾತ್‌ನಿ ಅಂಗಳಿ | ಕೈಬೆರಳು | ಡೋಳೊ | ಕಣ್ಣು |
| ಹೋಟ್ | ತುಟಿ | ಏಡಿ | ಹಿಮ್ಮಡಿ |
| ಖಾಂದು | ಭುಜ | ಕಂಬರ್ | ಸೊಂಟ |
| ಕಾನ್ | ಕಿವಿ | ಚಿಟಂಗಳಿ | ಕಿರುಬೆರಳು |
| ಕಣಿಯೆ | ಕಂಕಳು | ಮುಡ | ತಲೆಬುರುಡೆ |
| ಹಾತ್‌ನಿ ಢುಕಣಿ | ಮೊಣಕೈ | ಗರಬ್ | ಗರ್ಭ |
| ಗಾಲ್ | ಕೆನ್ನೆಗಳು | ನಹಿಟೊ | ಗಂಟಲು |
| **ಮರಗಳು ಮತ್ತು ಭಾಗಗಳು** | | | |
| ಅಂಬೀರ್ | ಅಂಕುರ | ಕಲ್ಲಿ | ಮೊಗ್ಗು |

| ವಾಗ್ರಿ | ಕನ್ನಡ | ವಾಗ್ರಿ | ಕನ್ನಡ |
|---|---|---|---|
| ಖಿಷಿ | ಕಸಿ | ಕಾಟೊ | ಮುಳ್ಳು |
| ಝಾಡ್ | ಮರ | ಖಂಡೊ | ಕಲ್ಲು |
| ಪಂಡು | ಬೀಜ | ವಾಖೋ | ಬಿದಿರು |
| ಗರ್ | ತಿರುಳು | ಗೊಂದ್ | ಗೋಂದು |
| ಡಾಳಿ | ಕೊಂಬೆ | ಪೇದಡ್ | ಕಾಂಡ |
| ನಾರೇಳ್‌ನುಝಾರ್ | ತೆಂಗಿನಕಾಯಿ | ಛಿಲ್ಬು | ಸಿಪ್ಪೆ |
| ಶೇಬ್‌ನು ಝಾಡ್ | ಸೀಬೆಹಣ್ಣಿನ ಮರ | ಅಂಬ್ಲಿನು ಝಾಡ್ | ಹುಣಸೆ ಮರ |
| ಭೋಪ್ಲು | ಕುಂಬಳಕಾಯಿ | ಫಣೇಖ್ | ಹಲಸಿನಹಣ್ಣು |
| ಕನೀರ್ | ಕಣಗಿಲು | ಕಾಜು | ಗೋಡಂಬಿ |

**ಹೂವು, ಹಣ್ಣು, ತರಕಾರಿಗಳು**

| ವಾಗ್ರಿ | ಕನ್ನಡ | ವಾಗ್ರಿ | ಕನ್ನಡ |
|---|---|---|---|
| ಶಾವಂತಿಗೆ | ಸೇವಂತಿಗೆ | ಕಾಟಾನುಫೂಲ್ | ಗುಲಾಬಿ |
| ನ್ಹಾರ್ | ನಾರು | ಎಲೆ | ಪಾಂದಡು |
| ಡಂಡಿ | ಪತ್ರಕಂಡ | ಫೂಲ್ | ಹೂವು |
| ರಖೋ | ರಸ | ಪಾಖಿಡಿ | ಶಾಖೆ |
| ಕರವೇಲು | ಹಗಲಕಾಯಿ | ಕೇಳು | ಬಾಳೆಹಣ್ಣು |
| ದೂಧಿ | ಸೋರೆಕಾಯಿ | ಕಲಿಂಗಡು | ಕಲ್ಲಂಗಡಿ |
| ಲಿಂಬೂ | ನಿಂಬೆಹಣ್ಣು | ಗಾಜರ್ | ಕೆಂಪುಮೂಲಂಗಿ |
| ಕಬ್ಬು | ಖಾಟೋ | ಕಾಕಡಿ | ಸೌತೆಕಾಯಿ |
| ಆಲೂಗಡ್ಡೆ | ಆಲೂಗಡ್ಡೆ | ಅಂಬ್‌ಲಿ | ಹುಣಸೆ |
| ಢಾಡಂ | ದಾಳಿಂಬೆ | ಅನಾನಸ್ | ಅನಾರಸ |
| ಖೂಂಟ್ | ಕುಂಠಿ | ಶೇಬ್ | ಸೀಬೆ |
| ಅಂಜೀರ್ | ದ್ರಾಕ್ಷಿಹಣ್ಣು | ಬಾಜ್ರೊ | ಸೆಣಬು |
| ಆಂಬೋ | ಮಾವು | ಖಿರ್ನಿ | ಕಿನ್ನರಿಕಾಯಿ |
| ಹಲ್ದ | ಅಳಲೆಕಾಯಿ | ಲೋಂಗ್ | ಲವಂಗ |
| ಚೆಚೊಂಡು | ಪಡವಲಕಾಯಿ | ಚಂಪೇಲಿ | ಮಲ್ಲಿಗೆ |
| ಮರಚೆ | ಮೆಣಸಿನಕಾಯಿ | ಕಾಂಧೋ | ಈರುಳ್ಳಿ |
| ಭೇಂಡಿ | ಬೆಂಡೆಕಾಯಿ | ಮೂಳೊ | ಮೂಲಂಗಿ |
| ರತಾಳು | ಗೆಣಸು | ಬಿಲಾತಿ | ನೆಲಗಡಲೆಕಾಯಿ |
| ಸೀತಾಫಳ್ | ಸೀತಾಫಲ | ಫುದೀನ | ಪುದೀನಾ |
| ಕೆವಡೋ | ಕೇದಗಿ | ಬಯತ್ | ಬೆತ್ತ |

| ವಾಗ್ರಿ | ಕನ್ನಡ | ವಾಗ್ರಿ | ಕನ್ನಡ |
|---|---|---|---|
| ಫೋಂಬಣಿ | ಸಂಪಿಗೆ | ಚಿಕ್ಕು | ಸಪೋಟಾ |
| ಬಾಮಣ್ | ನೇರಿಳೆ | ತಮಾಖು | ತಂಬಾಕು |
| ಧತ್ತೂರ್ | ದತ್ತೂರಿ | ನಾರಂಗಿ | ಕಿತ್ತಳೆಹಣ್ಣು |
| ಪಾನ್ | ವೀಳ್ಯದೆಲೆ | ಪಾನ್ನಕೋನ್‌ಗಡ್ಡೊ | ಎಲೆಕೋಸು |
| ಧಾನ್ಯಗಳು ಮತ್ತು ಖಾದ್ಯಪದಾರ್ಥಗಳು | | | |
| ಅನಾಚ್ | ಕಾಳು | ಆಟೋ | ಹಿಟ್ಟು |
| ತೂರ್ಬೀನಿದಾಳ್ | ತೊಗರಿಬೆಳೆ | ಕಾಫಿ | ಕಾಫಿ |
| ಆಹಾರ | ಖಾವನು | ಮಕ್ಕು | ಮೆಕ್ಕೆಜೋಳ |
| ದಹಿಂ | ಹಾಲೊಡಕು | ಮಲ್ಹಯಿ | ಕೆನೆ |
| ದೂದ್ | ಹಾಲು | ಬಾಜರೊ | ಸಜ್ಜೆ |
| ಬೋಟಿ | ಮಾಂಸ | ಖಾಳ್ | ಭತ್ತ |
| ಧಾಂಡನಿಬೋಟಿ | ದನದ ಮಾಂಸ | ಮೆಂಡಾನಿಬೋಟಿ | ಕುರಿಮಾಂಸ |
| ಡುಕರ್‌ನಿಬೋಟಿ | ಹಂದಿಮಾಂಸ | ರಾತ್‌ನುಖಾಣು | ರಾತ್ರಿಊಟ |
| ಮಿಠುಮೇವ್ರೋ | ಸಿಹಿತಿಂಡಿ | ಕಲ್‌ಶಕ್ಕರ್ | ಕಲ್ಲುಸಕ್ಕರೆ |
| ಕಲ್‌ಥೀ | ಹುರುಳಿಕಾಯಿ | ರಾಯಿ | ಸಾಸಿವೆ |
| ಮಶ್ಕೋ | ಬೆಣ್ಣೆ | ರೋಟೊ | ರೊಟ್ಟಿ |
| ಶಕ್ಕರ್ | ಸಕ್ಕರೆ | ಶರಬತ್ | ಷರಬತ್ತು |
| ಬಾಡೀರವೆ | ದಪ್ಪರವೆ | ಧೋಳಿರಾಯಿ | ಬಿಳಿಸಾಸಿವೆ |
| ಚಣಾ | ಕಡಲೆ | ರೋಟೊ | ರೊಟ್ಟಿ |
| ಬಾಚಹ | ಚಪಾತಿ | ಚಪಾತಿ | |
| ಬೀಕ್ | ಗಿಣ್ಣು | ನ್ಯಾಹರಿ | ಉಪಾಹಾರ |
| ಚುಡುವ್ರೋ | ಅವಲಕ್ಕಿ | ಜುವಾರ್ | ಜೋಳ |
| ಗಹುಂ | ಗೋಧಿ | ತಿಲ್ಲ | ಎಳ್ಳು |
| ತೇಲ್ | ಎಣ್ಣೆ | ಧಯಿ | ಮೊಸರು |
| ದಾಳ್ | ಬೇಳೆಕಾಳು | ಯಾಲಕ್ಕಿನು ಪಂಡು | ಏಲಕ್ಕಿ |
| ಖಿಪಾರಿ | ಅಡಿಕೆ | ಹಲ್ದರ್ | ಅರಿಷಿಣ |
| ಹಿಂಗ್ | ಇಂಗು | ಸೀಮೆಹಕ್ಕಿ | ಸಬ್ಬಕ್ಕಿ |
| ಜೀರು | ಜೀರಿಗೆ | ಕೇಸ್ರಿ | ಕೇಸರಿ |
| ಖಿಶ್‌ಖಿಶ್ | ಗಸಗಸೆ | ಖೂಟ್ | ಶುಂಠಿ |
| ಮೀಟ್ | ಉಪ್ಪು | ಧಣೆಯೊ | ಕೊಂತ್ತಂಬರಿಬೀಜ |
| ಕಿರೀಮ್ | ಕ್ರೀಮು | ಬಲ್ಲರ್ | ಅವರೆಕಾಯಿ |

| ವಾಗ್ರಿ | ಕನ್ನಡ | ವಾಗ್ರಿ | ಕನ್ನಡ |
|---|---|---|---|
| **ಕಟ್ಟಡ ಮತ್ತು ಭಾಗಗಳು** | | | |
| ಅಟ್‌ಲೋ | ಮೇಲಟ್ಟ | ಆಶ್‌ಪತಾಲ್ | ಆಸ್ಪತ್ರೆ |
| ಕಟ್‌ವಾಡು | ಕಟ್ಟಡ | ಕಖಿಯ್ | ಕಸಾಯಿಖಾನೆ |
| ಅಂಗಾಳ | ಅಂಗಣ | ಕಾರ್ಖಾನು | ಕಾರ್ಖಾನೆ |
| ಹಂಚ್ | ಹೆಂಚು | ಷೋತ್ | ಕಣಜ |
| ಖಿಟಿಕಿ | ಕಿಡಕಿ | ಖಿನ್ | ಅಂತಸ್ತು |
| ಗುಂಬಜ್ | ಗುಮ್ಮಟ | ಮ್ಹಾಳೋ | ಪಕ್ಷಿಗೂಡು |
| ಛತ್ | ಮಾಳಿಗೆ | ಕಟ್‌ವಾಡು | ಕಟಕಟೆ |
| ಬಾಕಲ್ | ಬಾಗಿಲು | ಬಾಕಲ್‌ನು ಕೊಲ್ದ | ಹೊಸ್ತಿಲು |
| ಜಮೀನ್‌ಮನು ಘರ್ | ನೆಲಮಾಳಿಗೆ | ಝೋಪಡಿ | ಗುಡಿಸಲು |
| ನಾಟ್ | ತೊಲೆ | ಪಾಣಿನೊಹೋವಾನು | ಬಚ್ಚಲು |
| ಚಿಲೊಂದ್ರಿ | ಚರಂಡಿ | ಜಮಿನ್ | ನೆಲ |
| ಖಿವನುಕೋಣ್ದೊ | ಮಲಗುವ ಕೋಣೆ | ಬಂಗಲು | ಬಂಗಲೆ |
| ಘರ್ | ಮನೆ | ಮಷೀದ್ | ಮಸೀದಿ |
| ದೇವಳ್ | ದೇವಸ್ಥಾನ | ಮಹಾಲ್ | ಅರಮನೆ |
| ಷಾಲೇಜ್ | ಕಾಲೇಜು | ಷಾಂಬ್ | ಸ್ತಂಭ |
| ಕಮಾನ್ | ಕಮಾನು | ಖಾಣಾನುಘರ್ | ಅಡುಗೆಮನೆ |
| ಇಶ್ಕೋಲ್ | ಶಾಲೆ | ಚಿಮ್‌ನಿ | ಚಿಮಣಿ |
| ಷಿಮೆಂಟ್ | ಸಿಮೆಂಟ್ | ಪಾಯಿರಿ | ಮೆಟ್ಟಿಲು |
| ಪಡಾವ್ | ತಂಗುದಾಣ | ಉಜಾಳಾನು ಖಿಟಕಿ | ಬೆಳಕು ಕಿಟಕಿ |
| **ವೃತ್ತಿಗಳು** | | | |
| ದೂದ್‌ವಾಳೊ | ಹಾಲಿನವನು | ಗೌಳಿವಾಳಿ | ಗೌಳಿಗಿತ್ತಿ |
| ಖಿಡ್ಗರ್ | ಕಟುಕ | ಕಲಾಕಾರ್ | ಕಲಾವಿದ |
| ಕುಂಬಾರ್ | ಕುಂಬಾರ | ಮಜೂರಿ | ಕೂಲಿ |
| ಆಳ್‌ಕಾರ್ | ಜವಾನ | ಜಮೀನ್‌ದಾರ್ | ಜಮೀನ್ದಾರ |
| ಲೀಖಾವಳೊ | ಲೇಖಕ | ಕೋಲ್ಮಿವಾಳೊ | ಕಮ್ಮಾರ |
| ಬೇಪಾರಿ | ವ್ಯಾಪಾರಿ | ಷೋನಾರ್ | ಅಕ್ಕಸಾಲಿಗ |
| ಪಢಾವಾಳೊ | ಅಧ್ಯಾಪಕ | ಗೀದ್‌ಬೊಲವಾಳೊ | ಸಂಗೀತಗಾರ |
| ಎಪ್ಪುಕರಾವಾಳೊ | ಸಂಪಾದಕ | ಹಜಾಮ್ | ಕ್ಷೌರಿಕ |
| ಲೀಖಾವಾಳೊ | ಗದ್ಯಲೇಖಕ | ಚಲಾವಾಳೊ | ಯಂತ್ರಚಾಲಕ |

| ವಾಗ್ರಿ | ಕನ್ನಡ | ವಾಗ್ರಿ | ಕನ್ನಡ |
|---|---|---|---|
| ಪಾಣಿವಾಳೊ | ನೀರಿನವ | ಲೋಹಾರ್ | ಬಡಗಿ |
| ಮಾಂಗಾವಾಳೊ | ಭಿಕ್ಷುಕ | ಕಿಳಿಕಾತರ್ | ಬೆಸ್ತ |
| ಖಾಣುಕರಾವಾಳೊ | ಅಡುಗೆಯವನು | ಬಾಗ್‌ವಾಳೊ | ತೋಟಗಾರ |
| ಚಂಭಾರ್ | ಚಮ್ಮಾರ | ಮೇರಿ | ಮಾಲಿಕ |
| ಕಚ್ರೊಧೂಡಾವಾಳೊ | ಕಸಗುಡಿಸುವವನು | ಟಿಗೀಟ್‌ಲ್ಯಾವಾಳೊ | ಬಸ್‌ನಿರ್ವಾಹಕ |
| ಧೋಬಿವಾಳ | ಅಗಸಗಿತ್ತಿ | ಪಾಡಾವಾಳೊ | ಎಕ್ಕುವವನು |
| ಕಾಮ್‌ವಾಳೋ | ಅಯಾ | ದುಕಾನ್‌ವಾಳೊ | ಅಂಗಡಿದಾರ |
| ದಲ್ಲಾಳಿ | ದಲ್ಲಾಳೀ | ನುಂಗಡುಓಣಾವಾಳೊ | ನೇಕಾರ |
| ಖೇಲಾವಾಳ | ನೃತ್ಯಗಾರ | ದೇಖಾವಾಳೊ | ಪರೀಕ್ಷಕ |
| ಉಪಕರಣಗಳು | | | |
| ಪಿಕಾಶಿ | ಸಲಿಕೆ | ಕಡ್ಯಾಪ್ರೋಂ | ಹಿಡಿಕೆ, ತಿರುಡಿ |
| ಝುರೀ | ಚೂರಿ | ಮಾಚಲಾನುಚಾಳ್ | ಮೀನಿನ ಗಾಳ |
| ಭಟ್ಟಿನಿಮಿಷನ್ | ಬಟ್ಟೆಯಂತ್ರ | ಲಂಗರ್ | ಲಂಗರು |
| ನಾಗರ್ | ನೇಗಿಲು | ಕುಳ | ಗುಳ |
| ಹಾತ್‌ನು ಖಾಮನ್ | ಕೈ ಉಪಕರಣ | ಕೊಯತು | ಕತ್ತಿ |
| ಆರ | ಅರ | ದಬ್ಬಳೋ | ಡಬ್ಬಳ |
| ನಟ್ | ನಟ್ | ತೋಲಾನು | ತಕ್ಕಡಿ |
| ದರಾತಿ | ಕುಡುಗೋಲು | ಕೋಣ್ಣೋ | ಮೂಲೆಕಟ್ಟು |
| ಬಿಲ್ಲೋ | ಬೆಣ್ಣೆ ಗೂಟ | ಶುತ್ತಿ | ಬೈರಿಗೆ |
| ಚರಕ್ | ಗರಗಸ | ಕೈವಾರ್ | ಕೈವಾರ |
| ಘಾವಡೊ | ಮೂಗೆಗುದ್ದಲಿ | ಕತ್ತರ್‌ನಿ | ಕತ್ತರಿ |
| ಕುರ್ಹಾಡಿ | ಕೊಡಲಿ | ಮಾಪಣಿ | ಅಳತೆ ಸಾಧನ |
| ಉಡುಗೆ | | | |
| ಘಾಗರೋ | ಲಂಗ | ಬುರಖೋ | ಬುರಕಿ |
| ಗಾಧಿ | ಗಾದಿ | ಧಾಗೋ | ದಾರ |
| ಗೋದುಡು | ಚಾದರ್ | ಮೋಚಲ್ಡಿ | ಕಾಲುಚೀಲ |
| ಖೇಖೋ | ಜೇಬು | ಚಾಕೊ | ಚಾಕು |
| ಚೌಕೊ | ಚೌಕ | ದುಶಾಲ | ಶಾಲು |
| ಕೋಟ್ | ಕೋಟು | ಪ್ಯಾಂಟ್ | ಪ್ಯಾಂಟು |

| ವಾಗ್ರಿ | ಕನ್ನಡ | ವಾಗ್ರಿ | ಕನ್ನಡ |
|---|---|---|---|
| ಭಾಂದವ್ಯ | | | |
| ಮಾಮ | ಮಾಮ | ರಖೇಲ್ | ಉಪಪತ್ನಿ |
| ಗುರು | ಗುರು | ನಾನ್ಯೊರಾಕ | ಚಿಕ್ಕಪ್ಪ |
| ವಡೊ, ನಾನೋ | ತಾತ | ವಡಿ, ನಾನಿ | ಅಜ್ಜಿ |
| ಜಮಯಿ | ಅಳಿಯ | ಖಿಂಗ್‌ವಾಳೋ | ಮಿತ್ರ |
| ಬಾವ್‌ರಿ | ಗಂಡ | ಬಾವಣ್ | ಹೆಂಡತಿ |
| ಖಿಳ | ಭಾವಮೈದುನ | ವವ್ಹೊ | ಸೊಸೆ |
| ಬಾತಂದೆ | ಛಿಯೊ | ಮಗ | |
| ಝೋರಿ | ಮಗಳು | ಲಾಡ್ | ಪ್ರೀತಿ |
| ಖಿಂಗ್‌ವಾಳ್ | ಪ್ರೇಮಿ | ನಕ್ಕಿಭೇನ್ | ತಂಗಿ |
| ಮೋಟೊಭೈ | ಅಣ್ಣ | ಭೈ | ಸೋದರ |
| ಆಯಾನೋ ಭೈ | ಸೋದರಮಾವ | ಅಯನೊಬಾ | ತಾಯಿಯ ತಂದೆ |
| ಅಯನಿ ಆಯ | ತಾಯಿಯ ತಾಯಿ | ಜೇಠಾಣಿ | ಓರಗಿತ್ತಿ |
| ಬಾನಿಭೇನ್ | ಸೊದರತ್ತೆ | ಮಾಷಿ, ಕಾಕಿ | ಚಿಕ್ಕಮ್ಮ |
| ಫುಯ್ | ಅತ್ತೆ | ಬಂಧು | ಸಂಬಂಧಿಕ |
| ಬಳಗವಾಳು | ಬಳಗದವರು | ಖೋಕ್‌ನೊ ಭೈ | ಮಲಅಣ್ಣ |
| ಖೋಕ್‌ನಿ ಛೋರಿ | ಮಲಮಗಳು | ನ್ಹಾನೋ ಬಾ | ಮಲತಂದೆ |

ಈ ಮೇಲೆ ತಿಳಿಸಿದ ಈ ಎಲ್ಲಾ ಶಬ್ದಗಳನ್ನು ನೋಡಲಾಗಿ, ಈ ವಾಗ್ರಿ ಭಾಷೆಗೂ ಮತ್ತು ಹಿಂದಿ, ಉರ್ದು ಭಾಷೆಗೂ ಹೆಚ್ಚಿನ ವ್ಯತ್ಯಾಸವಿಲ್ಲವೆನ್ನಬಹುದು. ಇವರ ಬಹುತೇಕ ಶಬ್ದಗಳು ಕನ್ನಡ ಭಾಷೆಗೂ ಹತ್ತಿರದಲ್ಲಿವೆ.

ಹಕ್ಕಿಪಿಕ್ಕಿಯರ ಸಾಹಿತ್ಯ ಬಹುವಾಗಿ ಗುಜರಾತಿ ಮತ್ತು ಮರಾಠಿ ಭಾಷೆಯಲ್ಲಿರುವುದರಿಂದ ಅದನ್ನು ಸಂಗ್ರಹಿಸುವುದು ಅಷ್ಟು ಸುಲಭವೆನಲ್ಲ.

ಇವರ ಸಾಹಿತ್ಯ ಸಂಪದ್ಭರಿತವಾಗಿದ್ದರೂ ಸಹ, ಸಾಹಿತ್ಯದ ಹಲವಾರು ಪ್ರಕಾರಗಳನ್ನು ಹೇಳುವ ಸಾಮರ್ಥ್ಯವುಳ್ಳವರಾದರು ಸಹ ಕನಿಷ್ಟ ಒಂದು ಗಂಟೆಯುವರೆಗೆ ಕುಳಿತು ಹಾಡು, ಕತೆಗಳನ್ನು ಹೇಳುವವರು ಅಪರೂಪ. ಇನ್ನೂ ಇವರ ಸಾಹಿತ್ಯದ ಸ್ವರೂಪ ಒಟ್ಟಾರೆಯಾಗಿ ಇವರ ಬದುಕನ್ನೇ ಪ್ರತಿಬಿಂಬಿಸುತ್ತದೆ. ಇವರಲ್ಲಿ ಅವರ ಬೇಟೆ ಮತ್ತು ಮನುಷ್ಯರ ನಡುವಿನ ಸಂಬಂಧಗಳು ಮುಖ್ಯವಾಗಿ ಎದ್ದು ಕಾಣುತ್ತವೆ. ಒಂದಿಲ್ಲೊಂದು ಬಗೆಯಲ್ಲಿ ಯಾವಾಗಲೂ ಕ್ರಿಯಾಶೀಲವಾಗಿರುವ ಇವರ ಮನಸ್ಸು ಸದಾ ಹೊಸದನ್ನೇ ಕಟ್ಟುತ್ತಿರುತ್ತದೆ. ಅಲ್ಲದೇ ಅವರ ಸಾಹಿತ್ಯ, ಭಾಷೆಗಳ, ಅನುಭವಗಳ ಮಿಶ್ರಣವಾಗಿದೆ. ಇವರ ಸಮಗ್ರ ಸಾಹಿತ್ಯದ

ಅಧ್ಯಯನದಿಂದ ಭಾಷಾಶಾಸ್ತ್ರ ವಿಭಾಗದಲ್ಲಿ ಒಂದು ಭಾಷಿಕ ಅಧ್ಯಯನವೋ ಅಥವಾ ಒಂದು ಸಂಶೋಧನೆಯೋ ಸಾಧ್ಯವಿದೆ ಎಂದರೆ ತಪ್ಪಾಗದು.

ಈ ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಗಮನಿಸಿದಾಗ ನಮಗೆ ಮುಖ್ಯವಾಗಿ ತಿಳಿದುಬರುವ ಅಂಶ ಅಂತ್ಯತ ಪ್ರಮುಖವಾದದ್ದು, ಕರ್ನಾಟಕಕ್ಕೆ ಸಂಬಂಧಿಸಿದಂತೆ ಉತ್ತರ ಕರ್ನಾಟಕದಲ್ಲಿ ಪಾರ್ಧಿಗಳೂ, ದಕ್ಷಿಣ ಕರ್ನಾಟಕದಲ್ಲಿ ಹಕ್ಕಿಪಿಕ್ಕಿಯರು ಅಂದರೆ ವಾಗರಿಗಳು ಕಂಡುಬರುತ್ತಾರೆ. ಇವರುಗಳಲ್ಲಿಯ ಭಾಷೆಯೊಂದಿಗೆ ಸಾಮಿಪ್ಯವಿದೆ. ಭಾಷಾ ಸಾಮಿಪ್ಯವಿರುವ ಅಲೆಮಾರಿಗಳಲ್ಲಿ ಕೆಲವರನ್ನು ಈ ಕೆಳಕಂಡಂತೆ ಗುರುತಿಸಬಹುದು.

೧. ಜೋಗಿ ೨. ಬೈಲುಕಮ್ಮಾರ ೩. ಲಂಬಾಣಿ ೪. ಮಾರ್ವಾಡಿ ೫. ಡೊಂಗ್ರಿಗರಾಸಿಯ ೬. ಪಾರ್ಧಿ ೭. ವಾಗ್ರಿ ೮.ಗೋಸಂಗಿ ಈ ಮೇಲಿನ ಎಲ್ಲ ಸಮುದಾಯದ ಮೂಲ ಒಂದೇ ಆಗಿರುವುದರಿಂದ ಮಾತೃಭಾಷೆಗಳಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಸಾಮ್ಯತೆಗಳು ಕಾಣಸಿಗುತ್ತವೆ.

# ೯

# ಪ್ರದರ್ಶಕ ಕಲೆಗಳು

## ಹಚ್ಚೆ ಹಾಕಿಸಿಕೊಳ್ಳುವಿಕೆ

"ಮನುಷ್ಯ ಬರುವಾಗ (ಹುಟ್ಟುವಾಗ) ಬೆತ್ತಲೆ ಹೋಗುವಾಗ (ಸತ್ತಾಗ) ಬೆತ್ತಲೆ. ಆದರೆ ಬರಿ ಮೂರು ದಿನಗಳು ಮಾತ್ರ ಕತ್ತಲೇ" ಜೀವನ ಎನ್ನುವ ದಾಸರ ವಾಣಿಯಂತೆ, ಮನುಷ್ಯ ಎಷ್ಟೇ ಶ್ರೀಮಂತವಾಗಿರಲಿ ಅಥವಾ ಅವನಲ್ಲಿ ಏನೇ ಐಶ್ವರ್ಯ ಇರಲಿ ಅವನು ಸತ್ತಾಗ ತನ್ನ ಜೊತೆಗೆ ಏನನ್ನೂ ತೆಗೆದುಕೊಂಡು ಹೋಗಲು ಸಾಧ್ಯವಿಲ್ಲ. ಆದರೆ ಪ್ರತಿಯೊಬ್ಬ ವ್ಯಕ್ತಿ ಸತ್ತಾಗ ತನ್ನ ಜೊತೆಯೇ ತೆಗೆದುಕೊಂಡು ಹೋಗುವ ಒಂದು ವಸ್ತು ಇದೆ. ಅದುವೇ ಹಚ್ಚೆ.

ಸಾಮಾನ್ಯವಾಗಿ ಹಕ್ಕಿಪಿಕ್ಕಿ ಹೆಣ್ಣು ಮಕ್ಕಳು ಅಷ್ಟೇ ಅಲ್ಲದೇ ಎಲ್ಲಾ ಸಮಾಜದ ಸ್ತ್ರೀಯರು ತಮ್ಮ ಎರಡೂ ಹುಬ್ಬಿನ ನಡುವೆ ನಾಮದಂತೆಯೇ ಅಥವಾ ಒಂದು ಚಿಕ್ಕ ಚುಕ್ಕೆಯಂತೆಯೇ ಒಂದು ಹಚ್ಚೆಯನ್ನು ಹಾಕಿಸಿಕೊಳ್ಳುತ್ತಾರೆ. ಇವರ ಭಾಷೆಯಲ್ಲಿ ಹಚ್ಚೆಗೆ 'ಗೊಂಡನ್' ಎಂದು ಕರೆಯುತ್ತಾರೆ. ಕೆಲವರಿಗೆ ಹಣೆ, ಕೆಲವರಿಗೆ ಕಣ್ಣಿನ ಪಕ್ಕದಲ್ಲಿ, ಕೆಲವರಿಗೆ ಗಲ್ಲದ ಮೇಲೆ, ಇನ್ನೂ ಕೆಲವರಿಗೆ ಕೈ ಅಥವಾ ಕಾಲಿನ ಮೇಲೆ ಹಚ್ಚೆಯನ್ನು ಹಾಕಿಸಿಕೊಳ್ಳುತ್ತಾರೆ. ಈ ಹಚ್ಚೆಗಳನ್ನು ಬಟ್ಟೆಯಿಂದ ಮರೆ ಮಾಚುವ ಸ್ಥಳಗಳಿಗಿಂತ ಬೇರೆಯವರಿಗೆ ಕಾಣುವಂಥಹ ಅಂಗಾಂಗಗಳಿಗೆ ಹೆಚ್ಚು ಹಾಕಿಸಿಕೊಳ್ಳುತ್ತಾರೆ.

ಕೆಲವು ಮುಗ್ಧ ಹಕ್ಕಿಪಿಕ್ಕಿಯರಂತೂ ತಾವು ಪೇಟೆಗೆ ಶಿಕಾರಿಯಿಂದ ತಂದವುಗಳನ್ನು ಅಥವಾ ಗಿಡಮೂಲಿಕೆಗಳನ್ನು ಮಾರಾಟ ಮಾಡಿ ಮನೆಗೆ ಬೇಕಾದ ಪದಾರ್ಥಗಳನ್ನು ತರಲು ಹೋದಾಗ ಅನ್ಯರು ಹಾಕಿಸಿಕೊಂಡಂತಹ ಹಚ್ಚೆಯನ್ನು ಗುರುತಿಸಿ ಇವರು ಹಿಂದುಗಳೆಂದೂ ಬಗೆಯುತ್ತಿದ್ದರಂತೆ. ಅಂಥವರ ಮನೆಯ ನೀರನ್ನೂ ಕುಡಿಯುತ್ತಿರಲಿಲ್ಲವಂತೆ. ಹಚ್ಚೆಯಲ್ಲಿ ಗಂಡಸರು ತೋಳಿನ ಮೇಲೆ, ಕೈಗಳ ಮೇಲೆ ಎದೆಯ ಮೇಲೆ ತಮಗಿಷ್ಟವಾದ ಕೃಷ್ಣ, ಹನುಮಂತ, ಗಿಡಮರ, ಬಳ್ಳಿ, ಹೆಸರುಗಳನ್ನು ಹಾಕಿಸಿ ಕೊಳ್ಳುತ್ತಾರೆ. ಗುಜರಾತ್ಕೋಗಳಲ್ಲಿ ಮದುವೆಯಾದ ಹೆಣ್ಣು ಮದರಂಗಿ ಹಚ್ಚಿಕೊಳ್ಳುವುದಿಲ್ಲ. ಬದಲಿಗೆ ಹಚ್ಚೆ ಹಾಕಿಸಿಕೊಳ್ಳುತ್ತಾಳೆ. ಹೆಂಗಸರು ಹೆಬ್ಬೆರಳು ಮತ್ತು ತೋರುಬೆರಳ ಮೇಲೆ ಅಥವಾ ಬೆರಳಿನ ಬುಡ ಮಧ್ಯದಲ್ಲಿ ಪಕ್ಷಿಯ ಕಾಲಿನ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಇದರಿಂದ ಆಕೆ ಮಾಡಿದಂಥ ಅಡುಗೆ ಉಪ್ಪುಪ್ಪಾಗದೆ

ರುಚಿಯಾಗಿ ಇರುತ್ತದೆಂದು ನಂಬುತ್ತಾರೆ. ಅಲ್ಲದೆ ಗಂಡಸರಂತೆ ತೋಳು ಕೈಗಳ ಮೇಲೆಯೂ ರಂಗೋಲಿ, ಗಿಡ ಮರ ಬಳ್ಳಿಗಳ ನಕ್ಷೆ ಹಾಕಿಸಿಕೊಳ್ಳುತ್ತಾರೆ. ಇನ್ನೂ ಗಂಡನ ಹೆಸರನ್ನು ಹೇಳಲಾರದ ಗೃಹಿಣಿಯಾದರೆ ಕೈ ಮೇಲೆ ಗಂಡನ ಹೆಸರನ್ನು ಹಾಕಿಸಿಕೊಳ್ಳುತ್ತಾರೆ. ಬಲ್ಲವರು ಓದಿಕೊಳ್ಳುತ್ತಾರೆ. ಆದರೆ ಅನಕ್ಷರಸ್ಥರು ಕೇಳಿದಾಗ ಇಂಥವಳ ಸಂಬಂಧಿ ಅಣ್ಣ, ತಮ್ಮ, ಎಂದೇ ಪರಿಚಯಿಸುತ್ತಾರೆ. ಮಗುವಿದ್ದರೆ ಈ ಆಕೆಯ ಪಾಲಿಗೆ ಪ್ರಶ್ನೆ ತಪ್ಪುತ್ತದೆ. ಈ ಕಾರಣದಿಂದಾಗಿ ಅಪ್ಪನ ಹೆಸರು ಹೇಳಲಿಕ್ಕಾದರೂ ಒಂದು ಮಗು ಇರಬೇಕು ಅನ್ನುವುದರ ಇವರ ವಾಡಿಕೆ. ಇತ್ತೀಚಿಗೆ ಈ ಕಂದಾಚಾರಗಳು ಸಡಿಲಗೊಳ್ಳುತ್ತಿವೆ. ಆದರೂ ಹಿರಿಯರು ಕೇಳಿದಾಗ ಗಂಡನ ಹೆಸರನ್ನು ಹೇಳದವರು ಹೆಚ್ಚಾಗಿದ್ದಾರೆ. ಇದರಿಂದಾಗಿ ಅವರಲ್ಲಿರುವ ಸಾಮಾಜಿಕ ಗೌರವದ ಅರಿವಾಗುತ್ತದೆ.

## ಪ್ರದರ್ಶನ ಕಲೆಗಳು

ಹಬ್ಬ ಹರಿದಿನಗಳಲ್ಲಿ ಮದುವೆಯಾದ ನಂತರ ದೇವರ ಕಾರ್ಯ ಮುಗಿದ ನಂತರ ಸಂತೋಷದ ದಿನಗಳಲ್ಲಿ ಗಂಡು ಹೆಣ್ಣು ಭೇದವಿಲ್ಲದೆ ಚಿಕ್ಕವರು ದೊಡ್ಡವರು ಎನ್ನದೆ ಎಲ್ಲಾರು ಸೇರಿ ವೃತ್ತಾಕಾರದಲ್ಲಿ ಪ್ರಾಣಿಗಳ ಚರ್ಮದಿಂದ ಮಾಡಿದ ತಮಟೆ, ತಪ್ಪಡಿ ಢೋಲ್ ಢೋಲ್ಳು ಕಂಚ್‌ನೀ ಥಾಳಿ ಕಂಚಿನ ಗಂಗಾಳ ಝಿಂಜ್ಯಾಳಿ ಕಂಸಾಳೆ ಇವುಗಳನ್ನು ತೆಗೆದುಕೊಂಡು ವೃತ್ತಾಕಾರದ ಮಧ್ಯದಲ್ಲಿ ನಿಂತು ಬಾರಿಸುತ್ತಾರೆ. ನುಡಿಸಿದ ಹೆಜ್ಜೆಗಳಿಗೆ ಹೆಜ್ಜೆಗಳನ್ನು ಹಾಕಿ ಕುಣಿದು ಕುಣಿದು ಸಂತೋಷಪಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಈ ಕಲೆಗಳು ಅಥವಾ ಹೆಜ್ಜೆಗಳು ಅಳವಿನ ಅಂಚಿನಲ್ಲಿ ಇರುವುದರಿಂದ ಇದನ್ನೇ ಕಲೆಯಾಗಿ ಉಳಿಸಿಕೊಳ್ಳಲು ಬಳ್ಳಾರಿ ಜಿಲ್ಲಾ ಕನ್ನಡ ಸಂಸ್ಕೃತಿ ಇಲಾಖೆ ಒಂದು ಕಲಾ ತಂಡವನ್ನು ರಚಿಸಿಕೊಳ್ಳಲು ಹೇಳಿ ಆ ತಂಡಕ್ಕೆ ಸರ್ಕಾರದ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅನುಕೂಲ ಮಾಡಿಕೊಟ್ಟಿದೆ. ಹೀಗಾಗಿ ಉದಯ ತಾಷ ರಾಮಡೋಲು ಮತ್ತು ಗಂಗಾಭವಾನಿ ತಾಷಾ ರಾಮಡೋಲು ಇಂತಹ ತಂಡಗಳು ಇತ್ತೀಚಿಗೆ ತಮ್ಮ ಕಲಾವಂತಿಕೆಯ ಪ್ರದರ್ಶನಗಳನ್ನು ನೀಡುತ್ತಿವೆ. ಈ ಕಲೆಯನ್ನು ಅಳಿಯ ಬಾರದೆಂಬ ಭಾವನೆ ಸರ್ಕಾರಕ್ಕೂ ಸಹ ಇದೆ.

ಬಳಸುವ ವಾದ್ಯಗಳು

| ಕನ್ನಡ | ವಾಗ್ರಿ |
|---|---|
| ೧. ತಪ್ಪಡಿ | ೧. ಹಲಜಿ |
| ೨. ದೊಡ್ಡ ಢೋಲ್ಳು | ೨. ಭಾರಿ ಢೋಲ್ |
| ೩. ಕಂಚಿನ ಗಂಗಾಳ | ೩. ಕಂಚನಿ ಥಾಳಿ |
| ೪. ಗೆಜ್ಜೆಗಳು | ೪. ಗುಘ್ರಾರ |
| ೫. ಕಂಸಾಳೆಗಳು | ೫. ಝಿಂಜ್ಯಾಳಿ |

ಇವುಗಳನ್ನು ಕುಣಿತದ ಸಂದರ್ಭಗಳಲ್ಲಿ ಬಳಸುವರು. ಜೊತೆಗೆ ಹಲವೊಮ್ಮೆ ಮೃದಂಗ, ಡೆಚ್ಕು, ಕಹಾಳಿ, ಕೊಳಲು, ಮಡಕೆ, ತಾಳ ದಮ್ಮಡಿ ಇತ್ಯಾದಿಗಳನ್ನು ಬಳಸುವರು.

ಕ್ರೀಡೆಗಳು

ಹಕ್ಕಿಪಿಕ್ಕಿಯರ ಕ್ರೀಡೆಗಳು ಬಹುವಾಗಿ ಬೇಟೆಗೆ ಸಂಬಂಧಿಸಿರುವುದರ ಜೊತೆಗೆ ವ್ಯಾಪಾರಕ್ಕೂ ಸಂಬಂಧಿಸಿರುವುದೇ ಆಗಿದೆ. ಕ್ರೀಡೆ ಎಂಬುದು ಪ್ರತಿಯೊಬ್ಬ ವ್ಯಕ್ತಿಗೂ ಎಷ್ಟು ಅವಶ್ಯಕವೆಂದರೆ ಕ್ರೀಡೆ ಎಂಬುದು ಮನುಷ್ಯ ಜೀವನದ ಅವಿಭಾಜ್ಯ ಅಂಗವಾಗಿದೆ. ಬೇರೆ ಸಮುದಾಯಗಳಿಗೆ ತಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳಲು ಹಾಗೂ ಮಾಡಿದ ಊಟ ಕರಗಿಸಿಕೊಳ್ಳಲು ಕ್ರೀಡೆಗಳು ಅವಶ್ಯಕವಾದರೆ, ಈ ಹಕ್ಕಿಪಿಕ್ಕಿ ಬುಡಕಟ್ಟಿಗೆ ಖಾಲಿ ಇದ್ದ ತಮ್ಮ ಹೊಟ್ಟೆ ತುಂಬಿಸಿಕೊಳ್ಳಲು ಕ್ರೀಡೆಗಳು ಅತ್ಯವಶ್ಯಕವಾಗಿವೆ.

ಹಕ್ಕಿಪಿಕ್ಕಿಯರು ಆಡುವ ಕ್ರೀಡೆಗಳು ಒಂದಿಲ್ಲೊಂದು ಕಾರಣಕ್ಕಾಗಿ ಚಿಕ್ಕಮಕ್ಕಳು ಸಹ ಬೇಟೆಗಾಗಿ ಸಿದ್ಧವಾಗುವ ತರಬೇತಿಗಳ ರೀತಿಯಲ್ಲಿಯೇ ಇರುತ್ತವೆ. ಇವರ ಹೆಚ್ಚಿನ ಕ್ರೀಡೆಗಳು ಪ್ರಾಣಿಗಳ ಬೇಟೆಗೆ ಸಂಬಂಧಿಸಿದವುಗಳೇ ಆಗಿವೆ. ಬೇಟೆ ಮತ್ತು ವ್ಯಾಪಾರ ಜೀವನವನ್ನು ಹೊರತುಪಡಿಸಿದರೆ, ಹಕ್ಕಿಪಿಕ್ಕಿಯರು ತಮ್ಮ ಬದುಕಿನ ಬಹುಭಾಗವನ್ನು ಇಂಥ ಕ್ರೀಡೆಗಳಲ್ಲಿಯೇ ಕಳೆಯುತ್ತಾರೆ. ಈ ಕ್ರೀಡೆಗಳಲ್ಲಿ ಕೇವಲ ಪುರುಷರಷ್ಟೇ ಪಾಲ್ಗೊಳ್ಳುತ್ತಾರೆ. ಆಗಾಗ್ಗೆ ಕೆಲವು ವಯಸ್ಸಾದ ಮುದುಕರೂ ಈ ಕ್ರೀಡೆಗಳಲ್ಲಿ ಭಾಗಿಯಾಗಿರುವುದು ಕಂಡುಬರುತ್ತದೆ. ಹೀಗಾಗಿ ಇವರಾಡುವ ಕ್ರೀಡೆಗಳಲ್ಲಿ ವಯಸ್ಸಿಗಾಗಲಿ ಅಥವಾ ಲಿಂಗಕ್ಕಾಗಲಿ ಯಾವುದೇ ರೀತಿಯ ತಾರತಮ್ಯಗಳಿಲ್ಲ. ಇವರಾಡುವ ಕೆಲವು ಕ್ರೀಡೆಗಳು ತಾವು ಬದುಕುತ್ತಿರುವ ಪ್ರಾದೇಶಿಕ ವೈಶಿಷ್ಟ್ಯವನ್ನು ಪಡೆದಿರುತ್ತವೆ. ಇನ್ನೂ ಕೆಲವು ಕ್ರೀಡೆಗಳು ಕೇವಲ ಹಕ್ಕಿಪಿಕ್ಕಿ ಬುಡಕಟ್ಟಿನವರಿಗಷ್ಟೇ ಸೀಮಿತವಾಗಿದ್ದು, ಅವು ಬೇರೆ ಸಮುದಾಯಗಳಲ್ಲಿ ಕಂಡು ಬರುವುದಿಲ್ಲ. ಇವರಾಡುವ ಅನೇಕ ಕ್ರೀಡೆಗಳಲ್ಲಿ ಕೆಲವೇ ಕೆಲವನ್ನು ಈ ಕೆಳಗಿನಂತೆ ವಿವರಿಸಬಹುದಾಗಿದೆ.

**೧. ಹುಂದ್ರಾ ಹುಂದಿ ಆಟ**

ಹಕ್ಕಿಪಿಕ್ಕಿಯರ ಭಾಷೆಯಲ್ಲಿ ಹುಂದ್ರಾ ಹುಂದಿ ಆಟವೆಂದರೆ, ಇಲಿ ಮತ್ತು ಬೆಕ್ಕಿನ ಆಟ ಎಂದರ್ಥ. ಈ ಆಟಕ್ಕೆ ಆಟಗಾರರ ಮಿತಿಯಿಲ್ಲ. ಎಷ್ಟು ಜನಬೇಕಾದರೂ ಈ ಆಟದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬಹುದಾಗಿದೆ. ಈ ಆಟವು ಮೊದಲಿಗೆ ಕೇವಲ ಮೂವರಿಂದ ಆರಂಭವಾಗುತ್ತದೆ. ಆ ಮೂರು ಜನ ಒಬ್ಬರಿಗೊಬ್ಬರು ಕೈಮುಚ್ಚಿ ತಮ್ಮ ತಮ್ಮ ಹಸ್ತಗಳನ್ನು ಉಲ್ಟಾಪಲ್ಟ ಹಾಕಬೇಕಾಗುತ್ತದೆ. ಉಳಿದವರೆಲ್ಲಾ ಹುಂದ್ರಾ(ಇಲಿ) ಆಗಿರುತ್ತಾರೆ. ಈ ಆಟದಲ್ಲಿಯ ಬೆಕ್ಕು ಇಲಿಯಾಗಿ ಪರಿವರ್ತನೆ ಹೊಂದಬೇಕಾದರೆ ಆ ಬೆಕ್ಕು ಒಂದು ಇಲಿಯನ್ನು ಮುಟ್ಟಲೇಬೇಕಾಗುತ್ತದೆ.

ಸುಮಾರು ಮೂರು ಅಂಗುಲದ ಸರ್ಕಲ್‌ನ್ನು ಕೋಲಿನಿಂದ ಹಾಕಿ, ಆ ವೃತ್ತದಲ್ಲಿಯೇ ಆ ಕೋಲನ್ನು ಹಾಕುತ್ತಾರೆ. ಆ ಕೋಲು ಅರ್ಧಭಾಗ ವೃತ್ತದ ಬಳಿಗೂ ಇನ್ನರ್ಧಭಾಗ ವೃತ್ತದ ಹೊರಗು ಇರುತ್ತದೆ. ಇಲಿಗಳು ವೃತ್ತದ ಆಚೆ ಈಚೆ ಇರುವ ಮರಗಳ ಮೇಲೆ ಕುಳಿತಿರುತ್ತವೆ. ಆಗ ವೃತ್ತದ ಬಳಿನಿಂತ ಇಲಿಯು ಈ ಕೆಳಗಿನಂತೆ ಹೇಳುತ್ತದೆ.

ಆವ್‌ತೊ ಆವತೊ ದಿನ್
ಜಾತಿ ಜಾತಿ ರೇಣ್

ಚೆನ್ನಗಿರಿನಾ ಪಾರ್ ಎನ್ನುತ್ತದೆ.

ಹೀಗೆಂದರೆ,

ಬರ‍್ತಾ ಬರ‍್ತಾ ದಿವಸ

ಹೋಗ್ತಾ ಹೋಗ್ತಾ ರಾತ್ರಿ

ಚೆನ್ನಾಗಿರಿ ಆಚೆಗೆ ಎಂದರ್ಥ.

ಎಂದು ಒದರುತ್ತ ತನ್ನ ಎಡಗಾಲನ್ನು ಎತ್ತಿ ಅದರ ಅಡಿಯಿಂದ ಆ ಕೋಲನ್ನು ಬೀಸಿ ಎಸೆಯುತ್ತದೆ. ಎಸೆದ ಆ ಕೋಲನ್ನು ಬೆಕ್ಕು ಕಾಯುವದಲ್ಲದೇ ಆ ಕೋಲನ್ನು ಬೇರೆ ಇಲಿಗಳು ಮುಟ್ಟದಂತೆಯೂ ಕಾಯಬೇಕು. ಆ ಕೋಲನ್ನು ಎಸೆದ ಇಲಿಯೂ ದೂರ ಹೋಗಿರುತ್ತದೆ. ಆ ಕಾರಣಕ್ಕಾಗಿ ಬೆಕ್ಕು ಕೋಲನ್ನು ಬಹಳಷ್ಟು ಎಚ್ಚರದಿಂದ ಕಾಯಬೇಕಾ ಗುತ್ತದೆ. ಈ ರೀತಿಯಾಗಿ ಕಾಯುವಾಗ ಬೆಕ್ಕು ಮೂರು ಸಾರಿ ಸೋತರೆ ಇಲಿಗಳು ಬೆಕ್ಕನ್ನು ಕುರಿತು 'ಅನ್ ಖಾಸ್‌ಕೀಗೂ ಖಾಸ್' ಎಂದು ಅಪಹೇಳನ ಮಾಡುತ್ತವೆ. ಅಂದರೆ ನೀನು ಅನ್ನ ತಿನ್ನುತ್ತೀಯೋ? ಅಥವಾ ಹೆಂಡಿ ತಿನ್ನುತ್ತಿಯೋ? ಎಂದರ್ಥ. ಆಗ ಅನ್ನ ತಿನ್ನುವ ಕೈಯನ್ನು ಬಲಗಾಲಿಗೆ ಗಟ್ಟಿಯಾಗಿ ಕಟ್ಟುತ್ತಾರೆ. ಒಂದು ವೇಳೆ ಅದು 'ಗೂಖಾಸ್' ಎಂದರೆ, ಎಡಗೈಯನ್ನು ಎಡಗಾಲಿಗೆ ಕಟ್ಟುತ್ತಾರೆ. ಆಗ ಒಂದು ಇಲಿ ಕೋಲನ್ನು ಎಸೆಯುತ್ತದೆ. ಬೆಕ್ಕು ಕುಂಟುತ್ತಾ ಹೋಗಿ ಕೋಲನ್ನು ತರಬೇಕಾಗುತ್ತದೆ. ಇಂತಹ ಸಮಯದಲ್ಲಿ ಇಲಿಯೇ ನಾದರೂ ಬೆಕ್ಕಾದರೆ ಅದೂ ಕೂಡಾ ಮೂರು ಸಾರಿ ಓಡಿ ಸೋತನಂತರ ಕಾಲು ಕಟ್ಟಿಸಿಕೊಳ್ಳುವ ಸ್ಥಿತಿಗೆ ಬರುತ್ತದೆ.

ಈ ಹುಂದ್ರಾ ಹುಂದಿ ಆಟವು ಕೇವಲ ಮನೋರಂಜನೆಗೆ ಮಾತ್ರವಾಗದೆ ಆಟದಿಂದ ತಮ್ಮ ಬೇಟೆಯ ಗುರಿಯನ್ನು ಸಾಧಿಸಿಕೊಳ್ಳಲು ಅನುಕೂಲವಾಗುತ್ತದೆ.

೨. ಮೀಠ್ ಪಾಡಾನು

ಈ ಆಟಕ್ಕೆ ಹಕ್ಕಿಪಿಕ್ಕಿಯರು 'ಬಿಳೀ' ಆಟವೆಂತಲೂ ಕರೆಯುತ್ತಾರೆ. ಬಹುತೇಕ ಹಳ್ಳಿಗಳಲ್ಲಿ ಆಡುವ ನೀಳಂಪಟ್ಟಿಯ ಆಟದ ರೀತಿಯಲ್ಲೇ ಈ ಮೀಠ್‌ಪಾಡಿ ಆಟವಿರುತ್ತದೆ. ಹಕ್ಕಿಪಿಕ್ಕಿಯರ ಭಾಷೆಯಲ್ಲಿ ಮೀಟ್ ಎಂದರೆ 'ಉಪ್ಪು' ಎಂದರ್ಥ. ಮೊದಲನೆಯವನಿಂದ ಆರಂಭಗೊಂಡು ಹತ್ತು ಜನರಿಂದ ಮುಟ್ಟಿಸಿಕೊಳ್ಳದಂತೆ ತಪ್ಪಿಸಿಕೊಂಡು ಆಚೆ ಹೋಗಿ (ಉಪ್ಪು) ಮಣ್ಣನ್ನು (ಮೀಠ್) ಕೈಯಲ್ಲಿ ಹಿಡಿದು ಪುನಃ ಹೊರಗೆ ಒಬ್ಬ ಬಂದರೆ ಅಲ್ಲಿಗೆ ಒಂದು ಆಟ ಮುಗಿದಂತೆ. ಹತ್ತು ಜನ ಕಾವಲುಗಾರರಾಗಿ ಇನ್ನೊಂದು ಹತ್ತು ಜನ ಎದುರಾಗಿ ಆಡುವ ಈ ಆಟ ಹೆಚ್ಚು ಜನರನ್ನು ಒಳಗೊಳ್ಳುವದಷ್ಟೇ ಅಲ್ಲದೆ ಬಹಳಷ್ಟು ಜನರನ್ನು ಆಕರ್ಷಿಸುತ್ತದೆ. ಹತ್ತು ಜನರ ಪರವಾಗಿ ಒಬ್ಬ ಉಪ್ಪು ತೆಗೆದುಕೊಂಡು ಹೊರಗೆ ಬಂದರೂ ಅಲ್ಲಿಗೆ ಒಂದು ಆಟ ಮುಗಿದಂತೆ.

ಈ ಆಟದಲ್ಲಿ ಹೊರಭಾಗದ ಪಟ್ಟಿಗಳನ್ನು ಹೊರತುಪಡಿಸಿ ಕಾವಲುಗಾರರು ಅಡ್ಡ ಮತ್ತು ನಡುಪಟ್ಟಿಗಳಲ್ಲಿ ಅಡ್ಡಾಡಬಹುದು. ಅವರು ಕೊರೆದ ಪಟ್ಟಿಗಳ ಮೇಲೆಯೇ ಅಡ್ಡಾಡಬೇಕೇ ಹೊರತು ಮನೆಯ ಒಳಗೆ ನುಗ್ಗುವಂತಿಲ್ಲ. ಉಪ್ಪು ತರುವವನು ಹೊರ ಪಟ್ಟಿಯನ್ನು ತುಳಿಯುವಂತಿಲ್ಲ. ಹಾಗೇನಾದರೂ ಅವನು ಹೊರ ಪಟ್ಟಿಯನ್ನು ತುಳಿದರೆ ಅವನು

ಸೋತಂತೆಯೇ ಸರಿ. ಅಡ್ಡ ಮತ್ತು ನಡ ಪಟ್ಟಿಗಳ ಮೇಲೆ ಮತ್ತು ಎಡಬಲದ ಯಾವುದೇ ಭಾಗದಿಂದ ಒಬ್ಬೊಬ್ಬರನ್ನು ದಾಟುತ್ತಾ ಸಾಗಬೇಕಾಗುತ್ತದೆ. ಕಾವಲುಗಾರರು ಯಾರಾದರೂ ಪಟ್ಟಿಯ ಮೇಲಿದ್ದೇ ಮುಟ್ಟಿದರೆಂದರೆ, ಉಪ್ಪಿನ ಮನುಷ್ಯ ಸೋಲುತ್ತಾನೆ. ಉಪ್ಪು ತರುವವನು ಸುಮ್ಮನೆ ನಿಲ್ಲದೆ ಮುನ್ನುಗ್ಗುತ್ತಲೇ ಇರಬೇಕು. ಒಬ್ಬ ಸೋತರೆ ಆಗ ಮತ್ತೊಬ್ಬನ ಸರದಿ ಬರುತ್ತದೆ. ಇದು ಎದುರಾಳಿಗಳು ಹತ್ತು ಜನ ಮುಗಿಯುವರೆಗೂ ಈ ಆಟ ಹಾಗೆಯೇ ಮುಂದುವರೆಯುತ್ತದೆ.

೩. ಮಷಿನ್ ಆಟ

ಈ ಆಟವನ್ನು ಕೇವಲ ಯುವಕರು ಮಾತ್ರ ಆಡುತ್ತಾರೆ. ಈ ಆಟಕ್ಕೆ ಏಳರಿಂದ ಎಂಟು ಜನರ ಒಂದು ತಂಡ ಬೇಕಾಗಿದ್ದು ಇವರೆಲ್ಲಾ ಸೇರಿಕೊಂಡು ಗಡಿಯಾರದಮತೆ (Clock Wise Direction) ನಲ್ಲಿ ಕಲ್ಲನ್ನು ಅರೆಯುವದಾಗಿದೆ. ಜರಡಿಯಂತೆ ಓಡಾಡುವುದು, ಶೇಕ್ ಆಗುವುದು, ನಿಂತಲ್ಲೇ ಯಂತ್ರದಂತೆ ಅತ್ತಿತ್ತ ಸುತ್ತುವಂತೆ ಅಭಿನಯಿಸುತ್ತಾರೆ. ಕೊನೆಗೆ ಸುತ್ತುವ ವ್ಯಕ್ತಿಯು ಒಮ್ಮೆ ಬಾಯನ್ನು ಮುಚ್ಚಿದರೆ ಮತ್ತೊಮ್ಮೆ ತನ್ನ ಹಂಡುಗಳ ಮೇಲೆ ಕೈಯಿಟ್ಟು ಒಂದು ರೀತಿಯ ಮನೋರಂಜನೆಯನ್ನು ನೀಡುತ್ತಿರುತ್ತಾನೆ. ಅಷ್ಟೇ ಅಲ್ಲದೇ ತನ್ನ ಜೊತೆ ಇನ್ನುಳಿದ ೭-೮ ಜನರು ಯಂತ್ರದಂತೆಯೇ ತಿರುಗುತ್ತಾರೆ. ಆಗ ಅವರಿಗೂ ಮನರಂಜನೆ ಸಿಗುತ್ತದೆ.

ಮುಚ್ಚೊ ಆಟ : ಈ ಆಟದಲ್ಲಿ ಒಟ್ಟು ಎರಡು ಗುಂಪುಗಳಿದ್ದು ಒಂದು ಗುಂಪು ಒಬ್ಬನನ್ನು ಬಟ್ಟೆಯಿಂದ ಮುಚ್ಚಿರುತ್ತಾರೆ. ಇನ್ನೊಂದು ಗುಂಪು ಕಳ್ಳರಾಗಿರುವವರ ಗುಂಪು ಆಗಿರುತ್ತದೆ. ಕಳ್ಳರಾಗಿರುವ ಈ ಗುಂಪಿನವರು ಬಟ್ಟೆಯಲ್ಲಿ ಮುಚ್ಚಿರುವ ವ್ಯಕ್ತಿಯನ್ನು ಗುರ್ತಿಸಬೇಕಾಗುತ್ತದೆ. ಹಾಗೆ ಬಂದ ಕಳ್ಳರ ಗುಂಪಿನವರಿಗೆ ಕಣ್ಣು ಕಟ್ಟಿ ಕಳಿಸುತ್ತಾರೆ. ಸರಿಯಾದ ಗುರುತು ಹಿಡಿದು 'ಇಂಥವರನ್ನೇ ಮುಚ್ಚಿದ್ದೀರಿ' ಎಂದು ಹೇಳಿದರೆ ಆ ವ್ಯಕ್ತಿಯನ್ನು ಅವನು ಬಂದಿದ್ದ ಆಚೆಗಿನ ಗೆರೆಯವರೆಗೆ ಮುಚ್ಚಿಸಿಕೊಂಡಿದ್ದ ವ್ಯಕ್ತಿ ಕೂಸು ಮಾಡಿ ಹೊತ್ತುಕೊಂಡು ಹೋಗಬೇಕಾಗುತ್ತದೆ. ಬದಲಿಗೆ ಬೇರೆಯವರ ಹೆಸರನ್ನು ಹೇಳಿಬಿಟ್ಟರೆ, ಹುಡುಕಲು ಬಂದಿದ್ದ ವ್ಯಕ್ತಿಯ ಈ ಗುಂಪಿನವರಲ್ಲೊಬ್ಬರನ್ನು ಗೆರೆಯವರೆಗೆ ಹೊತ್ತುಕೊಂಡು ಹೋಗಬೇಕಾಗುತ್ತದೆ. ಈ ಆಟದಲ್ಲಿ ಒಬ್ಬ ಬಟ್ಟೆಯಿಂದ ಮುಚ್ಚಲ್ಪಟ್ಟರೆ ಉಳಿದವರೆಲ್ಲಾ ಒಟ್ಟಿಗೆ ಒಬ್ಬರಿಗೊಬ್ಬರು ತಬ್ಬಿ ಕೊಂಡಿರುವುದರಿಂದ ಯಾರನ್ನು ಮುಚ್ಚಿದ್ದಾರೆಂಬುದನ್ನು ಗುರ್ತಿಸುವುದು ಸ್ವಲ್ಪ ಕಷ್ಟದ ವಿಚಾರವೇ ಆಗಿರುತ್ತದೆ. ಈ ತರಹದ ಕಷ್ಟವನ್ನು ಬಗೆಹರಿಸುವುದೇ ಈ ಮುಚ್ಚೋ ಆಟದ ಮುಖ್ಯ ಉದ್ದೇಶವಾಗಿದೆ.

ಕುಂಟ ಬಿಲ್ಲೆ ಆಟ : ಈ ಕುಂಟಬಿಲ್ಲೆ ಆಟವನ್ನು ಬಹುತೇಕ ಕಡೆ ಹೆಣ್ಣು ಮಕ್ಕಳು ಮಾತ್ರ ಆಡೋದನ್ನೇ ನೋಡುತ್ತೇವೆ. ಆದರೆ ಹಕ್ಕಿಪಿಕ್ಕಿ ಬುಡಕಟ್ಟುಗಳಲ್ಲಿ ಹೆಣ್ಣು ಮತ್ತು ಗಂಡುಗಳಿಬ್ಬರೂ ಸಮ ಭಾಗಿಯಾಗಿ ಆಡುವುದೇ ಈ ಆಟದ ವೈಶಿಷ್ಟ್ಯವಾಗಿದೆ. ಬಿಲ್ಲೆ ಯೊಂದನ್ನು ತಾವು ಕೊರೆದುಕೊಂಡಿರುವ ಚೌಕಾಕಾರದ ಮನೆಯೊಳಗೆ ಹಾಕಿ ಒಂಟಿ ಕಾಲಿನಲ್ಲಿ ದೂಡುತ್ತಾ ಕುಂಟುತ್ತಾ ಒಂದೊಂದೆ ಮನೆಗೆ ಎಸೆದು ಅದನ್ನು ಕಾಲಿನಿಂದ ತಳ್ಳುತ್ತಾರೆ. ಎಡಗೈಲಿ

ಬಿಲ್ಲೆ ಹಿಡಿದು ಕುಂಟುತ್ತಾ ದಾಟುತ್ತಾರೆ. ತಲೆಯ ಮೇಲೆ ಬಿಲ್ಲೆಯನ್ನಿಟ್ಟುಕೊಂಡು ಕುಂಟುತ್ತಾರೆ. ಅಲ್ಲದೇ ಒಂದೇ ಕಾಲನ್ನು ನೆಲದಿಂದ ಸ್ವಲ್ಪ ಮೇಲೆತ್ತಿ ಅದರ ಮೇಲೆ ಬಿಲ್ಲೆಯನ್ನಿಟ್ಟು ಇನ್ನೊಂದು ಕಾಲಿನಿಂದ ಕುಂಟುತ್ತಾ ಆಟವಾಡುತ್ತಾರೆ. ಮಡಿಕೆ ತಳದ ಚೂರು ಇಲ್ಲವೇ ಮಣ್ಣಿನ ಹೆಂಚಿನ ತುಂಡಿನಿಂದ ಬಿಲ್ಲೆಯನ್ನು ದುಂಡಗೆ ಇಲ್ಲವೇ ಚೌಕಾಕಾರವಾಗಿ ಕಲ್ಲಿಗೆ ಉಜ್ಜಿ ತಯಾರು ಮಾಡಿಕೊಂಡಿರುತ್ತಾರೆ. ಕೆಲವು ಸಾರಿ ತೆಂಗಿನ ಚಿಪ್ಪಿನ ತುಂಡುಗಳನ್ನು ಬಳಸುತ್ತಾರೆ. ಈ ಆಟವನ್ನು ಆಡುವಾಗ

ಸೀಬೆ ಹಕ್ಕಿ ಸಾಲೂರ
ಗೋದಿ ರೊಟ್ಟಿ ಬಾಲೂರ
ಎಂಬ ಹಾಡನ್ನು ಹೇಳುತ್ತಾರೆ.

**ಕಪ್ಪೆ ಆಟ :** ಈ ಆಟದಲ್ಲಿ ವೃತ್ತಕ್ಕೆ ಬಹಳಷ್ಟು ಮಹತ್ವ ಇದ್ದು, ಈ ಆಟದ ಆಟಗಾರರೆಲ್ಲಾ ವೃತ್ತಾಕಾರದಲ್ಲಿ ಕುಳಿತಿರುತ್ತಾರೆ. ಈ ವೃತ್ತದೊಳಗೆ ಒಬ್ಬ ಕುಳಿತುಕೊಳ್ಳುವಷ್ಟು ಮಾತ್ರ ಪುನಃ ಒಂದು ಚಿಕ್ಕ ವೃತ್ತವನ್ನು ಕೊರೆದುಕೊಳ್ಳಬೇಕು. ಈಗ ಒಬ್ಬರ ವೃತ್ತದಿಂದ ಮತ್ತೊಬ್ಬರ ವೃತ್ತಕ್ಕೆ ಒಮ್ಮೆಗೆ ಕಪ್ಪೆಯ ರೀತಿಯಲ್ಲಿ ಕುಪ್ಪಳಿಸುವಷ್ಟು ಅಂತರವಿರಬೇಕು. ಆ ವೃತ್ತಗಳ ಒಳಗೆ ಒಬ್ಬ ಕಳ್ಳ ಮತ್ತು ಒಬ್ಬ ನಿರ್ದೇಶಕ (ಪೋಲೀಸ) ಇರುತ್ತಾರೆ. ವೃತ್ತದಲ್ಲಿ ಕುಳಿತು ಇವರು ಯಾರೂ ಸುಮ್ಮನೆ ಕುಳಿತಿರುವುದಿಲ್ಲ. ಇವರು ಆಟ ಮುಗಿಯುವರೆಗೆ ಕುಪ್ಪಳಿಸುತ್ತಲೇ ಇರಬೇಕಾಗುತ್ತದೆ. ಆಗ ಕಳ್ಳನಾದವನು ಯಾರ ವೃತ್ತ ಖಾಲಿ ಇರುತ್ತದೆಯೋ ಆ ವೃತ್ತದೊಳಗೆ ಕುಳಿತುಕೊಳ್ಳುತ್ತಾನೆ. ಹಾಗೆ ಕುಪ್ಪಳಿಸುವಾಗ ಯಾರು ಸೋಲುತ್ತಾರೋ ಅವನೇ ಕಳಗಾಗುತ್ತಾನೆ. ಈ ಕಪ್ಪೆ ಆಟದಲ್ಲಿ ಜಗಳವೇನಾದರೂ ಆದರೆ ಅದನ್ನು ತೀರ್ಮಾನಿಸಲು ನಿರ್ದೇಶಕನೊಬ್ಬ ಇರುತ್ತಾನೆ. ಈ ನಿರ್ದೇಶಕನೇ ಈ ಆಟದ 'ರೆಫಿ' ಆಗಿರುತ್ತಾನೆ.

**'ಎಷ್ಟೆಷ್ಟ ಎಷ್ಟು' :** ಎಂಬ ಆಟ ಈ ಆಟಕ್ಕೆ ದುಂಡಾಗಿ ತಿರುಗುವ ಆಟವೆಂತಲೂ ಹೇಳಬಹುದಾಗಿದೆ. ಈ ಆಟದಲ್ಲಿ ಒಬ್ಬನನ್ನು ಕಳ್ಳನನ್ನಾಗಿ ಮಾಡಿಕೊಂಡು ದುಂಡಾಗಿ ಕೈ ಕೈ ಹಿಡಿದು ಸುತ್ತುತ್ತಿರುತ್ತಾರೆ. ಮಧ್ಯದಲ್ಲಿರುವ ಕಳ್ಳ ಎಷ್ಟು ಬೇಕು? ಎಷ್ಟು ಅಥವಾ ಎಷ್ಟಷ್ಟ ಎಷ್ಟು ಎಂದು ಕೇಳುತ್ತಾನೆ. ಆಗ ಸುತ್ತುತ್ತಿರುವವರು 'ನಿಮಗೆಷ್ಟು ಬೇಕು' ಅಥವಾ 'ನೀವಂದಷ್ಟು' ಎಂದು ಹೇಳಿ ತಿರುಗುತ್ತಿರುತ್ತಾರೆ. ಆಗ ಕಳ್ಳನಾದವನು 'ಮೂರು' ಎಂದ ಕೂಡಲೇ ಸುತ್ತುತ್ತಿರುವವರೆಲ್ಲಾ ಮೂರು ಮೂರು ಜನರ ಗುಂಪಾಗಿ ನಿಂತುಬಿಡುತ್ತಾರೆ. ಹಾಗೆಯೇ ಮತ್ತೇ ಸುತ್ತುತ್ತಾ ಸುತ್ತುತ್ತಾ ಎಷ್ಟಷ್ಟ ಎಷ್ಟು ಎಂದು ಕೇಳಲಾಗಿ ಆಗ ಅವನು ನಾಲ್ಕು ಎನ್ನುತ್ತಾರೆ. ಆಗ ಸುತ್ತುತ್ತಿರುವವರೆಲ್ಲಾ ನಾಲ್ಕು ನಾಲ್ಕು ಜನರ ಗುಂಪಾಗಿ ನಿಂತುಬಿಡುತ್ತಾರೆ. ಹೀಗೆ ಸುತ್ತುವಾಗ ಒಳಗಿರುವ ಕಳ್ಳ ಹೇಳಿದ ಸಂಖ್ಯೆಯಂತೆ ಗುಂಪುಗಳಾಗಿ, ಆ ಗುಂಪಿಗೆ ಸೇರದೆ ಯಾರು ಉಳಿದು ಬಿಡುತ್ತಾರೋ ಅವರೇ ಸೋತಂತೆ.

**ಪಿಯೋ ಪಿಯೋ ಆಟ :** ಈ ಆಟದಲ್ಲಿ ಒಂದಿಷ್ಟು ಜನ ಕೈ ಕೈ ಹಿಡಿದು ಬುಗುಬುಗು ಎಂದು ಸುತ್ತುತ್ತಿರುತ್ತಾರೆ. ಆ ವೃತ್ತದ ಒಳಗೆ ಒಬ್ಬ ಕಳ್ಳನಿದ್ದು, ಅವನ ಕಣ್ಣಿಗೆ ಬಟ್ಟೆ ಕಟ್ಟಿ

ರುತ್ತಾರೆ. ಇಲ್ಲಿ ಒಬ್ಬ ಆಟದ ನಿರ್ದೇಶಕನಿರುತ್ತಾನೆ. ಒಬ್ಬನನ್ನು ಹಿಡಿದುಕೊಂಡ ಕಳ್ಳನಿಗೆ ನಿರ್ದೇಶಕ ಕೇಳುತ್ತಾನೆ. ಇವನ ಹೆಸರೇನು? ಎಂದು ತಪ್ಪು ಹೇಳಿದರೆ ಆಗ ಇವನು 'ಅಲ್ಲ' ಎನ್ನುತ್ತಾನೆ ನಿರ್ದೇಶಕ. ಆಗ ಪುನಃ ಮೊದಲಿನಂತೆ ಒಟ್ಟಾಗಿ ಕೂಡಿಕೊಂಡು ಪಿಯೋ ಪಿಯೋ ಎನ್ನುತ್ತಾ ಸುತ್ತುತ್ತಿರುತ್ತಾರೆ. ಕಳ್ಳನಾದವನು ತಾನು ಹಿಡಿದುಕೊಂಡ ವ್ಯಕ್ತಿಯ ಹೆಸರು ಹೇಳಲು ತಲೆಯಿಂದ ಕಾಲುವರೆಗೆ ತನ್ನ ಕೈಯಿಂದ ಹೆಸರು ಹೇಳಲು ತಲೆಯಿಂದ ಕಾಲಿನವರೆಗೆ ತನ್ನ ಕೈಯಿಂದ ತಡವರಿಸಬಹುದು. ಹೆಸರು ಹೇಳಿಸಿಕೊಂಡ ವ್ಯಕ್ತಿ ಪುನಃ ಕಳ್ಳನಾಗಿ ಬೇರೆಯವರು ಹಿಡಿದುಕೊಂಡು ಹೆಸರು ಹೇಳಬೇಕಾಗುತ್ತದೆ. ಹೀಗೆ ಈ ಆಟದ ಮನೋರಂಜನೆಯು ಮುಂದುವರೆಯುತ್ತದೆ.

**ಸುರ್ ಸುರ್ ಬತ್ತಿ ಆಟ :** ಈ ಆಟದಲ್ಲಿ ಒಬ್ಬರ ಹಿಂದೆ ಒಬ್ಬರಂತೆ ಮಕ್ಕಳು ಹತ್ತಿರ ಸಾಲಾಗಿ ತಮ್ಮ ಕೈಗಳನ್ನು ಹಿಂದಕ್ಕೆ ಇಟ್ಟುಕೊಂಡು ಕುಳಿತುಕೊಂಡಿರುತ್ತಾರೆ. ಇದರಲ್ಲಿ ಕೈಮುಟ್ಟಿ ಉಲ್ಟಾ ಪಲ್ಟಾ ಹಾಕುವ ಮೂಲಕ ಒಬ್ಬನನ್ನು ಕಳ್ಳನನ್ನಾಗಿ ಮಾಡಿರುತ್ತಾರೆ. ಇನ್ನೊಬ್ಬ ಒಂದು ಕಲ್ಲನ್ನು ಹಿಡಿದು ಹಿಂದಕ್ಕೆ ಕೈಯಿಟ್ಟುಕೊಂಡಿರುವ ಯಾರ ಕೈಗಾದರೂ ಹಾಕಬಹುದು. ಎಲ್ಲರೂ ಕೈಗಳನ್ನು ಮುಚ್ಚಿಕೊಂಡಿರುತ್ತಾರೆ. ಯಾರ ಕೈಲಿ ಕಲ್ಲಿದೆ ಯೆಂಬುದನ್ನು ಗುರ್ತಿಸುವವರೆಗೂ ಕಳ್ಳನನ್ನು ಹುಡುಕುತ್ತಲೇ ಇರಬೇಕಾಗುತ್ತದೆ. ಕಲ್ಲು ಕೈಯಲ್ಲಿರುವವರನ್ನು ಗುರ್ತಿಸಿದರೆ ಆ ಜಾಗಕ್ಕೆ ಕಳ್ಳ ಕುಳಿತು, ಕಲ್ಲನ್ನು ಕೈಯಲ್ಲಿ ಹಿಡಿದು ಕೊಂಡಿದ್ದವನು ಕಳ್ಳನಾಗಿ ಆಟ ಮುಂದುವರಿಯುತ್ತದೆ. ಕಳ್ಳನಾದವನು ಕಲ್ಲನ್ನು ಕುಳಿತವರ ಕೈಗೆ ಹಾಕುವಾಗ ಮರೆಯಾಗುವಂತೆ ತಿರುಗಿ ನಿಂತಿರುತ್ತಾನೆ. ಕಲ್ಲು ಹಾಕಿದವನು

ಸುರ್ ಸುರ್ ಬತ್ತಿ
ಸುರಾಲ್ ಕೊಟ್ಟೆ
ಬಗಾಲ ಭದ್ರಂ, ಬಗಾಲ ಭದ್ರಂ
ಚಿನ್ನ ಚಿನ್ನ ಮಂಗಣಿ
ಚಿರಾಳ ಕೊಟ್ಟೆ
ರಾಳ ಕೊಟ್ಟೆ
ಬಗಾಲ ಭದ್ರಂ ಬಗಾಲ ಭದ್ರಂ

ಎಂದು ಹಾಡಿದ ಮೇಲೆ ತಿರುಗಿ ಕಲ್ಲು ಯಾರಲ್ಲಿರಬಹುದೆಂದು ಯೋಚಿಸುತ್ತಾ ಕಲ್ಲಿರುವವನನ್ನು ಹುಡಕಬೇಕಾಗುತ್ತದೆ. ಈ ಮೇಲೆ ಹೇಳಿದ ಹಾಡನ್ನು ಆಟ ಆಡಿಸುವ ನೇತೃತ್ವವನ್ನು ವಹಿಸಿದ ಹಿರಿಯರು ಹೇಳುತ್ತಾರೆ.

**ವಾಗನ್ ಖೇಲಿಯೋ :** ಇದು ಮರದ ಸುತ್ತ ಆಡುವ ಆಟವಾಗಿದೆ. ಮರದ ಸುತ್ತ ಮಕ್ಕಳು ಕುರಿಗಳಾಗಿ ಕುಳಿತಿರುತ್ತಾರೆ. ಕುರಿ ಸಾಕಿದವನೊಬ್ಬ ಈ ಆಟದಲ್ಲಿರುತ್ತಾನೆ. ಇವನಿಗೆ 'ಪಾಳವಾಳೋ' ಎಂದು ಕರೆಯುತ್ತಾರೆ. ಮತ್ತೊಬ್ಬ ಸೊಟೊ (ಕಳ್ಳ) ಕುರುಬ ತನ್ನ ಕುರಿಗಳನ್ನು ಮೇಯಿಸಿ ಮರದ ಕೆಳಗೆ ಬಿಟ್ಟು ಮರಕ್ಕೆ ತನ್ನ ಕುರಿಗಳನ್ನು ನೋಡಿಕೊಳ್ಳಲು ಹೇಳಿ ಊಟಕ್ಕೆ ಮನೆಗೆ ಹೋಗುತ್ತಾನೆ.

ಆಗ ಕಳ್ಳನಾಗಿರುವವನು ಕುರಿಗಳ ಬಳಿಗೆ ಬಂದು ಹುಲಿ ನಿನ್ನನ್ನು ತಿನ್ನಲು ಬಂದಿದೆ. ಬಾ ಹುಲಿ ಹೆಜ್ಜೆ ತೋರಿಸುತ್ತೇನೆ ಎಂದು ಕರೆದುಕೊಂಡು ಹೋಗತೊಡಗಿದಾಗ, ಅಲ್ಲಿರುವ ಮರ, ಹೋಗಬೇಡ ಅವನು ಮೋಸಗಾರ ನಿನ್ನ ತಿನ್ನೋಕ್ ಪ್ಲಾನ್ ಮಾಡ್ತಾನೆ ಅನ್ನುತ್ತೆ. ಹಂಗೆ ಹೇಳಿ ಕುರಿಗಳನ್ನೆಲ್ಲಾ ಖಾಲಿ ಮಾಡಿ ಬಿಡ್ತಾನೆ ಕಳ್ಳ ಆಮೇಲೆ ಕಳ್ಳ ಬಂದು ಮರಕ್ಕೆ ಕೇಳುತ್ತಾನೆ. ನನ್ನ ಕುರಿ ಎಲ್ಲಿ ಅಂತ? ಆಗ ಅಲ್ಲಿದ್ದ ಮರ ಆಗೋ ಅಲ್ಲಿದೆ ನಿನ್ನ ಕುರಿ ಎಂದು ತೋರಿಸಲು ಅಲ್ಲಿಗೆ ಬಂದ ಕುರುಬ ನನ್ನ ಕುರಿಗಳನ್ನು ನೀನು ಹೆಂಗೆ ಕೈದೊ ಎಂದು ಪ್ರಶ್ನಿಸುತ್ತದೆ. ಆಗ ಕಳ್ಳ ನಿನಗೆ ಯಾರು ಚಾಡಿ ಹೇಳಿದರು. ಎಂದು ಕೇಳಿದಾಗ ಕುರುಬ ನನಗೆ ಮರ ಹೇಳ್ತಾ ಇದೆ ಎಂದು ಹೇಳುತ್ತಾನೆ. ಆಗ ಕಳ್ಳ ಹೋಗಿ ಆ ಮರವನ್ನು ಸಿಟ್ಟಿನಿಂದ ಕಡಿದು ಹಾಕಿ ಬಿಡುತ್ತಾನೆ. ಆಗ ಕುರುಬ ಅಳುತ್ತಾ ಮನೆಗೆ ಹೋಗುತ್ತಾನೆ.

೪. ಕಾಕಡೀನು ಖೇಲ್

ಹಕ್ಕಿಪಿಕ್ಕಿಯರ ಭಾಷೆಯಲ್ಲಿ ಕಾಕಡೀನು ಖೇಲ್ ಎಂದರೆ ಸೌತೆಕಾಯಿ ಆಟ ಎಂದರ್ಥ. ಸಾಮಾನ್ಯವಾಗಿ ಈ ಆಟವನ್ನು ಮಕ್ಕಳು ಮಾತ್ರ ಆಡುತ್ತಾರೆ. ಆದರೆ ಆಗಾಗ ದೊಡ್ಡವರು ಸಹ ಇವರ ಜೊತೆಗೆ ಭಾಗಿಯಾಗಿರುತ್ತಾರೆ. ಈ ಆಟವು ಮುಖ್ಯವಾಗಿ ಬೆಳೆಗೆ (ವ್ಯವಸಾಯಕ್ಕೆ) ಸಂಬಂಧಿಸಿದ್ದಾಗಿದೆ. ಈ ಆಟದಲ್ಲಿ ಮಕ್ಕಳು ಸೌತೆಕಾಯಿಗಳಾಗಿ ಕುಳಿತಿರುತ್ತವೆ. ಹೀಗೆ ಕುಳಿತ ಮಕ್ಕಳ ಸಂಖ್ಯೆ ಎಷ್ಟಾದರೂ ಆಗಬಹುದು. ಈ ಸೌತೆಕಾಯಿಗಳ (ಮಕ್ಕಳ) ಹಿಂದೆ ಅದನ್ನು ಸಾಕಿದವನೊಬ್ಬ, ಅವುಗಳನ್ನು ಕಿತ್ತುಕೊಳ್ಳುವವನೊಬ್ಬ, ಹಾಗೂ ಒಬ್ಬ ರಾಜನಿರುತ್ತಾನೆ. ಈ ಮೂವರ ಸಂಭಾಷಣೆಯ ಮೂಲಕವೇ ಈ ಆಟವು ಮುಂದುವರೆಯುತ್ತದೆ. ಆ ಮೂವರು ಮಾಡುವ ಸಂಭಾಷಣೆಯನ್ನು ಈ ಕೆಳಗಿನಂತೆ ನಿರೂಪಿಸಬಹುದು.

ಸವತೆಕಾಯಿ ಬೆಳೆಸಿದವನು : ನಿಮ್ಮ ರಾಜ ಏನು ಹೇಳಿದ?

ಕೀಳುವವನು : ಸೌತೆಕಾಯಿ ಕೇಳಿಕೊಂಡು ಎತ್ತಿದ್ದ

ಬೆಳೆಸಿದವನು : ಸೌತೆಕಾಯಿಗಳು ಇನ್ನೂ ಎಂದೇಳಿ ರಾಜನ ಮುಂದೋಗಿ ಹೇಳುತ್ತಾನೆ.

ರಾಜ : ಇಲ್ಲ ನನಗೆ ಕಿತ್ತು ಕೊಡಲೇಬೇಕು.

ಕೀಳುವವನು : ಸೌತೆಕಾಯಿಯನ್ನು ಕಿತ್ತುಕೊಡು

ಬೆಳೆದವನು : ನೀನೇ ಕಿತ್ತುಕೋ ಹೋಗು

ಕೀಳುವವನು : ಕರಡೀ ಕಾಟುಸ್ಸರೀ ಹೊಳ್ಳಾಹೋ ಎಂದು ಹೇಳುತ್ತಾ ಒಂದೊಂದನ್ನೇ ಕಿತ್ತು ಹಾಕುತ್ತಾನೆ.

ಈ ರೀತಿಯಾಗಿ ಈ ಆಟದಲ್ಲಿ ಸಾಮಾನ್ಯ ಜನರ ಮೇಲೆ ರಾಜನ ಪ್ರಭುತ್ವ ಮತ್ತು ದೌರ್ಜನ್ಯಗಳು ಹೇಗೆ ಇರುತ್ತವೆ ಎಂಬುದನ್ನು ನಿರೂಪಿಸಿ ತೋರಿಸುತ್ತಾರೆ.

ಗೋಲಿ ಆಟ : ಈ ಆಟಕ್ಕೆ ಒಂದು ಪನ್ನವನ್ನು ತೋಡಿರುತ್ತಾರೆ. (ಪನ್ನ ಎಂದರೆ ಗೋಲಿ ಆಟದ ಸಲುವಾಗಿ ಮಾಡಿದ ಒಂದು ಚಿಕ್ಕ ಗುಂಡಿ) ಈ ಆಟದಲ್ಲಿ ಗುಂಡಿಯು ದಡದಿಂದ ಕೊರೆದಿರುವ ಒಂದು ಕೆರೆಯ ಕಡೆ ಎಲ್ಲರೂ ಗೋಲಿಯನ್ನು ಹೊಡೆಯುತ್ತಾರೆ. ಗೆರೆಗಿಂತ

ಈಚೆಗೆ ಇರುವವರು ಆ ಕಡೆಯಿಂದ ಮೊದಲು ಆಡುವ ಅರ್ಹತೆಯನ್ನು ಹೊಂದಿರುತ್ತಾರೆ. ಗೆರೆಯಿಂದ ದಾಟಿ ಮುಂದೆ ಹೋಗಿರುವ ಗೋಲಿಗಳ ಆಟಗಾರರು ನಂತರ ಆಡಬೇಕಾಗುತ್ತದೆ. ನಂತರ ಎಲ್ಲರೂ ಗೆರೆಯ ಮೇಲೆ ಬೆರಳಿಟ್ಟು ಆಟ ಆಡಬೇಕಾಗುತ್ತದೆ. ಒಂದನೆಯ ನಂಬರಿನ ಗೋಲಿ ಸೀದಾ ಖಾಡ್(ಗುಂಡಿ)ಗೆ ತುಂಬಿದರೆ ಅಥವಾ ಹಾಕಿದರೆ ಅದಕ್ಕೆ 'ಮಕ್ಕವಲ್ಲಿ' ಎಂದು ಕರೆಯುತ್ತಾರೆ. ಒಬ್ಬ ಬೇರೆ ಕೋಲಿಗೆ ಹೊಡೆದರೆ ಅವನಿಗೆ ಐದು ರುಂಡ (ನಂಬರ್) ಸಿಕ್ಕವು ಎಂದರ್ಥ. ಬೇರೆಯವರಿಗೆ ಹೊಡೆದ ಮೇಲೆ ಗುಂಡಿಗೆ ಬಂದು ಮುಳುಗಬೇಕು. ಮತ್ತೇ ಹತ್ತಿರ ಇದ್ದವರ ಗೋಲಿಗೆ ಮತ್ತೆ ಹೊಡೆಯಬೇಕು. ಮೊದಲನೆಯವರು ಹೊಡೆಯದೆ ಇದ್ದರೆ ಎರಡನೆಯವರು ಹೊಡೆಯಬೇಕು. ಗೋಲಿಗಳನ್ನು ಹೊಡೆಯುವ ಒಂದೊಂದು ಹೊಡೆತಕ್ಕೂ ಒಂದೊಂದು ನುಡಿಗಟ್ಟುಗಳು ಬಳಕೆ ಮಾಡುತ್ತಾರೆ.

ಹಕ್ಕಿಪಿಕ್ಕಿಯರು ಗೋಲಿಯಾಟವನ್ನು ಆಡುವಾಗ ಬಳಸುವ ನುಡಿಗಟ್ಟುಗಳನ್ನು ಈ ಕೆಳಗಿನಂತಿವೆ.

ಮಕ್ಕವಲ್ಲಿ
ನಕ್ಕ ನರಿ
ಐದು ರುಂಡ
ಆರ ಪತಿಗಾರ
ಏಳಂ ಬೇಳೆ
ಎಂಟು ಮೂರು ಸುಂಟಿ
ತಿಮ್ಮನ್ ತೇಲಿ
ಹಿಡಕೋ ನನ್ನ ಪೇಲಿ
ದರ್ಲ್ಲಿ ಮಾರೋ ಆಂಡ್

'ತಿಮ್ಮನ ತೆಲಿ ಹಿಡಕೋ ನನ್ನಪೇಲಿ' ಎನ್ನುತ್ತಿದ್ದಂತೆಯೇ ಅಲ್ಲಿದ್ದವರೆಲ್ಲಾ ಗೊಳ್ಳೊಂದು ನಗುತ್ತಾರೆ. ಯಾಕೆಂದರೆ ಹಿಡಕೋ ನನ್ನ ಪೇಲಿ ಎಂದರೆ ನನ್ನ ತೊರಡು ಹಿಡಕೋ ಎಂದರ್ಥ.

ಇಂತಹ ಏಳು ಗೇಮುಗಳನ್ನು ಹೊತ್ತು ಸೋತವನಿಗೆ 'ಹರಿಗೋ' ಎನ್ನುತ್ತಾರೆ. ಹಾಗೆಂದರೆ, ಆಟದಲ್ಲಿ ಸೋತವನು ಎಂದರ್ಥ. ಈ ಹರಿಗೋನನ್ನು ಕುಕ್ಕರ್‌ಗಾಲಿನಲ್ಲಿ ಕೂರಿಸಿ ಪನ್ನದಿಂದ ದೂರ ಇರುವ ಗೆರೆಯಿಂದ ಗೋಲಿಯನ್ನು 'ಹಾತಿನಿಡುಖಿಣಿ'(ಮೊಣಕೈ)ಯಿಂದ ಗೋಲಿಯನ್ನು ತಳ್ಳಿಸುತ್ತಾರೆ. ಆಗ ಅವನು ಕತ್ತರಿಯಾಕಾರದ ತನ್ನೆರಡು ಕಿವಿಗಳನ್ನು ಹಿಡಿದುಕೊಂಡು ಅಪರಾಧಿಯಾಗಿರುತ್ತಾನೆ.

**ಹಕ್ಕಿಪಿಕ್ಕಿಯರ ಕ್ರೀಡೆಗಳ ಸಾಮಾಜಿಕ ನೆಲೆಗಳು**

ಹಕ್ಕಿಪಿಕ್ಕಿಯರ ಈ ಎಲ್ಲಾ ಕ್ರೀಡೆಗಳು ಕೇವಲ ಮನರಂಜನೆಗೆ ಮಾತ್ರ ಸೀಮಿತವಾಗಿರದೆ, ಇನ್ನೂ ಅನೇಕ ಕಾರಣಗಳು ಈ ಕ್ರೀಡೆಗಳಲ್ಲಿ ಒಳಗೊಂಡಿವೆ. ಮೇಲ್ನೋಟಕ್ಕೆ ಈ ಕ್ರೀಡೆಗಳು ಮನರಂಜನೆಯಂತೆ ಕಂಡರೂ ಅವು ಮುಖ್ಯವಾಗಿ, ಒಂದು ಬುಡಕಟ್ಟಿನ, ಸಾಂಸ್ಕೃತಿಕ

ಪ್ರತಿನಿಧಿಯಾಗಿ ಪ್ರತಿಬಿಂಬಿಸುತ್ತವೆ. ಈ ಮೂಲಕ ಈ ಬುಡಕಟ್ಟಿನೊಳಗಣ ರಾಜಕೀಯ, ಆರ್ಥಿಕ ಏಳು ಬೀಳಿನ ಮುಖ್ಯ ವಿಮರ್ಶನ ಧಾರೆಗಳಾಗಿರುವುದನ್ನು ಗುರುತಿಸಬಹುದು. ಹಕ್ಕಿಪಿಕ್ಕಿಯರಂತಹ ಬುಡಕಟ್ಟುಗಳ ಕ್ರೀಡೆಗಳು ಹೀಗೆ ಒಂದು ವ್ಯವಸ್ಥೆಯನ್ನು ಅಣಕವಾಡುವ ನೆಲೆಯೇ ಕೆಳವರ್ಗದ ಹಿತಾಸಕ್ತಿಗಳಾಗಿ, ಅವೇ ಮುಂದೆ ಹೋರಾಟಗಳಾಗಿ ಪ್ರತಿಬಿಂಬಿತವಾಗುತ್ತವೆ ಎಂಬುದನ್ನು ಈ ಕ್ರೀಡೆಗಳಿಂದ ಗುರುತಿಸಬಹುದಾಗಿದೆ.

ಕ್ರೀಡೆಗಳು ಮತ್ತು ಹಕ್ಕಿಪಿಕ್ಕಿಯರ ಕಲಾವಂತಿಕೆ

ನಿರಂತರವಾಗಿರುವ ಹಕ್ಕಿಪಿಕ್ಕಿಯರ ಕ್ರೀಡೆಗಳು ಕರ್ನಾಟಕದ ಜನ ಜೀವನದಲ್ಲಿ ಇರುವ ಕ್ರೀಡೆಗಳನ್ನು ಒಳಗೊಂಡಿದೆ. ಹಾಗೆಯೇ ತಮ್ಮ ಕ್ರೀಡೆಗಳನ್ನು ಉಳಿಸಿಕೊಂಡಿವೆ. ಇವುಗಳಲ್ಲಿ ಆಧುನಿಕ ಕ್ರೀಡೆಯಾದ ಮೆಶಿನ್ ಆಟದಂತಹದ್ದನ್ನು ಗಮನಿಸಿದರೆ, ಕೈಗಾರಿಕೆಗಳ ಅವರ ಮೇಲೆ ಬೀರಿರುವ ಪ್ರಭಾವ ಎಷ್ಟರ ಮಟ್ಟಿನದೆಂಬುದು ತಿಳಿಯುತ್ತದೆ. ಅಲ್ಲದೇ ಕಾಕಡೀನು ಖೇಲ್‌ನಂತಹ ಆಟದಲ್ಲಿ ರಾಜತ್ವದ ಬಗ್ಗೆ ಪ್ರತಿರೋಧವಿರುವ ಅಂಶಗಳು ಕಂಡುಬರುತ್ತವೆ. ಅಂದರೆ ಇವರ ಬೇಟೆಗೆ ಸಂಬಂಧಿಸಿದ ಇಲ್ಲವೇ ಅವರದೇ ಆದ ಮೂಲ ಆಟಗಳಲ್ಲಿ ಒಂದು ಸಮುದಾಯದ (ಬುಡಕಟ್ಟಿನ) ಕ್ರಿಯಾಶೀಲತೆಯನ್ನು ಕಾಣಬಹುದಾಗಿದೆ.

# ೧೦

# ಸಮಸ್ಯೆ ಸಂಘಟನೆ ಪರಿಹಾರ

ಆಧುನಿಕ ಜಗತ್ತಿನ ಲೌಕಿಕ ಸವಲತ್ತುಗಳಿಂದ ವಂಚಿಸಲ್ಪಟ್ಟಿದ್ದರೂ ಸಹ ಬಹಳಷ್ಟು ಕಾಳಜಿಯಿಂದ ತಮ್ಮ ಅನನ್ಯತೆಯನ್ನು ಕಾಯ್ದುಕೊಳ್ಳಲು ಪ್ರಯತ್ನಿಸುತ್ತಿರುವ ಅನೇಕ ಸೋತ ಸಮುದಾಯಗಳಲ್ಲಿ ಹಕ್ಕಿಪಿಕ್ಕಿಯೂ ಒಂದಾಗಿದೆ. ಹೀಗೆ ಇನ್ನೂ ಅನೇಕ ಬುಡಕಟ್ಟುಗಳು ಪ್ರಯತ್ನಿಸುತ್ತಲೆ ಇವೆ. ಈ ಬುಡಕಟ್ಟುಗಳು ಅನೇಕ ಬೌದ್ಧಿಕ ಹಾಗೂ ದೈಹಿಕ ಚಮತ್ಕಾರಗಳನ್ನು ಕಟ್ಟಿಕೊಂಡಿವೆ. ಕೆಲವೇ ಕೆಲವು ಸಮುದಾಯಗಳ ಹಿತಾಸಕ್ತಿಗೆ ಇಂಡಿಯಾದ ಸಮಾಜದಲ್ಲಿ ಅನೇಕ ವಿಷಮ ಸ್ಥಿತಿಗಳು ರೂಪಗೊಂಡವು. ಸಾಮಾಜಿಕ ಸ್ಥಾನಮಾನಗಳಿಗೆ ಅನುಗುಣವಾಗಿ ಆರ್ಥಿಕ ಮತ್ತು ಶೈಕ್ಷಣಿಕ ಸವಲತ್ತುಗಳು ಲಭ್ಯವಾದವು. ಶ್ರೇಣೀಕರಣದ ಕೆಳಗಿನ ಅಂಚಿನ ಸಮುದಾಯಗಳಿಗೆ ಎಲ್ಲ ಬಗೆಯ ಲೌಕಿಕ ಅಧಿಕಾರಗಳು ಕೈಗೆ ಎಟುಕದಾದವು. ಸಾಮಾಜಿಕ ಕಾನೂನುಗಳು ವಿಧಿಸಿದ ಅತ್ಯಂತ ಕಠಿಣ ಮತ್ತು ಹೇಯ ದುಡಿಮೆಗಳಲ್ಲಿ ಈ ಸಮುದಾಯಗಳು ಅನಿವಾರ್ಯವಾಗಿ ನಿರತವಾಗಲೇ ಬೇಕಾಯಿತು.

**ಆರ್ಥಿಕ ಸ್ಥಿತಿಗತಿ**

ಆರ್ಥಿಕವಾಗಿ ತುಂಬಾ ಹಿಂದುಳಿದ ಹಕ್ಕಿಪಿಕ್ಕಿ ಸಮುದಾಯವರು ಇಂದಿಗೂ ಸಣ್ಣ ಪ್ರಮಾಣದ ಕೃಷಿ ಭೂಮಿ ಹೊಂದಿವೆ. ಆದರೆ ಆ ಕೃಷಿಭೂಮಿಗಳು ಹೆಚ್ಚು ಬಂಜರು ಭೂಮಿಗಳಾಗಿವೆ. ಸಮುದಾಯದ ಹೆಚ್ಚಿನ ಜನರು ಕೂಲಿಗಳನ್ನೇ ಅವಲಂಬಿಸಿದ್ದಾರೆ.

**ಪಶುಸಂಪನ್ಮೂಲ**

ಕೋಷ್ಟಕ: ೧೦.೧ ಹಕ್ಕಿಪಿಕ್ಕಿಯರ ಪಶುಸಂಪತ್ತು (೨೦೦೭)

| ಕ್ರ.ಸಂ. | ಪಶುಗಳು | ಸಂಖ್ಯೆ |
|---|---|---|
| ೧ | ಆಕಳು | ೪ |
| ೨ | ಎಮ್ಮೆ | ೯೨ |
| ೩ | ಕುರಿ | ೫ |
| ೪ | ಮೇಕೆ | ೯೨ |

ಬೇಟೆಯನ್ನೇ ಅವಲಂಬಿಸಿದ್ದ ಹಕ್ಕಿಪಿಕ್ಕಿ ಕುಟುಂಬಗಳು ಇತ್ತೀಚಿಗೆ ನೆಲೆ ನಿಲಲ್ಲು ತೊಡಗಿದನಂತರ ತಮ್ಮ ಆರ್ಥಿಕ ಜೀವನವನ್ನು ಸುಧಾರಿಸಿಕೊಳ್ಳಲು ಎಮ್ಮೆ, ಮೇಕೆ, ಕುರಿ, ಕೋಳಿಗಳನ್ನು ಸಾಕುತ್ತಾರೆ. ಕೆಲವೆ ಕೆಲವು ಕೃಷಿ ಕುಟುಂಬಗಳು ಆಕಳುಗಳನ್ನು ಸಾಕಿರುವುದನ್ನು ಕಾಣಬಹುದು. ಆಕಳು ಮತ್ತು ಎಮ್ಮೆಗಳಿಂದ ಬರುವ ಹೈನುತ್ಪಾದನೆಯಿಂದ ತಮ್ಮ ಆರ್ಥಿಕತೆಯನ್ನು ಅಲ್ಪ ಪ್ರಮಾಣದಲ್ಲಿ ಸುಧಾರಿಸಿಕೊಂಡಿದ್ದಾರೆ. ಕೆಲವು ಕುಟುಂಬಗಳು ಬೇಟೆಗಾಗಿ ನಾಯಿ ಮತ್ತು ಕೌಜುಗಳನ್ನು ಸಾಕುತ್ತಿದ್ದಾರೆ.

ಹಕ್ಕಿಪಿಕ್ಕಿ ಬುಡಕಟ್ಟು ಪರಿಶಿಷ್ಟ ವರ್ಗದ ಸೌಲಭ್ಯ ಪಡೆಯುವಲ್ಲಿ ವಿಫಲವಾಗಿದೆ ಎಂದು ಹೇಳಬಹುದು. ಇತ್ತೀಚೆಗಷ್ಟೇ ಈ ಸಮುದಾಯ ಒಂದು ಕಡೆ ನೆಲೆ ನಿಲ್ಲಲು ಪ್ರಯತ್ನಿಸುತ್ತಿದೆ. ಕೆಲವೊಂದು ಕುಟುಂಬಗಳಿಗೆ ಆಶ್ರಯ, ಅಂಬೇಡ್ಕರ್ ಆವಾಜ್ ಮುಂತಾದ ಯೋಜನೆಗಳಲ್ಲಿ ಲಾಭವಾಗಿದೆ.

## ಶೈಕ್ಷಣಿಕ ಸ್ಥಿತಿಗತಿ

**ಸಾಕ್ಷರತೆಗೆ ಅರ್ಹವಾದ ವ್ಯಕ್ತಿಗಳ ವಿವರ :** ಹಕ್ಕಿಪಿಕ್ಕಿ ಸಮುದಾಯದ ಒಟ್ಟು ಜನಸಂಖ್ಯೆ ೨೭೦೪ ಗೆ ಪುರುಷರು ಪ್ರಮಾಣವು ಶೇ ೫೦.೪೮ (೧೩೬೫) ಹಾಗೂ ಮಹಿಳೆಯರು ಪ್ರಮಾಣ ಶೇ ೪೯.೫೧ (೧೩೩೯) ರಷ್ಟಿದೆ. ಇದರಲ್ಲಿ ೦.೪ರ ಪ್ರಮಾಣದ ಮಕ್ಕಳು ಒಟ್ಟು ಶೇ ೧೭.೦೨ ರಷ್ಟಿದ್ದಾರೆ. ಈ ಮಕ್ಕಳನ್ನು ಶಿಕ್ಷಣ ಪಡೆಯಲು ಅರ್ಹವಲ್ಲದವರು ಎಂದು ಭಾವಿಸಲಾಗಿದೆ. ಸಾಕ್ಷರತೆ ಪಡೆಯಲು ಅರ್ಹವಾದವರ ಪ್ರಮಾಣ ಒಟ್ಟು ಶೇ ೮೨.೯೮ ರಷ್ಟಿದೆ. ಇದರಲ್ಲಿ ಪುರುಷ ಪ್ರಮಾಣವು ೮೨.೬೨ ರಷ್ಟಿದ್ದಾರೆ. ಮಹಿಳೆಯರ ಪ್ರಮಾಣ ಶೇ ೮೩.೨೮ ರಷ್ಟಿದೆ.

**ಸಾಕ್ಷರತೆಯ ಪ್ರಮಾಣ :** ಸಾಕ್ಷರತೆಯನ್ನು ಪಡೆದವರಲ್ಲಿ ಮೆಟ್ರಿಕ್ ಪೂರ್ವ ಶಿಕ್ಷಣವನ್ನು ಪಡೆದವರು ಹಾಗೂ ಮೆಟ್ರಿಕ್ ನಂತರದ ಶಿಕ್ಷಣ ಪಡೆದವರು ಎಂದು ವಿಂಗಡಿಸಲಾಗಿದೆ. ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲಾ ಶಿಕ್ಷಣ ಪಡೆದವರನ್ನು ಮೆಟ್ರಿಕ್ ಪೂರ್ವ ಶಿಕ್ಷಣದಲ್ಲಿಯೂ, ಪದವಿಪೂರ್ವ, ಡಿಪ್ಲೊಮಾ, ಪದವಿ, ಸ್ನಾತಕೋತ್ತರ, ಹಾಗೂ ಇತರ ರೀತಿಯಲ್ಲಿ ಶಿಕ್ಷಣ ಪಡೆದವರನ್ನು ಮೆಟ್ರಿಕ್ ನಂತರದ ಶಿಕ್ಷಣದಲ್ಲಿ ಸೇರಿಸಲಾಗಿದೆ.

ಹಕ್ಕಿಪಿಕ್ಕಿ ಸಮುದಾಯದಲ್ಲಿ ಮೆಟ್ರಿಕ್ ಪೂರ್ವಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳ ಪ್ರಮಾಣ ಒಟ್ಟು ಶೇ ೮೦.೧೨ ರಷ್ಟಿದೆ. ಅದರಲ್ಲಿ ಪುರುಷರು ೭೬.೪೧ ರಷ್ಟು ಹಾಗೂ ಮಹಿಳೆಯರು ಶೇ ೮೬.೯೫ ರಷ್ಟಿದ್ದಾರೆ. ಅಂದರೆ ಪುರುಷ ಪ್ರಮಾಣಕ್ಕಿಂತ ಮಹಿಳಾ ಪ್ರಮಾಣವೇ ಇಲ್ಲಿ ಹೆಚ್ಚಿದೆ. ಪ್ರಾಥಮಿಕ, ಮಾಧ್ಯಮಿಕ ಪ್ರೌಢ ಶಿಕ್ಷಣ ಪಡೆಯುತ್ತಿರುವ ಮಕ್ಕಳು ಯಾವ ಯಾವ ಪ್ರಮಾಣದಲ್ಲಿದ್ದಾರೆ. ಎಂಬುದನ್ನು ಈ ಕೆಳಗೆ ವಿವರಿಸಿಲಾಗಿದೆ.

**ಕೋಷ್ಟಕ: ೧೦.೨ ಸಮೀಕ್ಷೆಗೊಳಪಟ್ಟ ಹಕ್ಕಿಪಿಕ್ಕಿಯರ ಸಾಕ್ಷರತೆ ಪ್ರಮಾಣ (೨೦೦೭)**

| ವಿವರಗಳು | ಪುರುಷ | ಮಹಿಳೆ | ಒಟ್ಟು |
|---|---|---|---|
| ಸಾಕ್ಷರತೆಗೆ ಅನರ್ಹರು | ೨೩೬ | ೨೨೪ | ೪೬೦ |
| ಸಾಕ್ಷರ ಅರ್ಹರು | ೧೧೦೨ | ೧೧೧೫ | ೨೨೧೭ |
| ಸಾಕ್ಷರರು | ೨೧೨ | ೧೧೫ | ೩೨೭ |
| **ಮೆಟ್ರೀಕ್ ಪೂರ್ವ ಸಾಕ್ಷರತೆ** | ೧೬೨ | ೧೦೦ | ೨೬೨ |
| ಪ್ರಾಥಮಿಕ ಶಿಕ್ಷಣ | ೫೩೦ | ೩೬೪ | ೮೯೪ |
| ಮಾಧ್ಯಮಿಕ | ೩೪೧ | ೧೩೬ | ೪೭೭ |
| ಪ್ರೌಢ | ೨೦೯ | ೪೫ | ೨೫೪ |
| **ಮೆಟ್ರಿಕ್ ನಂತರದ ಸಾಕ್ಷರತೆ** | ೫೦ | ೧೫ | ೬೫ |
| ಪದವಿ ಪೂರ್ವ | ೩೦ | ೧೦ | ೪೦ |
| ಪದವಿ | ೧೦ | ೨ | ೧೨ |
| ಇತರೆ | ೧೦ | ೩ | ೧೩ |
| **ಅನಕ್ಷರರು** | ೮೯೦ | ೧೦೦೦ | ೧೮೯೦ |
| ರಾಜ್ಯದ ಸರಾಸರಿ ಸಾಮಾನ್ಯ ಸಾಕ್ಷರತೆ ಪ್ರಮಾಣ (೨೦೦೧) | ೭೬.೨೯ | ೫೭.೪೫ | ೬೬.೦೪ |
| ಹಕ್ಕಿಪಿಕ್ಕಿ ಸಮುದಾಯದ ಸರಾಸರಿ ಸಾಕ್ಷರತೆ ಪ್ರಮಾಣ (೨೦೦೭) | ೧೯.೨೩ | ೧೦.೩೧ | ೧೪.೭೪ |
| ಈ ಸಮುದಾಯ ಮತ್ತು ರಾಜ್ಯದ ಸರಾಸರಿ ಸಾಕ್ಷರತೆ ಪ್ರಮಾಣದ ನಡುವಿನ ಅಂತರ | | | ೫೨.೩ |
| ರಾಜ್ಯದ ಸರಾಸರಿ ಪರಿಶಿಷ್ಟ ಪಂಗಂಡದ ಸಾಕ್ಷರತೆ ಪ್ರಮಾಣ (೨೦೦೧) | ೫೯.೭ | ೩೬.೬ | ೪೮.೩ |
| ಈ ಸಮುದಾಯ ಮತ್ತು ರಾಜ್ಯದ ಸರಾಸರಿ ಪರಿಶಿಷ್ಟ ಪಂಗಡದ ಸಾಕ್ಷರತೆ ಪ್ರಮಾಣದ ನಡುವಿನ ಅಂತರ | | | ೩೩.೫೬ |

ಸಾಕ್ಷರತೆಯನ್ನು ಪಡೆಯಲು ಅರ್ಹರಾದವರ ಪ್ರಮಾಣ ಶೇ ೮೨.೯೯ ರಷ್ಟಿದ್ದು ಇದರಲ್ಲಿ ಸಾಕ್ಷರತೆಯನ್ನು ಪಡೆದವರ ಪ್ರಮಾಣ ಕೇವಲ ಒಟ್ಟು ಶೇ ೧೪.೭೪ ರಷ್ಟು ಮಾತ್ರವಿದ್ದು ಅದರಲ್ಲಿ ಸಾಕ್ಷರತೆ ಪಡೆದ ಪುರುಷರು ಶೇ ೧೯.೨೩ ಹಾಗೂ ಮಹಿಳೆಯರ ಪ್ರಮಾಣ ಶೇ ೧೦.೩೧ರಷ್ಟು ಮಾತ್ರ ಇರುವುದು ತಿಳಿದು ಬರುತ್ತದೆ.

## ರಾಜಕೀಯ ಸ್ಥಿತಿಗತಿ

ಕರ್ನಾಟಕದಲ್ಲಿ ಅತ್ಯಲ್ಪ ಜನಸಂಖ್ಯೆಯನ್ನು ಹೊಂದಿದ ಇವರಿಗೆ ಕನಿಷ್ಠ ಮಟ್ಟದಲ್ಲಿ ಒಂದು ಗ್ರಾಮ ಪಂಚಾಯ್ತಿ ಸದಸ್ಯರ ಸ್ಥಾನವೂ ದೊರೆತಿರವುದಿಲ್ಲ. ಈ ಸಮುದಾಯದಲ್ಲಿ ಕನಿಷ್ಠ ಶೇ ೪೭.೦೪ ರಷ್ಟು ಜನ ಮತದಾರರ ಪಟ್ಟಿಯಿಂದಲೇ ಹೊರಗುಳಿದಿದ್ದಾರೆ. ಬಹುಶಃ ಇದಕ್ಕೆ ಕಾರಣ ಇವರ ಅಲೆಮಾರಿತನವೇ ಆಗಿದೆ. ಒಂದೇ ಊರಿನಲ್ಲಿ ನೆಲೆನಿಲ್ಲದ ಈ ಸಮುದಾಯ ಇಂದಿಗೂ ಚುನಾವಣೆಯ ಕುರಿತಾಗಿ ಪೂರ್ಣಪ್ರಜ್ಞೆಯನ್ನು ಇಲ್ಲವೆಂದೇ ಹೇಳಬಹುದು.

## ಮತದಾನ ಸೌಲಭ್ಯ ಪಡೆದವರ ವಿವರ

ಹಕ್ಕಿಪಿಕ್ಕಿ ಸಮುದಾಯದಲ್ಲಿ ೧೮ರಯೊಳಗಿನ ವಯೋಮಾನದವರು ಒಟ್ಟು ಶೇ ೪೭.೬೩ ರಷ್ಟಿದ್ದಾರೆ. ಇವರಲ್ಲಿ ಪುರುಷರು ೪೯.೦೧ ರಷ್ಟಿದ್ದಾರೆ. ಮಹಿಳೆಯರು ೪೬.೨೩ ರಷ್ಟಿದ್ದಾರೆ. ಇವರಿಗೆ ಸಂವಿಧಾನದ ಪ್ರಕಾರ ಮತದಾನ ಮಾಡುವ ಹಕ್ಕಿರುವುದಿಲ್ಲವಾದರಿಂದ ಇವರನ್ನು ಮತದಾನ ಮಾಡಲು ಅರ್ಹವಿಲ್ಲದವರ ಗುಂಪಿನಲ್ಲಿಡಲಾಗಿದೆ.

**ಕೋಷ್ಟಕ: ೧೦.೩ ಸಮೀಕ್ಷೆಗೊಳಪಟ್ಟ ಹಕ್ಕಿಪಿಕ್ಕಿಯರ ಮತದಾರರ ವಿವರ (೨೦೦೭)**

| ವಿವರ | ಪುರುಷ | ಮಹಿಳೆ | ಒಟ್ಟು |
|---|---|---|---|
| ೧೮ ವರ್ಷ ಒಳಗಿನ ಗುಂಪು | ೬೬೯ | ೬೧೯ | ೧೨೮೮ |
| ಮತದಾನ ಮಾಡಲು ಅರ್ಹರ ಗುಂಪು | ೬೯೬ | ೭೨೦ | ೧೪೧೬ |
| ಮತದಾರರ ಪಟ್ಟಿಯಲ್ಲಿರುವ ಗುಂಪು | ೪೦೦ | ೩೫೦ | ೭೫೦ |
| ಮತದಾರ ಪಟ್ಟಿಗೆ ಸೇರದ ಗುಂಪು | ೨೯೬ | ೩೭೦ | ೬೬೬ |

ಮತದಾರ ಪಟ್ಟಿಯಲ್ಲಿ ಸೇರಿದ ಹಕ್ಕಿಪಿಕ್ಕಿ ಸಮುದಾಯದ ಪುರುಷರು ಶೇ ೫೭.೪೭ರ ಪ್ರಮಾಣದಲ್ಲಿದ್ದರೆ ಮಹಿಳೆಯರು ಶೇ ೪೮.೬೧ ರಷ್ಟಿದ್ದಾರೆ. ಮತದಾರರ ಪಟ್ಟಿಯಲ್ಲಿರುವವರ ಒಟ್ಟು ಪ್ರಮಾಣವು ಶೇ ೫೨.೯೭ ರಷ್ಟಿದೆ.

ಈ ಸಮುದಾಯದಲ್ಲಿ ಶೇ ೪೭.೦೪ ರಷ್ಟು ಜನರು ಇಂದಿಗೂ ಮತದಾರರ ಪಟ್ಟಿಯಿಂದ ಹೊರಗುಳಿದಿದ್ದಾರೆ. ಇವರಲ್ಲಿ ಪುರುಷರು ಶೇ ೪೨.೫೩ ಹಾಗೂ ಮಹಿಳೆಯರು ಶೇ ೫೧.೩೯ ರಷ್ಟಿದ್ದಾರೆ. ಅಂದರೆ ಮತದಾರರ ಪಟ್ಟಿಯಿಂದ ಇನ್ನೂ ಅರ್ಧದಷ್ಟು ಜನ ಹೊರಗುಳಿದಿರುವುದು ತಿಳಿದು ಬರುತ್ತದೆ.

ಪ್ರಸ್ತುತ ಈ ಕೃತಿಯ ಉದ್ದಕ್ಕೂ ಹಕ್ಕಿಪಿಕ್ಕಿ ಬುಡಕಟ್ಟಿನ ಬದುಕಿನ ಅನೇಕ ವಿವರಗಳನ್ನು ಕೊಡಲು ಪ್ರಯತ್ನಿಸಿದ್ದೇವೆ. ಕೆಳಜಾತಿ, ಶ್ರಮಿಕ ವರ್ಗಗಳು ಸಹಜವಾಗಿ ಪಕ್ಕ ನಾಥ ಪಂಥದ ಪ್ರಭಾವಗಳನ್ನು ಮೈಗೂಡಿಸಿಕೊಂಡಿರುತ್ತವೆ. ರಾಜಸ್ಥಾನ, ಗುಜರಾತ್, ಮಹಾರಾಷ್ಟ್ರ ದಕ್ಷಿಣದ ಅಂಚಿನಿಂದ ಕರ್ನಾಟಕದ ಕಡೆಗೆ ವಲಸೆಬಂದ ಅನೇಕ ಅಲೆಮಾರಿ ಸಮುದಾಯಗಳಲ್ಲಿ ಹಕ್ಕಿಪಿಕ್ಕಿ ಸಮುದಾಯವು ಒಂದು ಪ್ರಮುಖವಾಗಿದೆ. ಈ ರೀತಿಯಾಗಿ ವಲಸೆ ಬಂದ ಹಕ್ಕಿಪಿಕ್ಕಿ

ಸಮುದಾಯವು ಅನೇಕ ಉಪಕಸುಬುಗಳನ್ನು ಅವಲಂಬಿಸಿ ಬದಕಲಾರಂಭಿಸಿದವು. ಆದರೆ ಯಾವತ್ತೋ, ಎಲ್ಲೋ ಕೋವಶವಾಗುವ ವ್ಯವಸ್ಥೆ ರೂಪುಗೊಳ್ಳಲೇ ಇಲ್ಲ. ಭಾರತಕ್ಕೆ ಸ್ವಾತಂತ್ರ್ಯಬಂದು ೬೦ ವರ್ಷಗಳ ಸಮೀಪಿಸುತ್ತಿದ್ದರೂ, ಭಾರತದ ರಾಜಕಾರಣವೂ ಈ ಬಗೆಯ ಸಮುದಾಯಗಳ ಕುರಿತು ಕಣ್ಣಿದ್ದು ಕುರುಡಾಗಿ, ಬಹಳ ಸಲ ಇವುಗಳ ಬಗ್ಗೆ ಅಮಾನವೀಯವಾಗಿಯೇ ವರ್ತಿಸಿವೆ ಎಂದರೆ ತಪ್ಪಾಗದು. ಈಶಾನ್ಯ ಭಾರತದಲ್ಲಿ ಇನ್ನೂ ಆದಿವಾಸಿಗಳ ಸ್ವಾಯತ್ತ ಜೀವನದ ಕನಸುಗಳು ಸಾಕಾರಗೊಂಡಿಲ್ಲ. ಇನ್ನು ಅವರನ್ನು ಅಭಿವೃದ್ಧಿಪಡಿಸಿ ಸಮಾಜದ ಮುಖ್ಯವಾಹಿನಿಗೆ ತರಬೇಕೆಂದು ಹೇಳುವ ಘೋಷಣೆಗಳು ಬರೀ ಬುರುಡೆಗಳಾಗಿಯೇ ಉಳಿದಿವೆ. ಭಾರತ ದೇಶದ ಅಭಿವೃದ್ಧಿ ನೀತಿಯೇ ಮುಖ್ಯವಾಗಿ ವಸಾಹತು ಆಡಳಿತದ ಭಾಗವಾಗಿಯೇ ರೂಪುಗೊಂಡಿದ್ದು, ಈ ಕಾರಣಕ್ಕೆ ಈ ಅಭಿವೃದ್ಧಿ ಪರಿಕಲ್ಪನೆಗೆ ಅನೇಕ ಎಡುರುತೊಡುರುಗಳು ಮೈಗೂಡಿವೆ. ಹೀಗಾಗಿ ಇಲ್ಲಿಯ ರಾಜಕಾರಣಕ್ಕೆ ಈ ಸಮುದಾಯಗಳ ಅಂತರಂಗವೇ ಇನ್ನೂ ಅರ್ಥವಾಗಿಲ್ಲ.

ಅಲೆಮಾರಿಗಳ ಚಾರಿತ್ರಿಕ ಬೆಳವಣಿಗೆ ಎಷ್ಟು ಸಂಕೀರ್ಣವೋ, ಅವುಗಳ ಅಭಿವೃದ್ಧಿ ಸಾಧಿಸುವ ಮಾರ್ಗವೂ ಸಹ ಅಷ್ಟೇ ಸಂಕೀರ್ಣವಾಗಿದೆ. ಭಾರತದ ಸಮಾಜದ ಚಾರಿತ್ರಿಕ ವಿಕಾಸದ ಯಾವುದೇ ಹಂತದಲ್ಲಿ ನೆಲೆತಪ್ಪಿ ಹೋದ ಹಕ್ಕಿಪಿಕ್ಕಿಯರ ಸಂಕೀರ್ಣ ಬದುಕು ಅನೇಕ ಜಟಿಲ ಸಮಸ್ಯೆಗಳಿಗೆ ಕಾರಣವಾಗಿದೆ. ವರ್ತಮಾನದಲ್ಲಿ ಸರ್ಕಾರಗಳು ರೂಪಿಸುವ ಬಹುತೇಕ ಯೋಜನೆಗಳು ಸರಿಯಾದ ರೀತಿಯಲ್ಲಿ ಇಂತಹ ಸಮುದಾಯಗಳಿಗೆ ತಲುಪುತ್ತಿಲ್ಲ. ಸಿದ್ಧ ಮಾದರಿಯ ಯೋಜನೆಗಳು ಪ್ರತಿ ಹಂತದಲ್ಲೂ ರಾಜಕೀಯ ಮಧ್ಯಪ್ರವೇಶ ಇಲ್ಲವೆ ಅನುಷ್ಠಾನದಲ್ಲಿರುವ ಲೋಪಗಳಿಂದಾಗಿ ಈ ಬಗೆಯ ಸಮುದಾಯಗಳಲ್ಲಿ ಅವು ತಲುಪುತ್ತಿಲ್ಲ. ಆಧುನಿಕ ಅಹಂ ಮತ್ತು ವಿಕ್ಷಿಪ್ತ ಆತ್ಮ ಪ್ರತ್ಯಯಗಳ ಮೂಲಕ ಅನುಷ್ಠಾನಗೊಳ್ಳುವ ಯೋಜನೆಗಳಿಗೆ ಹೃದಯವೇ ಇಲ್ಲವೆಂದರೆ ತಪ್ಪಾಗದು. ಈ ಬಗೆಯ ಸಾಂಪ್ರದಾಯಿಕ ಸೊಕ್ಕನ್ನು ಪರಂಪರಾಗತವಾಗಿ ವಿರೋಧಿಸುತ್ತಲೆ ಬಂದ ಈ ಬುಡಕಟ್ಟುಗಳು ಎಂದೂ ಅಭಿವೃದ್ಧಿ ಯೋಜನೆಗಳಿಗೆ ಸ್ಪಂದಿಸಲಾರವು.

೧. ಕರ್ನಾಟಕ ರಾಜ್ಯಕ್ಕಿಂತಲೂ ಗುಜರಾತ್, ರಾಜಸ್ಥಾನ, ಮಹಾರಾಷ್ಟ್ರ ಹಾಗೂ ಆಂಧ್ರಪ್ರದೇಶ ರಾಜ್ಯಗಳಲ್ಲಿ ಹಕ್ಕಿಪಿಕ್ಕಿಯರು ಹೆಚ್ಚಿನ ಸಂಖ್ಯೆಯಲ್ಲಿರುವುದು ತಿಳಿದುಬಂತು. ಜೊತೆಗೆ ಈ ಮೇಲಿನ ನಾಲ್ಕು ರಾಜ್ಯಗಳಲ್ಲಿರುವ ಹಕ್ಕಿಪಿಕ್ಕಿಯರು ಕರ್ನಾಟಕದ ಹಕ್ಕಿಪಿಕ್ಕಿಯರಿಗಿಂತ ಆರ್ಥಿಕವಾಗಿ ಮುಂದುವರೆದವರು ಎಂಬ ಅಂಶವು ತಿಳಿದು ಬಂತು.

೨. ಕರ್ನಾಟಕ ರಾಜ್ಯದಲ್ಲಿರುವಂತೆ ಬೇರೆ ಬೇರೆ ರಾಜ್ಯಗಳಲ್ಲಿಯೂ ಅನೇಕ ಬಗೆಬಗೆಯ ಹೆಸರುಗಳಿಂದ ಇವರು ಗುರುತಿಸಲ್ಪಡುತ್ತಿರುವುದು ಮನವರಿಕೆಯಾಯಿತು.

೩. ಈ ಬುಡಕಟ್ಟಿನಲ್ಲಿ ಸಂಘ, ಸಂಸ್ಥೆ ಮತ್ತು ಸಂಘಟನೆಗಳ ಕೊರತೆಗಳಿದ್ದು, ಧಾರ್ಮಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ಇನ್ನೂ ಬಹಳ ಹಿಂದುಳಿದವರಾಗಿದ್ದಾರೆ.

೪. ಹಕ್ಕಿಪಿಕ್ಕಿ, ಹರಣ್‌ಶಿಕಾರಿ, ಆಡವಿಚೆಂಚರು, ಮೇಲ್‌ಶಿಕಾರಿ, ವಾಗ್ರಿ ಇವೆಲ್ಲವುಗಳು ಒಂದೇ ಬುಡಕಟ್ಟಿನ ಬೇರೆ ಬೇರೆ ಹೆಸರುಗಳಾಗಿವೆ.

೫. ನಗರೀಕರಣ, ಆಧುನೀಕರಣ ಮತ್ತು ಜಾಗತೀಕರಣಗಳು ಕೇವಲ ಮೈಸೂರು ಜಿಲ್ಲೆಯಲ್ಲಿಯ ಹಕ್ಕಿಪಿಕ್ಕಿಯರನ್ನು ಬಿಟ್ಟರೆ, ಬೇರೆಲ್ಲೂ ಇವು ಈ ಬುಡಕಟ್ಟಿನ ಮೇಲೆ ಪ್ರಭಾವಬೀರಿಲ್ಲ.

೬. ಬದಲಾಗುತ್ತಿರುವ ಇಂದಿನ ದಿನಗಳಲ್ಲಿ, ಸರ್ಕಾರದ ಗಿರಿಜನ ಉಪಯೋಜನೆ ಟಿ.ಎಸ್.ಪಿ. ಅಡಿಯಲ್ಲಿ ಕೆಲವು ಕಡೆ ಆರ್ಥಿಕವಾಗಿ, ಸಾಮಾಜಿಕವಾಗಿ ಮುಂದು ಬರುತ್ತಿರುವುದು ಕಂಡು ಬಂದಿತು.

೭. ಪ್ರಸ್ತುತ ಸಾಮಾಜಿಕ ಪರಿಸರಕ್ಕೆ ತಕ್ಕಂತೆ ಈ ಬುಡಕಟ್ಟಿನವರು ಗುಡಿಸಲುಗಳ ಬದಲಾಗಿ ಮನೆಗಳು, ಅವಿಭಕ್ತ ಕುಟುಂಬಗಳ ಬದಲಿಗೆ ವಿಭಕ್ತ ಕುಟುಂಬಗಳಾಗಿ ಪರಿವರ್ತನೆಯಾಗುತ್ತಿವೆ.

**ಪರಿಹಾರೋಪಾಯಗಳು**

**೧. ಸಮಾಜದ ಕುರಿತು ಸೂಕ್ತ ಅಧ್ಯಯನಗಳು ನಡೆಯಬೇಕು :** ಸಮುದಾಯವನ್ನು ಕುರಿತು ಇವರೆಗೆ ಅಧ್ಯಯನಗಳು ನಡೆಯದೆ ಇರುವುದರಿಂದ ಸಮಗ್ರ ಅಧ್ಯಯನ ನಡೆಯಬೇಕಾಗಿದೆ.

**೨. ನೆಲೆಗಳ ನಿರ್ಮಾಣವಾಗಬೇಕು :** ಸಮುದಾಯವು ನಾಗರಿಕ ಸಮಾಜದ ಹೊರಗೆ ಇರಲು ಇಚ್ಛಿಸಿರುವುದರಿಂದ ಮತ್ತು ತನ್ನಲ್ಲಿರುವ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಮತ್ತು ಬೆಳೆಸಿಕೊಳ್ಳಲು ನಾಗರಿಕ ಸಮಾಜದ ಮಧ್ಯದಲ್ಲಿದ್ದು ಸಾಧ್ಯವಿಲ್ಲದೇ ಇರುವುದರಿಂದ ನಾಗರಿಕ ಸಮಾಜದ ಕನಿಷ್ಠ ೧ ಕಿ.ಮೀ. ಅಂತರದಲ್ಲಿ ಅಥವಾ ಪ್ರತ್ಯೇಕವಾಗಿ ಸಮಸ್ಯೆಗಳನ್ನು ನಿರ್ಮಾಣಮಾಡುವುದರಿಂದ ಈ ಸಮುದಾಯದ ಆಚಾರ ವಿಚಾರಗಳು ಅಲ್ಪಮಟ್ಟಿಗೆ ಉಳಿಯಲು ಸಾಧ್ಯವಾಯಿತು. ಇಲ್ಲದೇ ಇದ್ದರೆ ಈ ಮುಗ್ಧ ಸಮಾಜವು ಕೆಲವು ವರ್ಷಗಳಲ್ಲಿ ತನ್ನ ಭಾಷೆಯ ಅಸ್ತಿತ್ವವನ್ನೇ ಕಳೆದುಕೊಂಡು ಅಚ್ಚರಿ ಪಡುವಂತಿಲ್ಲ.

**೩. ಸೂಕ್ತ ಸರ್ಕಾರಿ ದಾಖಲೆಗಳು ದೊರೆಯಬೇಕು :** ಇಂದಿನ ನಾಗರಿಕ ಸಮಾಜದಲ್ಲಿ ಬದುಕಲು ಪ್ರಮುಖವಾಗಿ ಸರ್ಕಾರಿ ದಾಖಲೆಗಳೇ ಇರಬೇಕು. ಆದರಿಂದ ಸಮಾಜದಲ್ಲಿ ಗುರುತಿನ ಚೀಟಿಗಳ ವಿತರಣೆ ಸಮರ್ಪಕವಾಗಬೇಕು.

೪. ಪ್ರತಿ ಕುಟುಂಬಕ್ಕೆ ಅಂತ್ಯೋದಯ ಪಡಿತರ ಚೀಟಿ ದೊರೆಯ ಬೇಕು.

**೫. ವಿದ್ಯಾಭ್ಯಾಸ :** ಸಮುದಾಯದ ನೆಲೆಗಳಲ್ಲಿ ೫ ವರ್ಷ ಕೆಳಗಿನ ಮಕ್ಕಳಿಗಾಗಿ ಬಾಲವಾಡಿ, ಅಂಗನವಾಡಿ ಕೇಂದ್ರಗಳ ನಿರ್ಮಾಣವಾಗಬೇಕು ಮತ್ತು ಅದಕ್ಕೆ ಸಹಾಯಕರ ಹುದ್ದೆಗೆ ಯಾವುದೇ ನಿಬಂಧನೆಗಳಿಲ್ಲದ ಸಮುದಾಯದವರನ್ನು ನೇಮಿಸಬೇಕು ಆಗ ಈ ಕಾರ್ಯಕ್ಕೆ ಒಂದು ಅರ್ಥ.

೬. ಸಮುದಾಯದ ನೆಲೆಗಳಲ್ಲಿ ವಯಸ್ಕರ ಶಿಕ್ಷಣ ಕೇಂದ್ರಗಳು ಜಾರಿಯಾಗಬೇಕು.

೭. ಸಮುದಾಯದ ವಿದ್ಯಾರ್ಥಿಗಳಿಗೆ ಯಾವುದೇ ಶಾಲಾ ಕಾಲೇಜು, ವಸತಿ ನಿಲಯಗಳಲ್ಲಿ ಮತ್ತು ಉನ್ನತ ಶಿಕ್ಷಣದಲ್ಲಿ ಯಾವುದೇ ಷರತ್ತುಗಳಿಲ್ಲದೆ ಪ್ರವೇಶ

ಅವಕಾಶ, ಉಚಿತ ಶಿಕ್ಷಣ ದೊರೆಯಬೇಕು. ಹಾಗೆಯೇ ಎಲ್ಲಾ ವಿಧವಾದ ಪ್ರೋತ್ಸಾಹ ದೊರೆಯಬೇಕು.

ಉ. ಸಮುದಾಯ ನೆಲೆಗಳಲ್ಲಿ ಗ್ರಂಥಾಲಯಗಳನ್ನು ನಿರ್ಮಾಣ ಮಾಡಬೇಕು ಮತ್ತು ಅದರ ನಿರ್ವಹಣೆಯನ್ನು ಸಮುದಾಯದವರಿಗೆ ನೀಡಬೇಕು.

**೫. ಸಮುದಾಯದ ಭವನ :** ಸಮುದಾಯದ ಅಳಿದುಳಿದ ಸಮಯದಲ್ಲಿ ಸಾಂಸ್ಕೃತಿಕ ಜೀವನವನ್ನು ಮೆಲಕು ಹಾಕಲು ಹಾಗೂ ಧಾರ್ಮಿಕ ಮತ್ತು ಸಾಮಾಜಿಕ ಆಚರಣೆಗಳನ್ನು ಕೈಗೊಳ್ಳಲು ವ್ಯವಸ್ಥಿತವಾದ ಸಮುದಾಯ ಭವನಗಳನ್ನು ನಿರ್ಮಿಸಬೇಕು.

**೬. ಮೂಲಭೂತ ಸೌಕರ್ಯ:** ಸಮುದಾಯದ ನೆಲೆಗಳಲ್ಲಿ ಅಗತ್ಯವಾಗಿರುವ ಎಲ್ಲಾ ವಿಧವಾದ ಅಂದರೆ ನಿವೇಶನಗಳು, ಮನೆಗಳು, ರಸ್ತೆಗಳು, ಚರಂಡಿಗಳು, ಕುಡಿಯುವ ನೀರು, ಸ್ಮಾಶನದಭೂಮಿ, ವಿದ್ಯುತ್ ಸಂಪರ್ಕ, ಇನ್ನಿತರ ಎಲ್ಲಾ ವಿಧವಾದ ಮೂಲಭೂತ ಸೌಕರ್ಯಗಳನ್ನು ನಿರ್ಮಿಸಬೇಕು.

**೭. ಭೂಮಿ :** ಮನುಷ್ಯನಿಗೆ ಏನೆ ಇದ್ದರು ಅವನ ಆರ್ಥಿಕ ಬದುಕು ಭದ್ರವಾಗಿರದೆ ಇದ್ದರೆ ಅವನ ಅಲೆಮಾರಿ ಜೀವನವನ್ನು ಯಾರಿಂದ ತಡೆಹಿಡಿಯಲ್ಲು ಸಾಧ್ಯವಿಲ್ಲ. ಆದರಿಂದ ಸಮುದಾಯದ ಪ್ರತಿ ಕುಟುಂಬಕ್ಕೆ ಅನುಗುಣವಾಗಿ ಕನಿಷ್ಠ ೧ ಹೆಕ್ಟರ್ ವ್ಯವಸಾಯ ಯೋಗ್ಯ ಭೂಮಿ ಮತ್ತು ಭೂಮಿಗೆ ಸಂಬಂಧಿಸಿದ ಬೇಲಿ, ಕೊಳವೆಬಾವಿ ಹಾಗೂ ಇನ್ನಿತರ ಮೂಲಸೌಕರ್ಯಗಳನ್ನು ದೊರೆಯಬೇಕು.

**೮. ಬೇಟೆಗೆ ಪ್ರೋತ್ಸಾಹ :** ಸಮುದಾಯ ಮೂಲವೇ ಬೇಟೆ. ಮೂಲತಃ ಕಾಡು ಮಾಂಸಹಾರವನ್ನು ತಿಂದು ಬದುಕುತ್ತಿದ್ದ ಸಮುದಾಯದ ಬೇಟೆಗಾರಿಕೆಗೆ ಇಂದಿನ ನಾಗರಿಕ ಸಮಾಜದ ಅರಣ್ಯ ಕಾನೂನುಗಳಿಂದ ಅವರ ಬದುಕುವ ಹಕ್ಕನ್ನು ಕಿತ್ತುಕೊಂಡಂತೆ ಆಗಿದೆ. ಆದರಿಂದ ಬೇಟೆಗೆ ಮುಕ್ತ ಅವಕಾಶ ಒದಗಬೇಕು.

**೯. ಅನುಸೂಚಿತ ಪ್ರದೇಶಗಳಾಗಿ ಘೋಷಣೆ:** ಸಮುದಾಯದ ವಾಸವಾಗಿರುವ ನೆಲೆಗಳನ್ನು ಅನುಸೂಚಿತಗಳೆಂದು ಘೋಷಿಸಬೇಕು.

**೧೦. ಪಂಚಾಯಿತಿ ಕಾಯ್ದೆ :** ಜಾರಿ ಸಮುದಾಯದಲ್ಲಿ ಮೂಲತಃ ಪಂಚಾಯಿತಿ ವ್ಯವಸ್ಥೆಯು ಈಗಿನ ನ್ಯಾಯಲಯ ವ್ಯವಸ್ಥೆ ಅಂತೆ ಇದೆ. ಬಹುಶಃ ಈ ಸಮುದಾಯ ದವರಿಂದಲೇ ತಿಳಿದು ನ್ಯಾಯಾಲಯ ವ್ಯವಸ್ಥೆಯನ್ನು ಸೃಷ್ಟಿಸಿರಬಹುದೋ ತಿಳಿಯದು ಹಾಗೂ ಪ್ರಾಚೀನ ಕಾಲದಿಂದಲೂ ಸಮುದಾಯವು ತನ್ನದೇ ಆದ ಪಂಚಾಯಿತಿ ಕಾಯ್ದೆ ಯನ್ನು ಅಳವಡಿಸಿ ಬಂದಿದ್ದು ಇದಕ್ಕೆ ಸರ್ಕಾರದ ಮನ್ನಣೆ ದೊರೆತು ಈ ಸಮುದಾಯದ ಪಂಚಾಯಿತಿ ಕಾಯ್ದೆಗೆ ಸೂಕ್ತ ಸ್ಥಾನಮಾನಗಳು ದೊರೆಯಬೇಕು ಹಾಗೂ ಇದು ಬುಡಕಟ್ಟು ಪಂಚಾಯಿತಿ ಕಾಯ್ದೆ ಜಾರಿಯಿಂದ ಮಾತ್ರ ಸಾಧ್ಯ.

**೧೧. ಸಣ್ಣ ಕೈಗಾರಿಕೆ ಮತ್ತು ಗುಡಿಕೈಗಾರಿಕೆ :** ಸಮುದಾಯದಲ್ಲಿ ಅಲೆಮಾರಿ ಬದುಕನ್ನು ಕೊನೆಗಾಣಿಸಬೇಕಾದರೆ ಈ ಕೆಳಕಂಡ ಉದ್ಯೋಗಗಳಿಗೆ ಪ್ರೋತ್ಸಾಹ ದೊರೆತಾಗ ಮಾತ್ರ ಸಾಧ್ಯವಾಗುತ್ತದೆ. ಅವುಗಳೆಂದರೆ

೧. ಪ್ಲಾಸ್ಟಿಕ್ ಸಂಬಂಧಿತ ಸಣ್ಣ ಕೈಗಾರಿಕೆಗಳ ನಿರ್ಮಾಣ

೨. ಪಶುಪಾಲನೆಗೆ ಪ್ರೋತ್ಸಾಹ ಮತ್ತು ಆದ್ಯತೆ

೩. ಹೈನುಗಾರಿಕೆ ಮತ್ತು ಕೋಳಿ ಸಾಕಣಿಕೆಗೆ ಪ್ರೋತ್ಸಾಹ ಮತ್ತು ಆದ್ಯತೆ

೪. ಮೀನುಗಾರಿಕೆಗೆ ಅಧಿಕ ಒತ್ತು ಕೊಟ್ಟು ಅಗತ್ಯ ತರಬೇತಿಗಳನ್ನು ನೀಡಿ ಸ್ಥಳೀಯ ಕೆರೆಗಳನ್ನು ಸಮುದಾಯಕ್ಕೆ ಮೀಸಲಿಡುವುದು. ಇಂತಹ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿಕೊಟ್ಟು ಈ ಜನರ ಉದ್ಯೋಗವನ್ನು ಪ್ರೋತ್ಸಾಹಿಸುವುದು.

**೧೨. ದತ್ತು ಗ್ರಾಮಗಳಾಗಿ ಆಯ್ಕೆ :** ಸಮುದಾಯದ ನೆಲೆಗಳನ್ನು ದತ್ತು ಗ್ರಾಮಗಳಾಗಿ ಆಯ್ಕೆ ಮಾಡಿ ಗ್ರಾಮದ ಸರ್ವಾಂಗೀಣ ಅಭಿವೃದ್ಧಿಯನ್ನು ಕೈಗೊಳ್ಳಬೇಕು.

**೧೩. ಸ್ವಯಂ ಉದ್ಯೋಗ :** ಸಮುದಾದಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಆಸಕ್ತಿ ಇದ್ದವರಿಗೆ ಅಗತ್ಯ ಪ್ರೋತ್ಸಾಹ ದೊರೆಯಬೇಕು.

## ಅಂಕಿಅಂಶಗಳು ೧. ಹಕ್ಕಿಪಿಕ್ಕಿ ಸಮುದಾಯದ ನೆಲೆಗಳವಾರು ಜನಸಂಖ್ಯೆ (೨೦೦೭)

| ಕ್ರ.ಸಂ. | ಜಿಲ್ಲೆ | ತಾಲೂಕು | ನೆಲೆಗಳು | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|---|---|
| ೧. | ಬೆಂಗಳೂರು ಗ್ರಾಮಾಂತರ | ಬೆಂಗಳೂರು ಗ್ರಾಮೀಣ | ಗೌರಿಪುರ | ೧೬೦ | ೪೧೨ | ೪೧೩ | ೮೨೫ |
| | | | ಭದ್ರಾಪುರ | ೧೫೦ | ೩೮೭ | ೩೮೮ | ೭೭೫ |
| ೨. | ಬೆಂಗಳೂರು ನಗರ | ಬೆಂಗಳೂರು ಪಟ್ಟಣ | ಕಂಗೇರಿ ಉಪನಗರ | ೧೨೦ | ೩೧೦ | ೩೧೧ | ೬೨೧ |
| ೩. | ಚಾಮರಾಜನಗರ | ಚಾಮರಾಜನಗರ | ಪಾಳ್ಯ ತಲವಾಡಿ ಹೋಬಳಿ | ೪೦ | ೧೦೩ | ೧೦೪ | ೨೦೭ |
| ೪. | ಚಿಕ್ಕಮಗಳೂರು | ಚಿಕ್ಕಮಗಳೂರು | ಮಲ್ಲೇನಹಳ್ಳಿ | ೮೦ | ೨೦೬ | ೨೦೭ | ೪೧೩ |
| ೫. | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ರಂಗೇನಹಳ್ಳಿ | ೫೦ | ೧೨೯ | ೧೨೯ | ೨೫೮ |
| ೬. | ದಾವಣಗೆರೆ | ಚನ್ನಗಿರಿ | ಅಸ್ತಾಪನಹಳ್ಳಿ * | ೧೪೪ | ೩೪೨ | ೩೧೫ | ೬೫೭ |
| | | | ಗೋಪನಾಳ್ | ೪೩ | ೧೧೧ | ೧೧೨ | ೨೨೩ |
| ೭. | ಹಾಸನ | ಹಾಸನ | ಅಂಗಡಿಹಳ್ಳಿ | ೮೦ | ೨೦೬ | ೨೦೭ | ೪೧೩ |
| ೮. | ಮೈಸೂರು | ಹುಣಸೂರು | ಪಕ್ಷಿರಾಜಪುರ * | ೮೫ | ೨೮೨ | ೨೫೯ | ೫೪೧ |
| | | | ಟೈಗರ್ ಬ್ಲಾಕ್ | ೯೦ | ೨೩೨ | ೨೩೩ | ೪೬೫ |
| | | | ಕಚ್ಚೇನಹಳ್ಳಿ | ೬೦ | ೧೫೫ | ೧೫೬ | ೩೧೧ |
| ೯. | ಶಿವಮೊಗ್ಗ | ಶಿಮಮೊಗ್ಗ | ಚಿಕ್ಕಮರಡಿ * | ೩೧೧ | ೭೪೧ | ೭೬೫ | ೧೫೦೬ |
| ೧೦. | ತುಮಕೂರು | ತುಮಕೂರು | ಕಾಶಿಪುರಗೇಟ್ | ೮೦ | ೨೦೬ | ೨೦೭ | ೪೧೩ |
| | | | ಒಟ್ಟು | ೧೪೯೩ | ೩೮೨೨ | ೩೮೦೬ | ೭೬೨೮ |

* ಸಮೀಕ್ಷೆಗೊಳಪಟ್ಟ ನೆಲೆಗಳು

ಅಂಕಿಅಂಶಗಳು ೨. ಹಕ್ಕಿಪಿಕ್ಕಿಯರ ಜಿಲ್ಲಾವಾರು ಲಿಂಗವಾರು ಗ್ರಾಮೀಣ ಮತ್ತು ನಗರ ಜನಸಂಖ್ಯೆ (೧೯೯೧)

| District | Rural | | | Urban | | | Total | | |
|---|---|---|---|---|---|---|---|---|---|
| | Male | F | Total | Male | F | Total | Male | F | Total |
| 01. Bangalore (R) | 334 | 304 | 638 | 0 | 0 | 0 | 334 | 304 | 638 |
| 02. Bangalore Urban | 93 | 99 | 192 | 254 | 236 | 490 | 347 | 335 | 682 |
| 03. Bellary | 30 | 29 | 59 | 181 | 143 | 324 | 211 | 172 | 383 |
| 04. Belgaum | 7 | 2 | 9 | 0 | 0 | 0 | 7 | 2 | 9 |
| 05. Bidar | 0 | 0 | 0 | 0 | 0 | 0 | 0 | 0 | 0 |
| 06. Bijapur | 2 | 4 | 6 | 0 | 0 | 0 | 2 | 4 | 6 |
| 07. Chikkamagalur | 59 | 52 | 111 | 5 | 6 | 11 | 64 | 58 | 122 |
| 08. Chitradurga | 0 | 0 | 0 | 3 | 4 | 7 | 3 | 4 | 7 |
| 09. Dakshina Kannada | 5 | 6 | 11 | 1 | 0 | 1 | 6 | 6 | 12 |
| 10. Dharwad | 18 | 16 | 34 | 0 | 0 | 0 | 18 | 16 | 34 |
| 11. Gulbarga | 27 | 26 | 53 | 0 | 0 | 0 | 27 | 26 | 53 |
| 12. Hassan | 242 | 207 | 449 | 2 | 4 | 6 | 244 | 211 | 455 |
| 13. Kodagu | 1 | 0 | 1 | 7 | 6 | 13 | 8 | 6 | 14 |
| 14. Kolar | 435 | 404 | 839 | 8 | 7 | 15 | 443 | 411 | 854 |
| 15. Mandya | 108 | 104 | 212 | 16 | 11 | 27 | 124 | 115 | 239 |
| 16. Mysore | 273 | 282 | 555 | 16 | 11 | 27 | 289 | 293 | 582 |
| 17. Raichur | 0 | 1 | 1 | 0 | 0 | 0 | 0 | 1 | 1 |
| 18. Shimoga | 447 | 428 | 875 | 55 | 35 | 90 | 502 | 463 | 965 |
| 19. Tumkur | 79 | 108 | 187 | 19 | 5 | 24 | 98 | 113 | 211 |
| 20. Uttara Kannada | 4 | 16 | 20 | 0 | 0 | 0 | 4 | 16 | 20 |
| **Karnataka Total** | **2164** | **2088** | **4252** | **567** | **468** | **1035** | **2731** | **2556** | **5287** |

## ಅಂಕಿಅಂಶಗಳು ೩. ಹಕ್ಕಿಪಿಕ್ಕಿಯರ ಲಿಂಗವಾರು ಜನಸಂಖ್ಯೆ (೨೦೦೧)

| District | Total | Male | F |
|---|---|---|---|
| 01 Bagalkot | 9 | 5 | 4 |
| 02 Bangalore Rural | 900 | 452 | 448 |
| 03 Bangalore Urban | 579 | 289 | 290 |
| 04 Bellary | 519 | 255 | 264 |
| 05 Belgaum | 19 | 8 | 11 |
| 06 Bidar | 16 | 8 | 8 |
| 08 Chamarajanagar | 94 | 48 | 46 |
| 09 Chikmagalur | 216 | 115 | 101 |
| 11 Dakshina Kannada | 47 | 27 | 20 |
| 12 Davanagere | 691 | 337 | 354 |
| 13 Dharwad | 11 | 7 | 4 |
| 16 Hassan | 799 | 413 | 386 |
| 18 Kodagu | 25 | 14 | 11 |
| 19 Kolar | 1,089 | 561 | 528 |
| 21 Mandya | 853 | 425 | 428 |
| 22 Mysore | 1,096 | 558 | 538 |
| 24 Shimoga | 898 | 443 | 455 |
| 25 Tumkur | 513 | 286 | 227 |
| 27 Uttara Kannada | 40 | 21 | 19 |
| **Karnataka Total** | **8,414** | **4,272** | **4,142** |

## ಅಂಕಿಅಂಶಗಳು ೪. ಪಾರ್ಧಿ ಸಮುದಾಯದ ನೆಲೆಗಳವಾರು ಜನಸಂಖ್ಯೆ (೨೦೦೭)

| ಕ್ರ.ಸಂ. | ಜಿಲ್ಲೆ | ತಾಲೂಕು | ನೆಲೆಗಳು | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|---|---|
| I | II | III | IV | V | VI | VII | VIII |
| ೧. | ಬಾಗಲಕೋಟೆ | | | ೩೬೨ | ೧೦೩೬ | ೯೯೦ | ೨೦೨೬ |
| | | ಬಾದಮಿ | ಕೆರೂರು | ೭೦ | ೧೭೬ | ೧೮೦ | ೩೫೬ |
| | | | ಖಾಜಿಬೂದಿಹಾಳ | ೨ | ೧೨ | ೫ | ೧೭ |
| | | | ಮಮಟಗೇರಿ | ೩೦ | ೯೦ | ೮೫ | ೧೭೫ |
| | | | ಗಾಂಧಿನಗರ ಸೆಟ್ಲಮೆಂಟ್ | ೧೨೦ | ೩೮೬ | ೪೦೩ | ೭೮೯ |
| | | ಬಾಗಲಕೋಟೆ | ಬೇವಿನಮಟ್ಟಿ | ೧೦ | ೨೦ | ೧೮ | ೩೮ |
| | | | ಕಡ್ಲೆಮಟ್ಟಿ ಸ್ಟೇಷನ್ | ೧೩ | ೩೮ | ೨೯ | ೬೭ |
| | | | ಕಲಾದಗಿ | ೭೬ | ೧೯೬ | ೧೭೨ | ೩೬೮ |
| | | | ಮುಚಖಂಡಿ | ೧೧ | ೨೯ | ೨೧ | ೫೦ |
| | | | ನೀರ್ಲಕೇರಿ | ೮ | ೨೩ | ೧೯ | ೪೨ |
| | | | ತುಳಸಿಗೇರಿ | ೪ | ೧೩ | ೧೦ | ೨೩ |
| | | | ಶಿರೂರು | ೯ | ೧೬ | ೧೮ | ೩೪ |
| | | ಹುನುಗುಂದ | ಕಂದಗಲ್ | ೫ | ೧೮ | ೧೧ | ೨೯ |
| | | | ಹುನುಗುಂದ | ೩ | ೧೩ | ೧೨ | ೨೫ |
| | | | ಕೋಡಿಹಾಳ್ | ೨ | ೬ | ೭ | ೧೩ |

| I | II | III | IV | V | VI | VII | VIII |
|---|---|---|---|---|---|---|---|
| ೨. | ಬಳ್ಳಾರಿ | | | ೨೦೧ | ೩೮೨ | ೪೮೭ | ೮೬೯ |
| | | ಬಳ್ಳಾರಿ | ಹರಿಶ್ಚಂದ್ರನಗರ | ೨೧ | ೩೦ | ೪೧ | ೭೧ |
| | | ಹೊಸಪೇಟೆ | ಹೊಸಪೇಟೆ | ೧೨ | ೨೪ | ೩೦ | ೫೪ |
| | | | ಕಾರಿಗನೂರು | ೪೦ | ೭೬ | ೯೦ | ೧೬೬ |
| | | | ಕಂಪ್ಲಿ | ೧೦೫ | ೨೧೦ | ೨೭೮ | ೪೮೮ |
| | | | ಸೋಪುರ | ೧೧ | ೨೩ | ೧೭ | ೪೦ |
| | | ಹಗರಿಬೊಮ್ಮನಹಳ್ಳಿ | ಯಡ್ರಾಮನಹಳ್ಳಿ | ೧೨ | ೧೯ | ೩೧ | ೫೦ |
| ೩. | ಬೀದರ | | | ೬೮ | ೧೯೫ | ೨೦೨ | ೩೯೭ |
| | | ಬಸವಕಲ್ಯಾಣ | ಬಸವಕಲ್ಯಾಣ | ೪೪ | ೧೦೬ | ೧೨೮ | ೨೪೪ |
| | | ಬೀದರ | ಗೌರತಾಂಡ | ೧ | ೨ | ೩ | ೫ |
| | | | ಬೀದರ | ೩ | ೯ | ೧೧ | ೨೦ |
| | | | ಚಿತ್ತಾ | ೬ | ೨೩ | ೨೪ | ೪೭ |
| | | | ಗುನಳ್ಳಿ | ೩ | ೯ | ೧೦ | ೧೯ |
| | | | ಕನ್ನಳ್ಳಿ | ೨ | ೮ | ೧೦ | ೧೮ |
| | | | ದುಬ್ಬಲಗುಂಡಿ | ೯ | ೨೮ | ೧೬ | ೪೪ |

| I | II | III | IV | V | VI | VII | VIII |
|---|---|---|---|---|---|---|---|
| ೪. | ಬಿಜಾಪುರ | | | ೨೧೦ | ೬೧೭ | ೬೬೧ | ೧೨೭೮ |
| | | ಬಿಜಾಪುರ | ಬಿಜಾಪುರ | ೧೫೬ | ೪೬೩ | ೪೯೮ | ೯೬೧ |
| | | | ಹಳೆ ಕೊಲ್ಲಾಪುರ | ೧೪ | ೩೮ | ೪೧ | ೭೯ |
| | | | ಹೊಸ ಕೊಲ್ಹಾರ | ೨೮ | ೮೧ | ೭೯ | ೧೬೦ |
| | | | ಅಪರ್ ಕೃಷ್ಣ ಪ್ರಾಜೆಕ್ಟ್ | ೧೨ | ೩೫ | ೪೩ | ೭೮ |
| ೫. | ಧಾರವಾಡ | | | ೫೦೮ | ೧೪೧೦ | ೧೩೩೦ | ೨೭೪೦ |
| | | ಹುಬ್ಬಳ್ಳಿ | ಹುಬ್ಬಳ್ಳಿ | ೮೦ | ೧೯೯ | ೨೦೧ | ೪೧೦ |
| | | | ಬಸಾಪುರ, ಕುಂದಗೋಳು | ೪೯ | ೧೦೮ | ೧೦೨ | ೨೧೦ |
| | | | ಬ್ಯಾಹಟ್ಟಿ | ೨೭ | ೮೮ | ೫೦ | ೧೬೮ |
| | | | ನಂದಗೋಕಲ | ೧೧ | ೨೧ | ೨೫ | ೪೬ |
| | | | ಉಣಕಲ್ | ೧೧ | ೩೭ | ೪೩ | ೮೦ |
| | | | ಇಂಗಳಗಿ | ೩೦ | ೮೩ | ೭೭ | ೧೬೦ |
| | | | ಅಳವಂಡಿ | ೧೨ | ೪೦ | ೩೭ | ೭೭ |
| | | ಅಣ್ಣಿಗೇರಿ | ಅಣ್ಣಿಗೇರಿ | ೩೬ | ೧೦೩ | ೯೯ | ೨೦೨ |
| | | | ಹಳೆಕುಸಗಲ್ | ೭ | ೧೯ | ೧೨ | ೩೧ |
| | | | ತಿರ್ಲಾಪುರ | ೧೫ | ೪೨ | ೩೪ | ೭೬ |
| | | | ಗಂಗಾಧರ ಸೆಟ್ಲಮೆಂಟ್ | ೨೦೪ | ೬೦೧ | ೫೫೨ | ೧೧೫೩ |

| I | II | III | IV | V | VI | VII | VIII |
|---|---|---|---|---|---|---|---|
| | | | ದಟ್ನಾಳ್ | ೨೬ | ೬೯ | ೫೮ | ೧೨೭ |
| | | ನರಗುಂದ | ನರಗುಂದ | ೧೮ | ೪೫ | ೪೦ | ೮೫ |
| ೬. | ಗದಗ | | | ೧೫೮ | ೪೨೧ | ೪೧೪ | ೮೩೫ |
| | | ಗದಗ | ಗಾಂಧೀನಗರ ಸೆಟ್ಲಮೆಂಟ್ | ೩೧ | ೭೯ | ೮೧ | ೧೬೦ |
| | | | ಹದ್ಲಾಪುರ | ೪ | ೧೨ | ೧೨ | ೨೪ |
| | | | ಹೊಂಬಳ | ೩೧ | ೮೩ | ೫೮ | ೧೪೧ |
| | | | ಲಕ್ಕುಂಡಿ | ೨ | ೯ | ೮ | ೧೭ |
| | | | ಮುಳಗುಂದ | ೧೧ | ೨೬ | ೨೭ | ೫೩ |
| | | | ನಾಗಸಮುದ್ರ | ೪ | ೧೦ | ೩೧ | ೪೧ |
| | | | ತಿಮ್ಮಾಪುರ | ೧೪ | ೫೪ | ೫೪ | ೧೦೮ |
| | | | ಚಿಟಕಿನ್ನಾಳ್ | ೪ | ೧೪ | ೧೪ | ೨೮ |
| | | | ಡಂಬಳ | ೨ | ೬ | ೨ | ೮ |
| | | | ಹಾರೋಗೇರಿ | ೨ | ೪ | ೬ | ೧೦ |
| | | | ಜಂತಲಿ ಶಿರೂರು | ೧೭ | ೩೪ | ೩೬ | ೭೦ |
| | | | ಪೇಟಾಲೂರ್ | ೧೭ | ೪೨ | ೪೨ | ೮೪ |
| | | | ವೆಂಕಟಾಪುರ | ೧ | ೩ | ೩ | ೬ |

| I | II | III | IV | V | VI | VII | VIII |
|---|---|---|---|---|---|---|---|
| ೭. | ಗುಲಬರ್ಗಾ | | | ೧೨೫ | ೩೭೫ | ೨೪೧ | ೭೧೬ |
| | | | ಅಜಂತಾಪುರ | ೬ | ೧೯ | ೧೪ | ೩೩ |
| | | | ಆಳಂದ | ೩ | ೯ | ೮ | ೧೭ |
| | | | ಹಡಗಿಲ್ | ೧೦ | ೧೯ | ೨೪ | ೪೩ |
| | | | ಸಾವಂಗಿ | ೧೩ | ೪೬ | ೩೯ | ೮೫ |
| | | | ಶೇಖಾಪುರ | ೬೦ | ೧೭೯ | ೧೭೪ | ೩೫೩ |
| | | | ಸುಪರ್‌ಮಾರ್ಕೆಟ್ | ೧೮ | ೫೦ | ೪೧ | ೯೧ |
| | | | ತಾಜ್ ಸುಲ್ತಾನಪುರ | ೧೫ | ೫೩ | ೪೧ | ೯೪ |
| ೮. | ಕೊಪ್ಪಳ | | | ೩೭ | ೯೭ | ೯೩ | ೧೯೦ |
| | | ಕೊಪ್ಪಳ | ಕೊಪ್ಪಳ | ೩೩ | ೮೬ | ೮೭ | ೧೭೩ |
| | | ಗಂಗಾವತಿ | ಲಿಂಗಾಪುರ | ೪ | ೧೧ | ೬ | ೧೭ |
| | | | ಒಟ್ಟು ಕರ್ನಾಟಕ | ೧೬೭೯ | ೪೫೩೩ | ೪೫೧೮ | ೯೦೫೧ |

ಅಂಕಿಅಂಶಗಳು ೫. ಪಾರ್ಧಿ... ಬುಡಕಟ್ಟಿನ ಜಿಲ್ಲಾವಾರು ಲಿಂಗವಾರು ಗ್ರಾಮೀಣ ಮತ್ತು ನಗರ ಜನಸಂಖ್ಯೆ (೧೯೯೧)

| District | Rural | | | Urban | | | Total | | |
|---|---|---|---|---|---|---|---|---|---|
| | Male | F | Total | Male | F | Total | Male | F | Total |
| 01. Bangalore Rural | 3 | 0 | 3 | 0 | 0 | 0 | 3 | 0 | 3 |
| 02. Bangalore Urban | 0 | 0 | 0 | 9 | 8 | 17 | 9 | 8 | 17 |
| 03. Bellary | 0 | 0 | 0 | 0 | 2 | 2 | 0 | 2 | 2 |
| 04. Belgaum | 4 | 7 | 11 | 0 | 0 | 0 | 4 | 7 | 11 |
| 05. Bidar | 98 | 109 | 207 | 40 | 35 | 75 | 138 | 144 | 282 |
| 06. Bijapur | 269 | 255 | 524 | 165 | 182 | 347 | 434 | 437 | 871 |
| 07. Chikkamagalur | 0 | 1 | 1 | 2 | 0 | 2 | 2 | 1 | 3 |
| 08. Chitradurga | 0 | 0 | 0 | 0 | 0 | 0 | 0 | 0 | 0 |
| 09. Dakshina Kannada | 1 | 0 | 1 | 0 | 0 | 0 | 1 | 0 | 1 |
| 10. Dharwad | 161 | 152 | 313 | 553 | 528 | 1081 | 714 | 680 | 1394 |
| 11. Gulbarga | 373 | 379 | 752 | 1 | 2 | 3 | 374 | 381 | 755 |
| 12. Hassan | 4 | 3 | 7 | 0 | 0 | 0 | 4 | 3 | 7 |
| 13. Kodagu | 4 | 1 | 5 | 1 | 0 | 1 | 5 | 1 | 6 |
| 14. Kolar | 0 | 0 | 0 | 0 | 0 | 0 | 0 | 0 | 0 |
| 15. Mandya | 0 | 0 | 0 | 0 | 0 | 0 | 0 | 0 | 0 |
| 16. Mysore | 2 | 0 | 2 | 5 | 3 | 8 | 7 | 3 | 10 |
| 17. Raichur | 0 | 0 | 0 | 2 | 3 | 5 | 2 | 3 | 5 |
| 18. Shimoga | 0 | 0 | 0 | 0 | 0 | 0 | 0 | 0 | 0 |
| 19. Tumkur | 0 | 0 | 0 | 0 | 0 | 0 | 0 | 0 | 0 |
| 20. Uttara Kannada | 0 | 0 | 0 | 0 | 0 | 0 | 0 | 0 | 0 |
| **Karnataka Total** | **919** | **907** | **1826** | **778** | **763** | **1541** | **1697** | **1670** | **3367** |

ಅಂಕಿಅಂಶಗಳು ೬. ಪಾರ್ಧಿ... ಬುಡಕಟ್ಟಿನ ಲಿಂಗವಾರು ಜನಸಂಖ್ಯೆ (೨೦೦೧)

| | District | Total | Male | F |
|---|---|---|---|---|
| 01 | Bagalkot | 1,400 | 700 | 700 |
| 03 | Bangalore Urban | 94 | 48 | 46 |
| 05 | Belgaum | 85 | 41 | 44 |
| 06 | Bidar | 240 | 115 | 125 |
| 07 | Bijapur | 659 | 321 | 338 |
| 13 | Dharwad | 1,795 | 929 | 866 |
| 14 | Gadag | 311 | 155 | 156 |
| 15 | Gulbarga | 807 | 417 | 390 |
| 19 | Kolar | 6 | 3 | 3 |
| 24 | Shimoga | 1 | - | 1 |
| 27 | Uttara Kannada | 5 | 4 | 1 |
| | **Karnataka Total** | **5,403** | **2,733** | **2,670** |

## ಮಾಹಿತಿದಾರರ ಸೂಚಿ

| ಹೆಸರು ಮತ್ತು ವಿಳಾಸ | ವಯಸ್ಸು | ಬೆಡಗು | ಕಸುಬು |
|---|---|---|---|
| ಶಣ್ಮರಿ<br>ಅಸ್ತಾಪನಹಳ್ಳಿ, ನಲ್ಲೂರು<br>ಚನ್ನಗಿರಿ ತಾ. ದಾವಣಗೆರೆ ಜಿ. | ೯೦ | ಗುಜರಾತ್ಯೋ | ಬೇಟೆ |
| ಮಾಂಜಾರು<br>ಅಸ್ತಾಪನಹಳ್ಳಿ, ನಲ್ಲೂರು<br>ಚನ್ನಗಿರಿ ತಾ. ದಾವಣಗೆರೆ ಜಿ. | ೭೭ | ಗುಜರಾತ್ಯೋ | ಬೇಟೆ |
| ಮುರುಗ್ಯಪ್ಪ<br>ಅಸ್ತಾಪನಹಳ್ಳಿ, ನಲ್ಲೂರು<br>ಚನ್ನಗಿರಿ ತಾ. ದಾವಣಗೆರೆ ಜಿ. | ೭೪ | ಗುಜರಾತ್ಯೋ | ಬೇಟೆ |
| ಜಯಲಾಲ್<br>ಕಾಶಪುರಂ<br>ತುಮಕೂರು ಜಿಲ್ಲೆ | ೩೦ | ಗುಜರಾತ್ಯೋ | ವ್ಯಾಪಾರ |
| ಸಂದ್ರೂಪಿ<br>ಪಕ್ಷಿರಾಜಪುರ<br>ಹುಣಸೂರು ತಾ. ಮೈಸೂರು ಜಿ. | ೭೦ | ಆಂಬೋವಾಳೊ | ಬೇಟೆ |
| ಶಿವಂಗು<br>ಅಸ್ತಾಪನಹಳ್ಳಿ, ನಲ್ಲೂರು<br>ಚನ್ನಗಿರಿ ತಾ. ದಾವಣಗೆರೆ ಜಿ. | ೭೫ | ಮೇವಾಡವಾಳೋ | ಬೇಟೆ |
| ಚಲ್ಕಾಬ<br>ಅಸ್ತಾಪನಹಳ್ಳಿ, ನಲ್ಲೂರು<br>ಚನ್ನಗಿರಿ ತಾ. ದಾವಣಗೆರೆ ಜಿ. | ೭೦ | ಮೇವಾಡವಾಳೋ | ಬೇಟೆ |
| ದೇವರಾಜ್<br>ಅಂಗಡಿಹಳ್ಳಿ, ಹಂಗರೆ ಅಂಚೆ<br>ಬೇಲೂರು ತಾ. ಹಾಸನ ಜಿಲ್ಲೆ | ೬೦ | ಮೇವಾಡವಾಳೋ | ಬೇಟೆ |
| ಅಗ್ರಜ<br>ಮಲ್ಲೇನಹಳ್ಳಿ<br>ಚಿಕ್ಕಮಗಳೂರು ಜಿಲ್ಲೆ | ೫೦ | ಮೇವಾಡವಾಳೊ | ಬೇಟೆ |

| | | | |
|---|---|---|---|
| ಬೀರ್ಯೋ<br>ಮಲ್ಲೇನಹಳ್ಳಿ<br>ಚಿಕ್ಕಮಗಳೂರು ಜಿಲ್ಲೆ | ೬೫ | ಮೇವಾಡವಾಳೊ | ಬೇಟೆ |
| ರಾಮ<br>ಮಲ್ಲೇನಹಳ್ಳಿ<br>ಚಿಕ್ಕಮಗಳೂರು ಜಿಲ್ಲೆ | ೪೫ | ಮೇವಾಡವಾಳೊ | ವ್ಯಾಪಾರ |
| ನಂಜುಂಡ<br>ಚಿಕ್ಕಮರಡಿ ಕ್ಯಾಂಪ್<br>ಹಸೂಡಿ, ಶಿವಮೊಗ್ಗ ಜಿಲ್ಲೆ | ೬೫ | ಕಾಳಿವಾಳೋ | ಬೇಟೆ |
| ಐಮರಿ<br>ಚಿಕ್ಕಮರಡಿ ಕ್ಯಾಂಪ್<br>ಹಸೂಡಿ, ಶಿವಮೊಗ್ಗ ಜಿಲ್ಲೆ | ೮೦ | ಕಾಳಿವಾಳೋ | ಬೇಟೆ |

# ಪರಾಮರ್ಶನ ಸೂಚಿ


ಕನ್ನಡ

ಉಮಾಪತಿ ಬಿ.ಇ.(ಲೇ), 'ಪರಿಶಿಷ್ಟ ಬುಡಕಟ್ಟುಗಳು, ಜಾತಿಗಳು', ನಾಯಕ, ಹಾ.ಮಾ. (ಪ್ರಸಂ), *ಕರ್ನಾಟಕ, ಕನ್ನಡ ವಿಷಯ ವಿಶ್ವಕೋಶ,* (ಮೈಸೂರು: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೭೯), ಪು.೪೮೯.

ಕಟ್ಟೀ, ವೆಂಕಟರಂಗೋ(ಅನು)., *ಗ್ಯಾಝೆಟೀಯರು ಮುಂಬಯೀ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು: ಧಾರವಾಡ ಬೆಳಗಾವಿ ವಿಜಾಪುರ ಕಾನಡಾ ಈ ನಾಲ್ಕು ಜಿಲ್ಲೆಗಳದ್ದು* (ಮುಂಬಯಿ: ಗವರ್ನಮೆಂತ ಸೆಂತ್ರಲ್ ಬುಕ್ ಡಿಪ್ಪೊ, ೧೮೯೩; ಪುನರ್ ಮುದ್ರಣ. ೧೯೮೪, ಹೊಸ ದೆಹಲಿ: ಏಷಿಯನ್ ಎಜುಕೇಷನಲ್ ಸರ್ವಿಸೆಸ್).

ಕೋಡಿರಾಂಪುರ, ರಂಗಾರೆಡ್ಡಿ.(ಲೇ), 'ಚೆಂಚು, ಚೆಂಚರು' ಲಕ್ಕಪ್ಪಗೌಡ ಎಚ್.ಜೆ.(ಪ್ರಸಂ), *ಕರ್ನಾಟಕ ಬುಡಕಟ್ಟುಗಳು* (ಬೆಂಗಳೂರು: ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೨೦೦೦) ಸಂಪುಟ ೨, ಪು.೭೦೪-೩೫.

ತಿಪ್ಪೇಸ್ವಾಮಿ, ಜಿ.ಆರ್.(ಲೇ), 'ಅಡವಿಚೆಂಚರು' ಲಕ್ಕಪ್ಪಗೌಡ ಎಚ್.ಜೆ.(ಪ್ರಸಂ), *ಕರ್ನಾಟಕ ಬುಡಕಟ್ಟುಗಳು* (ಬೆಂಗಳೂರು: ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೨೦೦೦) ಸಂಪುಟ ೨, ಪು.೭೩೯-೮೨.

ದಳವಾಯಿ, ರಾಜಪ್ಪ, *ಹಕ್ಕಿಪಿಕ್ಕಿಯರ ಸಂಸ್ಕೃತಿ* (ಬೆಂಗಳೂರು : ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೬).

ನಾಯಕ, ಡಿ.ಬಿ.(ಲೇ), 'ಹಕ್ಕಿಪಿಕ್ಕಿಯರು' ಲಕ್ಕಪ್ಪಗೌಡ ಎಚ್.ಜೆ.(ಪ್ರಸಂ), *ಕರ್ನಾಟಕ ಬುಡಕಟ್ಟುಗಳು* (ಬೆಂಗಳೂರು: ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೨೦೦೦) ಸಂಪುಟ ೨, ಪು.೧೮೧-೩೧.

ಪ್ರಶಾಂತ, ಎಚ್ ಡಿ (ಸಂ)., *ಜನಸಮುದಾಯ ಸಂಪುಟ* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೨೦೦೦).

ಬೆಟಗೇರಿ,ಪ್ರಹ್ಲಾದ., *ಅಡವಿಚೆಂಚರ ಸಂಸ್ಕೃತಿ* (ಬೆಂಗಳೂರು : ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೩).

ಮೈತ್ರಿ, ಕೆ ಎಂ., *ಬುಡಕಟ್ಟು ಕುಲಕಸುಬುಗಳು* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೨೦೦೨).

ರೈ, ಎ ಸುಬ್ಬಣ್ಣ...(ಸಂ)., *ದ್ರಾವಿಡ ನಿಘಂಟು* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೨೦೦೧).

ಸಣ್ಣರಾಮ., "ಲಂಬಾಣಿಗಳು :ಒಂದು ಅಧ್ಯಯನ ಸಾಂಸ್ಕೃತಿಕ ಮತ್ತು ಜಾನಪದ" ಕುವೆಂಪು ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ ಪದವಿಗಾಗಿ ಸಲ್ಲಿಸಿದ ಅಪ್ರಕಟಿತ ಮಹಾ ಪ್ರಬಂಧ, ೧೯೯೫.

ಹಂಪ, ನಾಗರಾಜಯ್ಯ., *ದ್ರಾವಿಡಭಾಷಾವಿಜ್ಞಾನ* (ಬೆಂಗಳೂರು: ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೧).

## English

Ananthakrishna Iyer, L K., *The Mysore Tribes and Castes* (Mysore: The Mysore University, 1930; rpt. 1998, New Delhi: Mittal Publications), 5 Vols.

*Brochure on Reservation for Scheduled Castes, Scheduled Tribes and other Categories of Backward Classes in Services and Posts* (Bangalore: Government Press, 1987).

*Brochure on Reservation and Concessions for Scheduled Castes, Scheduled Tribes and other Backward Classes*...(New Delhi: A Nabhi Publications, 2004).

Campbell, James M., *Bombay Gazetteer Karnataka (Dharwar)* (Bombay : Governament of Bombay Presidency, 1884).

Chamanlal B., *Gypsies ( Forgotten Children of India)* ( New Delhi : Publications Division, Governament of Indi,1962).

Devy, G N (Chairman)., Technical Advisory Group on Denotified Nomadic and Semi-nomadic Tribes Report, 2006 (New Delhi: Ministry of Social Justice and Empowerment, Government of India).

Enthoven, R E., *The Tribes and Castes of Bombay* (Bombay: Government Central Press,1922; rpt. 1975, Delhi: Cosmo Publications) 3 Vols.

Eustace J Kitts, *A Compendium of the Castes and Tribes found in India: Census of India 1881* (Byculla: Education Sociey Press,1885; rpt.1982, Gurgaon: The Academic Press, Gurgaon).

Ghurrye, G S., *The Scheduleds Tribes* (Bombay : Popular Prakashan, 1959).

Griesson, G A., *Linguistic Survey of India* ( first Edn. 1907) (Delhi; Motilal Banarasidas, 1968, ( Vol. IX Part III)

Hassan, S S., *The Castes and Tribes of H E H Nizam's Dominions* (Bombay: Government Central Press, 1920; rpt. 1989, New Delhi: Asian Educational Services).

Havanur, L G (Chairman)., *Karnataka Backward Classes Commission Report* (Bangalore: Government Press, 1975 ), 5 Vols.

Kittel, R.F., *A Kannada-English Dictionary* (Mangalore: Basel Mission Book & Tract Depository, 1894; rpt. 1993, New Delhi: Asian Educational Service).

Luiz A.A.D, *Tribes of Mysore,* (G.S.Viswa & Co., 1963), PP.171-79.

Macfarlane, E.W.E., 'Blood Groups Among Balahis (Weavers), Bhils, Korkus and Mundas with a note on Pardhis and Aboriginal Blood Types', *Journal of the Royal Asiatic Society of Bengal,* 7, 1941, PP.15-24.

Mann, R.S., 'Religion and Society in a Tribe of Trappers: The Hakkipikki of Mysore', *Journal of the Indian Anthropological Society,* 6(2), 1971.

--------, 'Gudlu Organization and Functions Among Hakkipikki' *Journal of Social Research* 16(2), 1973.

--------, *Hakkipikki Trapper and Seller* (Calcutta: Anthropological Survey of India, 1980).

Misra, P K, Rajalakshmi, C R, Verghese, I., *Nomads in the Mysore City* (Calcutta: Anthropological Survey of India, 1971).

Nagan Gowda, R (Chairman)., *Mysore Backward Classes Committee Report* (Bangalore: Government Press, 1979).

Nanjundayya, H V., *The Ethnographic Survey of Mysore* (Bangalore: Government Press, 1906).

Ravivarma Kumar (Chairman)., *The Karnataka State Commission for Backward Classes Special Report -2000* (Bangalore: Government Press, 2000).

Reddy, O Chinnappa (Chairman).,Report of the Karnataka Third Backward Classes Commission (Bangalore: Government Press, 1990), 2 Vols.

Risley, H H.,*The Caste and Tribes of Bengal* (Calcutta: Bengal Secretariat Press, 1891; rpt.1981, Calcutta: Firma Mukhopadhyay), vols

Russell, R V and Hiralal, *The Tribes and Castes of the Central Provinces of India* (London: Macmillan and Co., 1916; rpt. 1975, New Delhi:Cosmo Publications), vols

Sangave, V.A., 'Phanse-Pardhis of Kolhapur: A Tribe in Transition', *Sociological Bulletin,* 16(1), 1967, PP.81-8.

Shashi, S S., *The World of Nomads*(New Delhi: Lotus Press, 2006).

Simha, R.N., *Scheduled Castes and Scheduled Tribes(Prohibition of Transfer of Certain Lands) Act and Rules in Karnataka*(Bangalore: Sree Ambika Book House, 1999), PP.37, 42, 45.

Singh, K S., *The Scheduled Castes* (Delhi: Oxford University, Press,1993) People of Inida National Series, vol. 2

........, *The Scheduled Tribes* (Delhi: Oxford University, Press,1994) People of Inida National Series, vol. 3

........, *India's Communities* (Delhi: Oxford University, Press,1998) People of Inida National Series, vol.4-6.

........ (General Editor)., *People of India : Karnataka* (New Delhi: Anthropological Survey of India, 2003) Volume XXVI.

*The Annual Administration Report on the Working of the Criminal Tribes Act in the Bombay Presidency Part - I* (Bombay: Govt. Central Press, 1936)

